ಉಷಾ ಸಾಹಿತ್ಯ ಮಾಲೆ — ೨

# 'ಪಯಣದ ಹಾದಿಯಲ್ಲಿ'

ಎಸ್. ಅನಂತನಾರಾಯಣ ಬಿ. ಎ. (ಆನರ್ಸ್)

1946

ಉಷಾ ಸಾಹಿತ್ಯ ಮಾಲೆ
ಮೈಸೂರು

# ನಮ್ಮ ಮಾತು

ಶ್ರೀಮಾನ್ ಎಸ್. ಅನಂತನಾರಾಯಣ ಅವರ 'ಮುರುಕು ಮಂಟಪ' ಕಾದಂಬರಿ ನಮ್ಮ ಮಾಲೆಯಲ್ಲಿ ಬರಬೇಕಾಗಿತ್ತು. ಆದರೆ ಅವರದೇ ಆದ 'ಪಯಣದ ಹಾದಿಯಲ್ಲಿ' ಎಂಬ ಈ ಕಾದಂಬರಿಯನ್ನು ಅದರ ಬದಲು ಪ್ರಕಟಿಸುತ್ತಿದ್ದೇವೆ.

ಮಾಲೆ ಆರಂಭವಾಗಿ ಕೇವಲ ಎರಡು ತಿಂಗಳಾದುವು. ಸಕಾಲದಲ್ಲಿ ಉತ್ತಮ ಕಾದಂಬರಿಗಳನ್ನು ಪ್ರಕಟಿಸಲು ನಿಶ್ಚಯಿಸಿದ್ದೇವೆ. ಶ್ರೀಮಾನ್ ಅ. ನ. ಕೃಷ್ಣರಾಯರು ಬರೆದ 'ಕಣ್ಣೀರು' ಎಂಬ ಕಾದಂಬರಿ ನಮ್ಮ ಮೂರನೆಯ ಪುಸ್ತಕ.

'ಪಯಣದ ಹಾದಿಯಲ್ಲಿ' – ಮಲಮಗನೊಬ್ಬನ ದುಃಖ ಜೀವನ ಇಲ್ಲಿ ಚಿತ್ರಿತವಾಗಿದೆ. ಈ ಕಾದಂಬರಿಯನ್ನು ನಮ್ಮ ಮಾಲೆಯಲ್ಲಿಡಲು ಅನುಮತಿ ಕೊಟ್ಟ ಶ್ರೀಮಾನ್ ಎಸ್. ಅನಂತನಾರಾಯಣ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ರಾ. ವೆಂ. ಶ್ರೀನಿವಾಸ
ಸಂಪಾದಕ

ಮೈಸೂರು ನಗರ,
೧-೧೨-೧೯೪೬.

# ಮೊದಲ ಮಾತು

ಗೆಳೆಯ,

ಇದು ನನ್ನ ಎರಡನೆಯ ಸ್ವತಂತ್ರ ಕಾದಂಬರಿ. ಇದನ್ನು ಬರೆದು ಒಂದು ವರ್ಷ ಸಂದಿದೆ. ಇಂದು ಇದು ನಿನ್ನ ಕೈ ಸೇರುತ್ತಿದೆ; ನನ್ನ ಮೊದಲ ಕಾದಂಬರಿಗಿಂತಲೂ ಮೊದಲೇ ಪ್ರಕಟವಾಗುತ್ತಿದೆ. ಜೀವನದಲ್ಲಿ ಒಂದು ವ್ಯಕ್ತಿಯ ಬಾಳು ಹೇಗೆ ಮುನ್ನಡೆದು ತನ್ನದಾವ ತಪ್ಪೂ ಇಲ್ಲದೆ ಏಕಾಕಿತನದಲ್ಲಿ, ದುರಂತದಲ್ಲಿ ಕೊನೆಗಾಣುವುದೆಂಬುದನ್ನು ಇದರಲ್ಲಿ ಚಿತ್ರಿಸಲು ಯತ್ನಿಸಿದ್ದೇನೆ. ಮೂರ್ತಿಯಂತಹ ಸೂಕ್ಷ್ಮ ಹೃದಯದವನು ಬಾಳಿನ ಪಯಣದ ಹಾದಿಯಲ್ಲಿ ನೂರು ದೃಶ್ಯಗಳನ್ನು ಕಾಣುತ್ತಾನೆ; ಸಾವಿರ ಘಟನೆಗಳಿಗೆ ಒಳಗಾಗುತ್ತಾನೆ. ಇದೆಲ್ಲದರ ಜತೆಗೆ ಕಾಣದ ಒಂದು ಅಪಾರಶಕ್ತಿಯೊಂದಿಗೆ ಹೋರಾಟ ನಡಸುತ್ತಾನೆ. ಅವನಿಗಾದ ಅನುಭವಗಳಲ್ಲಿ ಹೃದಯ ಬೇಯುತ್ತದೆ, ಪಕ್ವವಾಗುತ್ತದೆ. ಆದರೆ ಕೆಲವು ಬಾರಿ ಪಕ್ವವಾಗುವ ಮೊದಲೇ ಹೃದಯ ಹುಡಿಯಾಗುತ್ತದೆ. ಹೂವಿನಂತೆ ಸೊರಗಿ ಸೀದುಹೋಗುತ್ತದೆ. ಇದು ಬಾಳಿನ ದುರಂತ, ವ್ಯಕ್ತಿಯ ದುರಂತ! ಮಾನವ ಈ ದುರಂತದ ವಿರುದ್ಧ ಹೋರಾಡಲು ಯತ್ನಿಸಿ ವಿಫಲನಾಗಿ ಮಡಿಯುತ್ತಾನೆ. ಆದರೆ ಮಣಿಯುವುದಿಲ್ಲ!

ಶೇಕ್ಸ್‌ಪಿಯರ್ ಮಹಾಕವಿಯ ಈ ಸಾಲುಗಳನ್ನು ನೀನು ಓದಿ ಕೇಳಿರಬಹುದು.

"There is a divinity that shapes our ends
Rough-hew them how we will!"

ನಾವು ಯಾವ ಬಗೆಯಲ್ಲಿ ಕಡೆಯಲು ಯತ್ನಿಸಿದರೂ ನಮ್ಮ ಬಾಳನ್ನು ಕಂಡರಿಸಿ ರೂಪಿಸುವ ಶಕ್ತಿ ಬೇರೊಂದಿದೆ. ಆ ಶಕ್ತಿ ಪ್ರತಿಬಾರಿ ನಾವು ತಲೆಯೆತ್ತಲು ಯತ್ನಿಸಿದಾಗಲೂ ತನ್ನ ಕಬ್ಬಿಣದ ಕಾಲಿನಿಂದ ನಮ್ಮನ್ನು ಮೆಟ್ಟುತ್ತದೆ. ನಾವು ಉರುಳುತ್ತೇವೆ. ಆ ನೋವಿನಿಂದ

ನಮ್ಮ ಹೃದಯ ವಿಕಾಸವಾಗುತ್ತದೆ. ಬಾಳು ಪಕ್ವವಾಗುತ್ತದೆ. ನಿರಾಸೆಯ ಬೂದಿಯಿಂದಲೇ ಆಸೆಯ ಕಿಚ್ಚು ಎದ್ದು ನಮ್ಮನ್ನು ಮುನ್ನಡೆಯಲು ಪ್ರೇರಿಸುತ್ತದೆ. ಕಾವು ನೀಡುತ್ತದೆ. ಆಗ ಮತ್ತೆ ಹೋರಾಟ, ಮತ್ತೆ ಸೋಲು, ಮತ್ತೆ ನೋವು! ಕಾಲದ ಕಾಗುಣಿತ ಜೀವಿಯ ಎದೆ ಮೊರೆತ, ನೋವುಗಳನ್ನು ಎಣಿಸದೆಯೇ ಮುಂದೆ ಸಾಗುತ್ತದೆ. ಮೂರ್ತಿಯ ಬಾಳಿನಲ್ಲಿ ನೂರು ಮಂದಿ ಮಿಂಚಿದರು. ಲಕ್ಷಮ್ಮ, ರಾಮಣ್ಣ, ಹುಚ್ಚನ ಮಾತುಗಳು, ಸರೋಜೆಯ ಒಡನಾಟ, ನಾಣಿಚಿಕ್ಕಪ್ಪನ ಪಲಾಯನವಾದೀ ಜೀವನ, ಸತ್ತು ಸ್ವರ್ಗದಲ್ಲುಳಿದ ತಾಯಿ ಸುಶೀಲೆಯ ನೆನಪು, ಶಂಕರು ಶೇಷಗಿರಿ ಇಬ್ಬರ ಆದರ್ಶ ಗೆಳೆತನ, ಕಮಲಳ ಕಾಮಪಿಪಾಸೆ, ಆಗಸ್ಟಿ ಚಳುವಳಿ—ಇವೆಲ್ಲದರ ಪ್ರಭಾವ ಮೂರ್ತಿಯ ಮನಸ್ಸಿನಮೇಲೆ ಅಚ್ಚಾಯಿತು. ಆದರೆ ಕೊನೆಗೆ ಅವನು ಉಳಿದವನೊಬ್ಬನೇ, ಏಕಾಕಿ! ಇದು ಜೀವನದ ನಿಯಮ. ಜಗತ್ತನ್ನು ಸೃಷ್ಟಿಸಿದ ವಕ್ರ ಬುದ್ಧಿಯ ನಿದರ್ಶನ! ನನ್ನ ಈ ವಿಚಾರವನ್ನು ನೀನು ಒಪ್ಪಬಹುದು, ಒಪ್ಪದಿರಬಹುದು. ಆದರೆ ಇದು ನಾನು ಬಾಳಿನಲ್ಲಿ ಕಂಡು ಉಂಡ ಸತ್ಯ. ಆ ಸತ್ಯವನ್ನೇ ಈ ಕಾದಂಬರಿಯಲ್ಲಿ ಚಿತ್ರಿಸಲು ಯತ್ನಿಸಿದೇನೆ.

ಇಲ್ಲಿ ಬರುವ ವ್ಯಕ್ತಿಗಳು, ಘಟನೆಗಳೆಲ್ಲವೂ ನನ್ನ ಕಲ್ಪನೆಯವೇ ಎಂದು ಹೇಳಲಾರೆ. ನಮ್ಮ ಕಣ್ಣಮುಂದೆ ಇಂತಹುದು ಎಷ್ಟೋ ಆಗಿವೆ, ಆಗುತ್ತಿವೆ. ಇಂತಹ ವ್ಯಕ್ತಿಗಳು ಇದ್ದರು; ಇದ್ದಾರೆ. ಹಾಗಿರುವಾಗ ಇದೆಲ್ಲಾ ಕಲ್ಪಿತವೆಂದರೆ ಸುಳ್ಳಾಗದೇ? ನನ್ನ ಸುತ್ತ ಕಂಡ ಬಾಳುವೆಯಿಂದ ಎಲ್ಲವನ್ನೂ ಆರಿಸಿಕೊಂಡಿದೇನೆ. ಇಂತಹವರು ಜೀವನದಲ್ಲಿಯೂ ಇದ್ದಾರೆ. ಆದರೆ ಯಾವುದೇ ಒಂದು ವ್ಯಕ್ತಿಯ ಪ್ರತಿಬಿಂಬವೂ ಇಲ್ಲ. ಎಲ್ಲ ಜೀವಂತ ವ್ಯಕ್ತಿಗಳ ನೆರಳುಗಳು. ಆದರೆ ಯಾರೂ ತಮ್ಮ ಚಿತ್ರಣವೆಂದು ಬೆನ್ನು ತಟ್ಟಿಕೊಳ್ಳಬಾರದಲ್ಲವೇ?

ಇದನ್ನು ನಿನ್ನ ಕೈಯಲ್ಲಿಡಬೇಕೆಂದು ಬಹಳ ದಿನಗಳ ಬಯಕೆ. ಮೊದಲಿಗೆ ಅದು ಮೂಡಿದಾಗ ಕಾಗದದ ಮೇಲೆ ಮೂಡಿಸಲು ಹಿಂತೆಗೆದೆ. ಆದರೆ ಬಲವಂತ ಮಾಡಿ, ಸ್ಫೂರ್ತಿಕೊಟ್ಟು, ಬರೆಯುತ್ತ ಹೋದಂತೆ "ಮುಂದೆ? ಮುಂದೆ?" ಎಂದು ಉತ್ಸುಕತೆ ತೋರಿ ಉತ್ತೇಜನ ಕೊಟ್ಟರು

ಸಹೃದಯ ಗೆಳೆಯ ಗೆಳತಿಯರು. ಇದನ್ನು ವಿಶ್ವಾಸದಿಂದ ತಮ್ಮ ಉಡಿಯಲ್ಲಿ ಹಾಕಿಕೊಂಡು ಪ್ರಕಟಿಸಲೊಪ್ಪಿದರು ಉಷಾ ಸಾಹಿತ್ಯ ಮಾಲೆಯ ಸಂಪಾದಕ, ಗೆಳೆಯ ರಾ. ವೆಂ. ಶ್ರೀನಿವಾಸರು. ಇದನ್ನು ಮುದ್ದಾಗಿ ಅಚ್ಚುಮಾಡಿ ನಿನ್ನ ಕೈಗೆ ಒಪ್ಪಿಸುವವರು ಉಷಾ ಮುದ್ರಣಾಲಯದ ಗೆಳೆಯ, ರಾ ನಾ. ಹಬ್ಬು ಅವರು. ಇವರೆಲ್ಲರ ಬೆಂಬಲದ ಬಳುವಳಿ ಇದು. ಇದಕ್ಕಾಗಿ ಅವರೆಲ್ಲರಿಗೂ ನನ್ನ, ನಿನ್ನ ನೆನಕೆಗಳು ಸಲ್ಲಬೇಕು.

ನನ್ನ ಈ ತೊದಲು ಮಾತು ತಾಯಿಗೇ ಅರ್ಪಿತ. ಮಣ್ಣಾಗಿದ್ದ ನನ್ನ ಹೃದಯಕ್ಕೆ ಮಮತೆ ತೋರಿ, ಮಾನವತೆ ನೀಡಿದ ತಾಯಿಗಲ್ಲದೆ ಬೇರಾರಿಗೆ ಅರ್ಪಿಸಲಿ? ನಿಜ, ಈ ಪ್ರಯತ್ನ ಸಾಗರಕ್ಕೆ ಲೋಟದಲ್ಲಿ ನೀರನ್ನು ಒಯ್ದಂತೆ. ಆದರೂ ಪ್ರೇಮದ ಕಾಣಿಕೆ ಕಿರಿದಾದರೂ, ಹಿಮಾಲಯಕ್ಕೂ ಹಿರಿದಲ್ಲವೇ?

ಕೊನೆಯದಾಗಿ ನಿನಗೊಂದು ಮಾತು. ಇದುವರೆಗೂ ನಾ ಬರೆದುದನ್ನೆಲ್ಲಾ ಸಹೃದಯತೆಯಿಂದ, ವಾತ್ಸಲ್ಯದಿಂದ, ತೂಕದಿಂದ ನೋಡಿದ್ದೀಯೆ. ನನ್ನ ಈ ಕಾದಂಬರಿಯೂ ನಿನಗೆ ಒಪ್ಪಿಗೆಯಾದೀತೆಂದು ನನ್ನ ಆಸೆ, ಭರವಸೆ.

ಇಂಟರ್ಮೀಡಿಯೆಟ್ ಕಾಲೇಜು,
ಮೈಸೂರು,
೧—೧೨—೧೯೪೬

ನಿನ್ನ ಒಲವಿನ,
ಎಸ್. ಅನಂತನಾರಾಯಣ

# ಪಯಣದ ಹಾದಿಯಲ್ಲಿ

## ೧

"ಲಕ್ಷ್ಮಮ್ಮನವರೇ—ಲಕ್ಷ್ಮಮ್ಮನವರೇ"

ಮತ್ತೆ ಬಾಗಿಲು ತಟ್ಟಿದ ಸದ್ದು—

"ಲಕ್ಷ್ಮಮ್ಮನವರೇ"

"ಯಾರು?"

"ನೋಡಿ ಇಲ್ಲಿ–ನಿಮ್ಮ ಕುಮಾರ ಕಂಠೀರವನ ಪ್ರತಾಪ. ಬಾರೋ ಇಲ್ಲಿ; ನೋಡಿ, ಎಷ್ಟು ದೊಡ್ಡ ಗಾಯ! ಷರಟೆಲ್ಲ ರಕ್ತ ಆಗಿದೆ. ಹೀಗೇನೇ ಮಾಡೋದು? ಬುದ್ಧಿ ಹೇಳ್ಬಾರ್ದೇ ನೀವಾದ್ರೂ? ಏನೋಮ್ಮ!"

"ಏನ್ಮಾಡಿದ ಚಂಡಾಲ?"

"ಏನ್ಮಾಡ್ಲಿಲ್ಲ! ಇನ್ನೇನ್ಮಾಡ್ಬೇಕು? ಎಲ್ಲಾ ಮಾಡಿ ಮುಗಿಸಿದಾನೆ. ಎಲ್ಲರೂ ಬುಗುರಿ ಆಡ್ತಾ ಇದ್ದರು. ನಿಮ್ಮ ಸುಪುತ್ರ ಬಂದವನೇ ನಮ್ಮ ರಾಮೂನ ಬುಗುರಿ ಕೇಳಿದ. ಇವನು ಕೊಡೊಲ್ಲಾಂದದ್ದಕ್ಕೇ–ತನ್ನ ಮೈ ಕೊಬ್ಬಿದೇಂತ– ಹುಡುಗನ್ನ ಹೊಡೆಯೋಕೆ ಹೋಗೋದೇ? ಬುಗುರಿ ಕೊಡದೆ ಇದ್ರೆ ಹೊಡೀ ತೀನೀಂತ ಹೆದರಿಸಿದ. ಇವನು ಬುಗುರೀನೆತ್ತಿಕೊಂಡು ಓಡಿದ. ಅದಕ್ಕೆ ಕಲ್ಲಿ ನಲ್ಲಿ ಹೊಡೆದ—ಅಲ್ಲವೇನೋ ಮೂದೇವಿ, ಹೇಳು ಕಲ್ಲಲ್ಲೇ ತಾನೇ ಹೊಡೆ ದಿದ್ದು ನಿನ್ನನ್ನ?"

"ನಾನೆಷ್ಟು ತಾನೇ ಹೇಳಲೀಮ್ಮ! ನನಗೂ ಒರಲಿ ಒರಲಿ ಗಂಟಲೆಲ್ಲಾ ಗಾಣವಾಗಿ ಹೋಗಿದೆ. ಚಂಡಾಲ ದಿನಾಗಲೂ ಚೇಷ್ಟೆ ಛಿದ್ರ ಮಾಡದೇ ಇದ್ರೆ ತಿಂದನ್ನ ಅರಗೋಲ್ಲ! ನೀವೇ ನೋಡಿ, ಪದ್ಮಾವತಿಬಾಯಿ, ನಾನು ಮೊನ್ನೆ ನವರಾತ್ರೀಲಿ ಕೊಂಡ್ಕೊಂಡಿದ್ದೆ ನೋಡಿ, ಕಣ್ಣು ಮುಚ್ಕೋ ಬೊಂಬೆ, ಅದನ್ನ ನನ್ನ ರೂಮಿನ ಬೀರುವಿನಲ್ಲಿ ಇಟ್ಟಿದ್ರೆ ತೆಗೆದು ಕೈಯೊಂದ್ಕಡೆ ಕಾಲೊಂದ್ಕಡೆ ಮಾಡಿಟ್ಟಿದಾನೆ. ನಾನೇನಾದ್ರೂ ಹೆಚ್ಚು ಮಾತಾಡೋಕೆ ಹೋದ್ರೆ ನನ್ನ ಮೇಲೇ ಕೈಮಾಡ್ತಾನೆ. ನಿಮಗೆ ಗೊತ್ತೇ ಇದೆ ಅವರ ಸ್ವಭಾವ—ಏನೋ

ಹುಡುಗ ಈಗ ಹೀಗಿರ್ತಾನೆ ಆಮೇಲೆ ತಾನಾಗೇ ಸರಿಯಾಗ್ತಾನೆ ಅಂದ್ಬಿಡ್ತಾರೆ."

"ಹೌದು, ಹೌದು, ಅನ್ನೋದಕ್ಕೇನು ಹೇಳಿ. ಈಗಿನಿಂದ ಇದನ್ನೇ ಕಲಿತುಕೊಳ್ಳಲಿ ಮುಂದೆ ಚೆನ್ನಾಗಿ ಬದುಕಿ ಬಾಳಬಹುದು."

"ನಾನೇನು ತಾನೇ ಮಾಡಲೀಂದ್ರೆ. ನಾನೇನಾದ್ರೂ ಹೆಚ್ಚಿಗೆ ಮಾತಾಡಿದ್ರೆ ಸಾಕು ಮಲತಾಯಿ ಮಲತಾಯಿಯೇ! ಹುಡುಗನ್ನ ಹುರಿದು ಹಿಪ್ಪೆ ಮಾಡ್ತಾಳೆ ಅಂತಾರೆ. ಏನೂ ಹೇಳದೇ ಇದ್ರೆ ಈ ಸಂಕಟ. ಏನು ತಾನೇ ಮಾಡೋದು ಹೇಳಿ?"

"ಸರಿಯಮ್ಮ! ಅಲ್ಲಾಂದ್ರೆ, ನಾವೂ ಎಷ್ಟೂಂತ ಸಹಿಸೋದು ಅಂತೀನಿ. ಏನು ಅವನ ಗಲಾಟೆಗೆ ಕೊನೆ ಮೊದಲೇ ಇಲ್ಲವೇ? ಪರಂಗೀಕಾಯಿ ಕೀಳ್ಬೇಡವೋ ಅಂತ ಹೇಳಿದ್ದಕ್ಕೆ ಹಟ ಮಾಡಿಕೊಂಡು ಗಿಡದಲ್ಲಿ ಒಂದು ಹೀಚು ಕೂಡ ಇಲ್ಲದ ಹಾಗೆ ಚೊಕ್ಕಟ ಮಾಡಿಬಿಟ್ಟ. ನಮ್ಮ ಯಜಮಾನರು ತೆಗೆದು ನಾಲ್ಕು ಬಾರಿಸ್ಬೇಕೂಂತಿದ್ರು. ಆದ್ರೆ ನಿಮ್ಮ ಯಜಮಾನರ ಮುಖ ನೋಡಿ ಸುಮ್ಮನಾದರು."

"ಎರಡು ಬಿಟ್ಟಿದ್ದರೇ ಚೆನ್ನಾಗಿತ್ತು."

"ಹಾಗಲ್ಲ ಲಕ್ಷ್ಮಮ್ಮನೋರೆ. ನೆರೆಹೊರೆ ಅಂದ ಮೇಲೆ ಇದರಿಂದೇನಾದರೂ ಜಗಳಗಿಗಳ ಬಂದೀತು ಅಂತ. ಅಂತೂ ನೋಡೀಮ್ಮ ಕೊಂಚ ಹುಡುಗನ್ನ ಹದ್ದಿನಲ್ಲಿಟ್ಟುಕೊಳ್ಳದಿದ್ದರೆ ಬಹಳ ಕಷ್ಟ. ನಾನಿನ್ನು ಬರ್ತೀನಿ–ಒಲೇ ಮೇಲೆ ಹುಳೀದಿಟ್ಟಿದ್ದೆ—ಏನಾಗಿದ್ಯೋ! ಸ್ಕೂಲು ಹೊತ್ತಿಗೆ ಆಗ್ಬೇಕಲ್ಲಾ! ಅಂದ ಹಾಗೇ ಮರೆತೇಹೋಯ್ತು. ಹಾಗೇ, ಇದ್ದರೆ ಒಂದು ಪಾವು ಉಪ್ಪು ಸಾಲ ಕೊಟ್ಟರೆ ತರಿಸಿ ಕೊಡ್ತೀನಿ."

"ಒಳಕ್ಕೆ ಬನ್ನೀಂದ್ರೆ. ಹಾಗೇ ಕುಂಕುಮ ಇಟ್ಕೊಂಡು ಹೋಗೋರಂತೆ. ಹಾಳಾದೋನು ಈವತ್ತು ಮನೆಗೆ ಬರಲಿ, ಅವನಿಗೆ ಕಾದಿದೆ. ಈವತ್ತು ಚೆನ್ನಾಗಿ ಶಾಸ್ತಿಮಾಡದೇ ಹೋದ್ರೆ!–ಸಿಗಿದು ತೋರಣಾ ಕಟ್ತೀನಿ ಚಂಡಾಲನ್ನ! ಪೂರಾ ಹೆಚ್ಕೊಂಡಿದಾನೆ! ಬನ್ನೀಂದ್ರೆ. ಅವರಿಲ್ಲ. ಎಲ್ಲೋ ಪೇಟೆ ಕಡೆ ಹೋಗಿದ್ದಾರೆ."

ಕುಂಕುಮ ಕೊಟ್ಟು, ಉಪ್ಪು ಸಾಲ ಕೊಟ್ಟು ನೆರೆಮನೆಯ ಪದ್ಮಾವತೀ ಬಾಯಿಯನ್ನು ಕಳಿಸಿ ಲಕ್ಷ್ಮಮ್ಮ ಅಡಿಗೆಯನ್ನು ನೋಡಲು ಹೋದರು. ಬೇಳೆ ಇನ್ನೂ ಅರ್ಧ ಬೆಂದಿತ್ತು.

"ಈ ಬೀಳಿಯೋ ಶನಿಮುಂಡೇದು ಏನು ಮಾಡಿದರೂ ಬೇಯೋಲ್ಲ. ಅವನಿಗೆ ಸ್ಕೂಲು ಹೊತ್ತಿಗೆ ಅಡಿಗೆ ಬೇರೆ ಕೇಡು! ಬೆಳಗ್ಗೆ ಎದ್ದರೆ ಆಟ ಮಧ್ಯಾಹ್ನ ಆಟ! ಸಂಜೆಯೆಲ್ಲ ಆಟ! ತಿನ್ನೋದು, ಆಡೋದು! ಚಿಕ್ಕವರನ್ನು ಹೊಡೆಯೋದು! ಎಷ್ಟೂಂತ ಕೇಳೋದೋ ಈ ನೆರೆಹೊರೇವರ ದೂರನ್ನ! ದೇವರೇ! ನನ್ನನ್ನ ಯಾಕಪ್ಪ ಇಲ್ಲಿಗೆ ತಂದೆ?"

ಲಕ್ಷ್ಮಮ್ಮ ಅಳಲಾರಂಭಿಸಿದರು.

"ನಾನ್ಯಾವ ಕರ್ಮ ಮಾಡಿದೆನೋ ನನನ್ನೀ ದುರ್ಗತೀಗೆಳೆದೆಯಲ್ಲಾ!" ಆಕೆ ಬಿಕ್ಕಿ ಬಿಕ್ಕಿ ಅಳುತ್ತಾ ಸೀರೆಯ ಸೆರಗಿನಿಂದ ಕಣ್ಣೀರನ್ನೊರಸಿಕೊಳ್ಳುತ್ತಿರುವಾಗ ರಾಮಣ್ಣನವರು ಒಳಕ್ಕೆ ಬಂದರು.

"ಇದ್ಯಾಕೇ ಅಳ್ತಾ ಇದ್ದೀ?"

"ಇನ್ನೇನು, ಕಟ್ಟಿಕೊಂಡ ಮೇಲೆ ಅಳೋದಲ್ದೆ?–ನನ್ನ ಹಣೇಲಿ ಬ್ರಹ್ಮ ಬರೆದದ್ದು, ನಮ್ಮಪ್ಪ ನಿಮಗೆ ನನ್ನ ಕಟ್ಟಿದಾಗ ನಾ ಕೇಳಿಕೊಂಡಿದ್ದು."

"ಸರಿ! ಇದ್ಯಾಕೇ ಅಳ್ತೀ ಅಂದ್ರೆ ಪುರಾಣ ಪ್ರಾರಂಭ."

"ಹೌದು! ನಾ ಹೇಳೋದೆಲ್ಲಾ ಪುರಾಣ! ನನ್ನ ಕರ್ಮ! ಎರಡನೆಯ ಮದುವೆಯಾದರೂ ಪರವಾಗಿಲ್ಲ, ವಯಸ್ಸೇನೂ ಹೆಚ್ಚಾಗಿಲ್ಲ, ಇರೋದೊಂದೇ ಮಗು ಅಂತ ಪೆಚ್ಚು ಪೆಚ್ಚಾಗಿ ಮೋಸ ಹೋದನಲ್ಲಾ ನಮ್ಮಪ್ಪ! ಅವನದೇ ತಪ್ಪು! ನಾನಾಗಲೇ ಯೋಚಿಸಬೇಕಾಗಿತ್ತು! ಮಕ್ಕಳಿರೋವರಿಗೆ ನನ್ನ ಕೊಡ್ಬೇಡೀಂತ ಹೇಳಬೇಕಾಗಿತ್ತು. ಆಗ ಈ ಸಂಕಟ ತಪ್ತಿತ್ತು!"

"ಈಗೇನಾಯ್ತು ನೇರ ಹೇಳಬಾರ್ದೇನೆ? ಮೂರ್ತಿ ಏನಾದ್ರೂ ಮಾಡಿದ್ನೇನೆ?"

"ಇನ್ನೇನು ತಾನೆ ಮಾಡಬೇಕು ಅವನು! ಬೆಳಗ್ಗೆ ಎದ್ದು ಮುಖ ಕೂಡ ತೊಳೀದೇ ಕಾಫಿ ಹೀರಿ ಹೊರಟು ಬಿಟ್ಟಾಂದ್ರೆ, ಯಾವ ಬೀದೀಲಿ ಯಾರ ಮನೇಲಿ ಯಾವ ಹಣ್ಣಿದೆ, ಯಾವ ಹುಡುಗನ ಹತ್ತಿರ ಯಾವ ಆಟದ ಸಾಮಾನಿದೆ? ಇದೇ! ನನಗಂತೂ ಬೇಜಾರಾಗಿ ಹೋಗಿದೆ! ಹಗಲೂ ರಾತ್ರಿ ನೆರೆಹೊರೆಯುವರಿಂದ "ನಿಮ್ಮ ಮೂರ್ತಿ ನಮ್ಮ ಹುಡುಗನ್ನ ಹೊಡೆದ! ಬಡಿದ! ಗೋಲಿ ಕಿತ್ತುಕೊಂಡ! ಬುಗುರಿ ಹಾರಿಸ್ದ! ಮಣ್ಣೆರಚಿದ! ಕಲ್ಲೆಸೆದ! ತೋಟಕ್ಕೆ ನುಗ್ಗಿದ–ಇದೇ ಆಗಿದೆ. ನೀವಾದ್ರೂ ಹೇಳ್ಬಾರ್ದೇ? ನಾನೇನಾದ್ರೂ

ಜೋರಾಗಿ ಮಾತಾಡಿದ್ರೆ 'ಮುಲತಾಯಿ' ಅನ್ನೋ ಅಪವಾದ ನನಗೇನೆ! ನನಗೇನೆ! ಅವನು ಮಾಡೋದುತೂ ಯಾರ್ಗೂ ಗೊತ್ತಾಗೋಲ್ಲ! ನನ್ನ ಕರ್ಮ."

"ಸಾಕಪ್ಪಾ ಸಾಕು!"

"ಹುಂ, ತಲೆ ಮೇಲೆ ಕೈಯಿಟ್ಟು ಕುಳಿತುಕೊಳ್ಳಿ—ಎಲ್ಲಾ ಆಗುತ್ತೆ! ಪಕ್ಕದ ಮನೆ ಪದ್ಮಾವತೀಬಾಯಿ ಇದಾರಲ್ಲಾ, ಅವರ ಚಿಕ್ಕಮಗ ಬುಗುರಿ ಆಡ್ತಾ ಇದ್ದರೆ ಬುಗುರಿ ಕಿತ್ತುಕೊಂಡು, ಕಲ್ಲಿನಲ್ಲಿ ಹೊಡೆದು, ತಲೇಲಿ ಗಾಯ ಮಾಡಿದಾನೆ. ನಾನೇ ನೋಡಿದೆ. ಒಂದು ತಂಬಿಗೆಯಷ್ಟು ರಕ್ತ ಧಳಧಳಾಂತ ಸುರೀತು. ರಾಕ್ಷಸ ಮುಂಡೇದು ಎದುರಿಗೇ ನಿಂತ್ಕೊಂಡು ನೋಡಿ ಸಂತೋಷಪಡ್ತಾ ನಗ್ತಾ ಇತ್ತು! ಪದ್ಮಾವತೀಬಾಯಿ ಈಗ ಬಂದು ರೇಗಿದ್ರು. ಅವರಿಗೆ ಸಮಾಧಾನ ಹೇಳೋ ಹೊತ್ತಿಗೆ ಸಾಕೋ ಸಾಕಾಯ್ತು! ಇನ್ನು ನನ್ನಿಂದಾಗೋಲ್ಲ!"

"ಏನೋ ಹುಡುಗರು ಹುಡುಗರು."

"ಹೌದು ಹುಡುಗರು! ಈವತ್ತು ಹುಡುಗರು, ನಾಳೆ ದೊಡ್ಡೋರು! ಕಂಡೋರ ಮನೆ ತೋಟದ ಗಿಡದ ಕಾಯಿ ಕೀಳೋದು ಹುಡುಗತನ!"

"ಹೋಗಲಿ, ಈಗ ನಾನವನಿಗೆ ಬುದ್ಧಿ ಹೇಳ್ತೀನಿ, ಹಾಗೆ ಮಾಡ್ಬೇಡಾಂತ."

"ಏನ್ಹೇಳಿದ್ರೇನು, ಮನುಷ್ಯರಿಗಾದ್ರೆ ಸರಿ, ಮೃಗ ಅದು; ನಿಮ್ಮ ಹಾಗೇ; ಹೇಳಿದ್ದು ಗೊತ್ತಾದ್ರೆ ತಾನೇ."

ಲಕ್ಷಮ್ಮ ಗೊಣಗುತ್ತಾ ತಮ್ಮ ಕೆಲಸಕ್ಕೆ ಹೊರಟುಹೋದರು. ರಾಮಣ್ಣ ಬಾಗಿಲ ಬಳಿಯೇ ನಿಂತಿದ್ದರು. ಕೊಂಚಕಾಲ ಏನೋ ಯೋಚಿಸುತ್ತಾ ಮತ್ತೆ ನಿಟ್ಟುಸಿರಿಟ್ಟು ತಮ್ಮ ಕೋಣೆಯೊಳಕ್ಕೆ ಹೋದರು. ಮೊದಲ ಹೆಂಡತಿಯ ನೆನಪು ಅವರಿಗಿನ್ನೂ ಮರೆತಿರಲಿಲ್ಲ. ಸುಶೀಲಾ ಎಂತಹ ಹೆಣ್ಣು! ಅಷ್ಟೇನೂ ರೂಪವತಿಯಲ್ಲದಿದ್ದರೂ ಎತ್ತಿಹಾಕುವಂತಹವಳೇನಲ್ಲ! ಸಾಕಷ್ಟು ಮೋಹಕಳೇ. ಜತೆಗೆ ಗಾಂಭೀರ್ಯ. ಅದೂ ಸಂಜೆ ದೇವರ ಮುಂದಿನ ನಂದಾದೀಪದ ಮಸುಕುಬೆಳಕಿನಲ್ಲಿ ನಿಜವಾಗಿ ಅವಳು ಸಾಕ್ಷಾತ್ ಲಕ್ಷ್ಮಿಯಂತೆಯೇ ತೋರುತ್ತಿದ್ದಳು. ಹೊಸದಾಗಿ ಸಂಸಾರ ಹೂಡಿದಾಗ ಎಷ್ಟೊಂದು ಹಿಗ್ಗು, ಎಷ್ಟೊಂದು ಸಂತೋಷ! ಗಂಡನಿಗೆ ಕೆಲಸವಾಗಿ ತಾನೊಂದು ಪುಟ್ಟ ಮನೆಯ

ಯಜಮಾನಿತಿಯಾಗುತ್ತೇನೆಂದು ಹಿಗ್ಗಿದಳು. ಜತೆಗೆ ಜವಾಬ್ದಾರಿ ವಹಿಸುವ ಬುದ್ಧಿವಂತಿಕೆಯೂ ಇತ್ತು. ತನ್ನ ಸಂಬಳಕ್ಕೆ ಸರಿಯಾಗಿ ಇದ್ದುದರಲ್ಲಿಯೇ ಅಚ್ಚುಕಟ್ಟಾಗಿ ಚೊಕ್ಕ ಜೀವನ ನಡೆಸಲು ಸಹಕಾರಿಯಾಗಿದ್ದಳು ಸುಶೀಲಾ. ಆ ಎರಡು ವರ್ಷಗಳು ರಾಮಣ್ಣನ ಜೀವನದಲ್ಲಿ ಸುಖದ ಸೀಮೆ ಮುಟ್ಟಿದ್ದುವು. ಚಿಕ್ಕ ಜತೆ, ಚೊಕ್ಕ ಸಂಸಾರ; ಆಮೇಲೆ ಮೂರ್ತಿಯು ಬಸುರಿನಲ್ಲಿ ಸುಶೀಲಾ ತವರಿಗೆ ಹೋಗಲಿಚ್ಛಿಸದೆ, ಎಲ್ಲಿ ಗಂಡನಿಗೆ ತೊಂದರೆಯಾದೀತೋ ಎಂದು ಅಲ್ಲಿಯೇ ಉಳಿದುಕೊಳ್ಳುವ ಹಟ ಹಿಡಿದುದು, ಕೊನೆಗೆ ತಾನೇ ಅವಳನ್ನು ಒಪ್ಪಿಸಿ ಕರೆದುಕೊಂಡು ಹೋಗಿಬಂದುದು; ಮೂರ್ತಿ ಹುಟ್ಟಿದಾಗಿನ ಸಂತೋಷ, ಆನಂದ. ಆಮೇಲೆ ಬಾಣಂತಿಕ್ಷಯವಾಗಿ ಸುಶೀಲಾ ಹೋಗಿಬಿಟ್ಟುದು; ಮೂರ್ತಿಯ ಮೂರು ತಿಂಗಳ ಮುದ್ದು ಮುಖವೊಂದನ್ನೇ ಆಸರೆಯಾಗಿಟ್ಟು ಕೊಂಡು ತಾನು ದುಃಖ ತಗ್ಗಿಸಿಕೊಂಡುದು. ಮೂರ್ತಿಯನ್ನು ನೋಡಿ ಕೊಳ್ಳುವುದಕ್ಕಾಗಿ ತನ್ನ ಸಂಬಂಧಿಗಳ ಮನೆಯಲ್ಲೇ ನೋಡಿ ಲಕ್ಷ್ಮಿಯನ್ನು ಮದುವೆಯಾದುದು; ಮೂರ್ತಿ ಬೆಳೆದಂತೆ ಲಕ್ಷ್ಮಿಗೆ ಅವನಲ್ಲಿ ದ್ವೇಷ ಬೆಳೆದುದು, —ಎಲ್ಲವೂ ರಾಮಣ್ಣನವರ ಮನಸ್ಸಿನಲ್ಲಿ ಒಂದೊಂದಾಗಿ ಹಾದು ಕಣ್ಣಿನಲ್ಲಿ ನೀರು ತುಂಬಿತು. ಆಗೇನಾದರೂ ಮೂರ್ತಿ ಬಂದಿದ್ದರೆ ಅವನನ್ನು ತಬ್ಬಿಕೊಂಡು ಗಳಗಳ ಅತ್ತುಬಿಡುತ್ತಿದ್ದರು ರಾಮಣ್ಣ!

*  *  *  *  *

"ಚಟ್ನಿಪುಡಿ ಹಾಕು ನನಗೆ"

"ಆಗಿಹೋಗಿದೆ ಕಣೋ"

"ಉಹುಂ! ನನಗೆ ಚಟ್ನಿಪುಡೀನೇ ಬೇಕು"

"ಇಲ್ಲ ಕಣೋ, ನಾಳೆ ಮಾಡಿ ಹಾಕುತ್ತೇನೆ. ಈವತ್ತು ಉಪ್ಪಿನಕಾಯಿ—"

"ನಾನು ಊಟವೇ ಮಾಡೋದಿಲ್ಲ!"

"ತೊಲಗು! ನಿನ್ನ ಅನ್ನಾನೇ ಉಳೀತು!" ಲಕ್ಷ್ಮಮ್ಮ ಗರ್ಜಿಸಿದರು.

"ಮೂರ್ತಿ! ನಾಳೆ ಹಾಕ್ತಾಳೆ ಕಣೋ! ಸುಮ್ಮನೆ ಇರೋದು ತಿಂದ್ಕೊಂಡೇಳೋ" ರಾಮಣ್ಣನವರು ಕೊಂಚ ಕಟುವಾಗಿಯೇ ಅಂದರು.

ಮೂರ್ತಿ ಸೆಟೆದುಕೊಂಡು ಕುಳಿತಿದ್ದನೇ ಹೊರತು ಏನೂ ಅನ್ನಲಿಲ್ಲ.

"ಉಪ್ಪಿನಕಾಯಿ ಹಾಕಲೇನೋ"

ಮೂರ್ತಿ ಹಾಗೆಯೇ ಕುಳಿತಿದ್ದ. ತುಟಿ ಪಿಟಕ್ಕೆನ್ನಲಿಲ್ಲ. ಲಕ್ಷಮ್ಮ ಉಪ್ಪಿನಕಾಯಿ ಜಾಡಿಯನ್ನು ಕೆಳಕ್ಕೆ ಕುಕ್ಕಿದರು; ಅದು ಚೂರುಚೂರಾಯಿತು. ರಾಮಣ್ಣನವರಿಗೂ ತಾಳ್ಮೆ ತಪ್ಪಿತು.

"ತಿನ್ನೋ ಸಾಕು, ಬೀದಿ ಬೀದಿ ಪೋಲಿ ಅಲೆಯೋದು, ಜಗಳ ಆಡೋದು, ಕಂಡೋರ ಮನೆಮಕ್ಕಳನ್ನೆಲ್ಲಾ ಬಡಿಯೋದು, ಹೊಡೆಯೋದು, ಬೀದಿಬಸವ! ಮನೇಲಿ ಬಂದು ಅದು ಬೇಕು, ಇದು ಹಾಕು ಅಂತ ಆಡಳಿತ ಬೇರೆ, ದರ್ಬಾರು ಬೇರೆ ಮುಟ್ಠಾಳಂದು!"

ಮೂರ್ತಿ ಹುಬ್ಬುಗಂಟಿಕ್ಕಿ ಕುಳಿತಿದ್ದವನು ತಲೆಯೆತ್ತಲೇ ಇಲ್ಲ. ಊಟ ಮಾಡಲೂ ಇಲ್ಲ. ರಾಮಣ್ಣನವರು ಕೋಪ ತಡೆಯಲಾರದೆ ಪಕ್ಕದ ಲೋಟದಲ್ಲಿದ್ದ ಉದ್ಧರಣೆಯನ್ನೆತ್ತಿ ಎಸೆದರು. ಉದ್ಧರಣೆ ಮೂರ್ತಿಯ ಹಣೆಯ ಮೇಲೆ ಬಿದ್ದು ಗಾಯವಾಗಿ ರಕ್ತ ತೊಟ್ಟಿಕ್ಕಿತ್ತು. ಮೂರ್ತಿ ಎದ್ದು ನಿಂತ; ಕಣ್ಣಿನಲ್ಲಿ ಕೆಂಡ ಕಾರುತ್ತಿತ್ತು; ಮುಖ ಗಂಟಿಕ್ಕಿತ್ತು. ಹಾಗೆಯೇ ಮನೆಯಿಂದ ಹೊರಹೊರಟ!

"ಮೂರ್ತಿ, ಮೂರ್ತಿ" ರಾಮಣ್ಣ ಕೂಗಿಕೊಂಡರು.

"ಹೋಗಲಿ ಬಿಡಿ, ಎಲ್ಲಿಗೆ ಹೋಗ್ತಾನೆ? ಬರ್ತಾನೆ. ಅದೇ ಉಂಡೇನು ಕದಾ ತೆಗೀಂತ" ರಾಮಣ್ಣನವರ ಲೋಟಕ್ಕೆ ರಕ್ತದಿಂದ ತೊಯ್ದ ಉದ್ಧರಣೆಯನ್ನು ಹಾಗೆಯೇ ಹಾಕಿ, ಮೂರ್ತಿಯ ತಟ್ಟೆಯನ್ನು ಮೂಲೆಗೊತ್ತಿದರು ಲಕ್ಷಮ್ಮ! ತಲೆ ತಗ್ಗಿಸಿ ಊಟಮಾಡುತ್ತಿದ್ದ ರಾಮಣ್ಣನವರ ಕಣ್ಣಿನಿಂದ ಒಂದು ಹನಿ ನೀರು ಬಿದ್ದು ತಟ್ಟೆಯಲ್ಲಿ ಸೇರಿಹೋದುದನ್ನು ಅವರು ಕಾಣಲಿಲ್ಲ!

ಸಂಜೆಯಾದರೂ ಮೂರ್ತಿಯ ಸುಳಿವೇ ಇಲ್ಲ. ಲಕ್ಷಮ್ಮನವರಿಗೂ ಮನಸ್ಸಿನಲ್ಲಿ ಕೊಂಚ ಗಾಬರಿಯಾಯಿತು. ಹುಡುಗ ಹಾಕಿದ ಚೆಡ್ಡಿ ಷರಟಿನಲ್ಲಿ ಹೋದವನು; ಬೆಳಗ್ಗೆಯಿಂದ ಏನೂ ತಿಂದಿಲ್ಲ. ಎಲ್ಲಿಯೋ ಹೋಗಿಬಿಟ್ಟನಲ್ಲಾ ಎಂದು ರಾಮಣ್ಣನವರ ಯೋಚನೆ! ಮಧ್ಯಾಹ್ನ ಸ್ಕೂಲಿನ ಹುಡುಗರನ್ನು ವಿಚಾರಿಸಲು, ಸ್ಕೂಲಿಗೆ ಬಂದಿರಲಿಲ್ಲವೆಂದೂ ತಿಳಿಯಿತು. ರಾಮಣ್ಣನವರು ಆಫೀಸಿನಿಂದ ಮನೆಗೆ ಹಿಂತಿರುಗಿದಾಗಲೂ ಮೂರ್ತಿ ಬಂದಿರಲಿಲ್ಲ. ರಾಮ

ಣ್ಣನ ಎದೆ ಒಡೆದಂತಾಯಿತು. ಎಲ್ಲಿ ಹುಡುಗ ಕೆರೆಗೋ ಭಾವಿಗೋ ಬಿದ್ದಿದ್ದಾನೋ ಎಂದು ಹೆದರಿಕೆ. ತಾಯಿಯಿಲ್ಲದ ಹುಡುಗನನ್ನು ಅಷ್ಟು ಕಟುವಾಗಿ ಬಯ್ಯಬಾರದಾಗಿತ್ತು, ಛೇ! ಇನ್ನೂ ೧೩-೧೪ ವರ್ಷದ ಹುಡುಗನಿಗೇನು ತಾನೇ ಗೊತ್ತಾಗುತ್ತೆ!....ಅದೂ ತುಂಟು ಆಟದ ಹುಡುಗುಹುಡುಗು ಕಾಲದ ಮೂರ್ತಿಗೆ! ರಾಮಣ್ಣ ಪೋಲಿಸ್ ಸ್ಟೇಷನ್ನಿಗೆ ತಿಳಿಸಿದರು.

ರಾತ್ರಿಯೆಲ್ಲಾ ಎಚ್ಚರವಾಗಿಯೇ ಮಲಗಿದ್ದರು ರಾಮಣ್ಣ, ಯಾವ ನಿಮಿಷದಲ್ಲಿ ಮೂರ್ತಿ ಬಂದು ಬಾಗಿಲು ತಟ್ಟುವನೋ ಎಂದು. ಬೀದಿಯಲ್ಲಿ ನಾಯಿಗಳ ಕೂಗಾಟ, ಗಾಳಿಯ 'ಸುಂಯ್ಯೋ' ಸದ್ದುಗಳೆಲ್ಲ ಅವರಿಗೆ ಕೇಳುತ್ತಿದ್ದುವು. ಬೀಟಿನ ಪೋಲೀಸನ ನಡಗೆಯ ಶಬ್ದವೂ ಕಿವಿಗೆ ತಾಕುತ್ತಿತ್ತು. ಮೈಯೆಲ್ಲಾ ಕಿವಿಯಾಗಿ ಕಾದಿದ್ದರು ಎಲ್ಲಾದರೂ ಬಾಗಿಲು ಸದ್ದಾದೀತೇ ಎಂದು; ಆದರೆ ಸದ್ದಾದುದು ಗಾಳಿಯ ಬಿರುಸಿನಿಂದ, ನಾಯಿಯೊಂದರ ಪ್ರಲಾಪದಿಂದ, ಪೋಲೀಸನ ಕೈಕೋಲಿನ ಹೊಡೆತದಿಂದ!

ಬೆಳಗ್ಗೆ ೬ ಘಂಟೆಗೇ ರಾಮಣ್ಣ ಪೋಲೀಸ್ ಸ್ಟೇಷನ್ನಿಗೆ ಓಡಿದರು. ಅಲ್ಲೇನಿದೆ? ಹುಡುಗ ಇನ್ನೂ ಸಿಕ್ಕಲಿಲ್ಲ. ನೀವೇನೂ ಬರಬೇಕಾಗಿಲ್ಲ. ಸಿಕ್ಕಿದೊಡನೆಯೇ ಹೇಳಿಕಳುಹಿಸುತ್ತೇವೆ ಎಂದುಬಿಟ್ಟ ದಫೇದಾರ. ರಾಮಣ್ಣನ ಹೃದಯ ಕುಗ್ಗಿಹೋಯಿತು.

ಸಂಜೆಗೊಬ್ಬ ಪೋಲೀಸಿನವನು ಮೂರ್ತಿಯನ್ನು ಮನೆಗೆ ಕರೆತಂದು ಬಿಟ್ಟ. ಶ್ರೀರಂಗಪಟ್ಟಣದ ದಾರಿಯಲ್ಲಿ ಸುಸ್ತಾಗಿ ಮಲಗಿದ್ದನಂತೆ. ಯಾರೋ ಕಂಡು ಗಾಡಿಯಲ್ಲಿ ಕರೆದುಕೊಂಡು ಶ್ರೀರಂಗಪಟ್ಟಣದ ಪೋಲೀಸ್ ಸ್ಟೇಷನ್ನಿಗೆ ತಿಳಿಸಿದರಂತೆ. ಆಮೇಲೆ ಮೈಸೂರಿಗೆ ಫೋನುಮಾಡಿ ಇವನೇ ತಪ್ಪಿಸಿಕೊಂಡ ಹುಡುಗನೆಂದು ತಿಳಿದು ಮೈಸೂರಿಗೆ ಕಳಿಸಿಕೊಟ್ಟಿದ್ದರು.

ಮೂರ್ತಿ ಏನೇ ಮಾಡಿದರೂ ಮಾತನಾಡಲೊಲ್ಲ. ಮುಖ ಬಹಳ ಸೊರಗಿತ್ತು. ನಿನ್ನೆಯೆಲ್ಲಾ ಬಿಸಿಲಿನಲ್ಲಿ ನಡೆದು ರಾತ್ರಿ ಅಲ್ಲಿಯೇ ಚಳಿಗಾಳಿಯಲ್ಲಿ ರಸ್ತೆಯ ಪಕ್ಕದಲ್ಲಿ ಸೆಟೆದುಕೊಂಡು ಬಿದ್ದಿದ್ದು, ಹೊಟ್ಟೆಗೇನೂ ಇಲ್ಲದೆ ಬಹಳ ಸುಸ್ತಾಗಿದ್ದ. ರಾಮಣ್ಣನವರು ಸಮಾಧಾನಗೊಳಿಸಲು ಬಹಳ ಯತ್ನಿಸಿದರು. ಅವನ ಉದ್ದನೆಯ ಕ್ರಾಪನ್ನು ತೀಡುತ್ತಾ ನಿನಗಿಷ್ಟಬಂದಂತಿರೆಂದು ಸಮಾಧಾನ ಹೇಳಿದರು. ಆದರೆ ಮೂರ್ತಿ ಬಾಯಿಬಿಡಲೇ ಇಲ್ಲ.

ಲಕ್ಷ್ಮಮ್ಮನವರೂ ಒಂದು ನೂರು ಮಾತು ಹೇಳಿದರೂ, ಬೇಡಿಕೊಂಡರೂ ಹುಡುಗ ಒಂದು ತುತ್ತು ಅನ್ನವನ್ನೂ ತಿನ್ನಲಿಲ್ಲ. ಬಹು ಪ್ರಯಾಸದಿಂದ ರಾಮಣ್ಣ ಒಂದಿಷ್ಟು ಹಾಲು ಕುಡಿಸಿದರು.

"ನಿನಗಿಲ್ಲಿರಲು ಇಷ್ಟವಿಲ್ಲದಿದ್ದರೆ ಹೋಗಲಿ, ಚಿಕ್ಕಪ್ಪನ ಮನೆಗೆ ಹೋಗುವೆಯಂತೆ ಸುಮ್ಮನಿರೋ. ಬೇಸಿಗೆ ರಜಾದವರೆಗೂ ಇಲ್ಲಿರು. ಆಮೇಲೆ ನಿಮ್ಮ ಚಿಕ್ಕಪ್ಪನ ಮನೆಗೆ ಹೋಗಿ ಅಲ್ಲಿಯೇ ಇರುವೆಯಂತೆ. ಅಲ್ಲಾದರೂ ಸುಖವಾಗಿರು; ಇಲ್ಲಿ ಇವಳಿಗೂ ಹಿಂಸೆ ತಪ್ಪುತ್ತೆ." ಎಂದರು.

ಮೂರ್ತಿ ಮಲಗಿ ನಿದ್ರಿಸಿದ. ರಾಮಣ್ಣ ರಾತ್ರಿಯೆಲ್ಲಾ ಸುಶೀಲೆಯ ನೆನಪಿನಲ್ಲಿ, ಮೂರ್ತಿಯ ನಾಳಿನ ಚಿಂತೆಯಲ್ಲಿ, ಹಾಸಿಗೆಯ ಮೇಲೆ ಹೀಗಿಂದ ಹಾಗೆ ಹೊರಳಾಡುತ್ತಿದ್ದರು. ಲಕ್ಷ್ಮಮ್ಮ ಮಾತ್ರ ಏನೂ ಆಗದವರಂತೆ ಅಡಿಗೆ ಮನೆಗೆ ಬೀಗಹಾಕಿ ನಿರಾಯಾಸವಾಗಿ ಗೊರಕೆ ಹೊಡೆಯುತ್ತಿದ್ದರು. ಬೆಳಗಿನ ಜಾವದ ವೇಳೆಗೆ ರಾಮಣ್ಣನಿಗೆ ಕೊಂಚ ನಿದ್ರೆಹತ್ತಿದಂತಾಗಿ ಆಕೆಯ ಗೊರಕೆಯ ಸದ್ದು ಕನಸಿನಲ್ಲಿಯಂತೆ ಮಸಕುಮಸಕಾಗಿ ಮಾಯವಾಯಿತು.

ಬೆಳಗ್ಗೆ ರಾಮಣ್ಣ ಎದ್ದಾಗ ಮೂರ್ತಿ ಇನ್ನೂ ಮಲಗಿದ್ದ. ಶನಿವಾರ, ಬೆಳಗ್ಗೆ ಸ್ಕೂಲು, ಇನ್ನೂ ಮಲಗಿದ್ದಾನಲ್ಲಾ, ಎಬ್ಬಿಸೋಣವೆಂದು ಕಿಟಕಿ ತೆರೆದು ಅವನ ಹಾಸಿಗೆ ಬಳಿ ಹೋದರು. ಹೊದ್ದಿದ್ದ ಕಂಬಳಿಯಿಂದ ಮುಖ ಮಾತ್ರ ಹೊರಕಾಣುತ್ತಿತ್ತು. ಎಳೆಯ ಮುಖವಾದರೂ ಯಾವುದೋ ನೋವಿನಿಂದ ಬಾಡಿದ ಹೂವಿನಂತಿತ್ತು. ಮೂರ್ತಿ ಅಷ್ಟೇನೂ ಸುಂದರನಲ್ಲದಿದ್ದರೂ ನೋಡಲು ಚೆನ್ನಾಗಿದ್ದ. ೧೪ ವರ್ಷಕ್ಕೆ ಸಾಕಷ್ಟು ಬೆಳೆವಣಿಗೆ ಇತ್ತು. ಏನೂ ತಿಳಿಯದವನು ತಾಯಿಯನ್ನು ಕಳೆದುಕೊಂಡು ಮಲತಾಯಿಯ ಕೈಕೆಳಗೆ ಬೆಳೆದವನು—ಇಕ್ಕಳದಲ್ಲಿ ಸಿಕ್ಕಿದಂತಿದ್ದ. ಒಂದು ಕಡೆ ತಂದೆಯ ಒಲವು; ಮತ್ತೊಂದು ಕಡೆ ಮಲತಾಯಿಯ ಬೈಗಳು. ಮೊದಲೇ ಅವನು ತುಂಟುತನದ ರಾಜ! ಆಟದಲ್ಲೇನಾದರೂ ಕೊಂಚ ರೇಗಿದರೆ ಹುಡುಗ ಹುಡುಗರ ಆಟವೆಂದು ಸುಮ್ಮನಿರದೆ ಸಹಸ್ರನಾಮ ಮಾಡುತ್ತಿದ್ದಳು ಮಲತಾಯಿ. ಇದರಿಂದ ಮೂರ್ತಿಯ ಸೂಕ್ಷ್ಮಹೃದಯಕ್ಕೆ ಬರೆಬಿದ್ದು ಒಂದು ಬಗೆಯ ಹಟಮೂಡಿತ್ತು ಅಲ್ಲಿ. ತಾನಂದಂತೆ ನಡೆಯುತ್ತಿದ್ದ. ತನ್ನಿಷ್ಟ ಬಂದಂತೆ ಆಡುತ್ತಿದ್ದ. ಮಲತಾಯಿಯ ಮಾತಿಗೆ ಗಮನವನ್ನೇ ಕೊಡು

ತ್ತಿರಲಿಲ್ಲ. ರಾಮಣ್ಣನವರಂತೂ ಮೂರ್ತಿಯ ತಂಟೆಗೇ ಹೋಗುತ್ತಿರಲಿಲ್ಲ. ಒಂದೊಂದು ಬಾರಿಯೇನಾದರೂ ಗದರಿಸಿದರೆ ಮೂರ್ತಿ ಬಹಳ ನೊಂದು ಕೊಳ್ಳುತ್ತಿದ್ದ. ಇದರಿಂದ ರಾಮಣ್ಣನವರಿಗೂ ನೋವಾಗುತ್ತಿತ್ತು. ಮರು ನಿಮಿಷವೇ ತಮ್ಮ ಸುಶೀಲೆಯ ನೆನಪು ಬಂದು ಅವನನ್ನು ಮನ್ನಿಸಿಬಿಡು ತ್ತಿದ್ದರು. ಈಗಲೂ ಹಾಗೆಯೇ, ಮಲಗಿದ್ದ ಮೂರ್ತಿಯ ಮುಖ ಅವರಿಗೆ ತಮ್ಮ ಅಳಿದ ಹೆಂಡತಿಯನ್ನು ನೆನಪಿಗೆ ತಂದಿತು. ಅದೇ ದುಂಡು ಮುಖ, ಅದೇ ನುಣುಪುಗೆನ್ನೆ—ಕೊಂಚ ಬಾಡಿತ್ತು ಅಷ್ಟೆ. ಆ ಕೂದಲಿನ ಬಣ್ಣ ಕೂಡ ಅದೇ, ಆ ಹಣೆಯ ಮಾಟವೂ ಸುಶೀಲಳದೇ! ಗಂಡುಮಕ್ಕಳು ತಂದೆ ಯನ್ನು ಹೋಲುವರೆನ್ನುತ್ತಾರೆ. ಆದರೆ ಮೂರ್ತಿ ಸಂಪೂರ್ಣವಾಗಿ ತನ್ನ ತಾಯಿಯ ಪ್ರತಿಬಿಂಬವೇ!

ಮೂರ್ತಿಯ ಮುಖದ ಮೇಲೆ ರಾಮಣ್ಣನ ಕಣ್ಣಿನಿಂದ ಒಂದು ಹನಿ ನೀರುರುಳಿತು. ಮೂರ್ತಿ ಎಚ್ಚರವಾಗಿ ಕಣ್ಣು ಬಿಟ್ಟ.

"ಅಣ್ಣಾ"

"ಮೂರ್ತಿ"

"ಇದ್ಯಾಕಣ್ಣಾ ಅಳ್ತಾ ಇದ್ದಿ?" ಕಣ್ಣುಗಳನ್ನು ಉಜ್ಜುತ್ತ ಮೂರ್ತಿ ಕೇಳಿದ.

"ಏನೂ ಇಲ್ಲಪ್ಪಾ ಏನೋ"

"ನಾನು ನಿನ್ನೆ ಊಟ ಮಾಡಲಿಲ್ಲ ಅಂತಲೇನಣ್ಣ? ನನ್ನದು ತಪ್ಪೇನಣ್ಣಾ?"

"ಹಾಗಲ್ಲ ಮೂರ್ತಿ ನೀನೂಟಮಾಡದಿದ್ದರೆ ನನಗೆ ಅನ್ನ ಸೇರು ತ್ತಯೇ? ನನಗೆಷ್ಟು ದುಃಖ ಆಗುತ್ತೆ ಯೋಚಿಸು ಮೂರ್ತಿ. ನಿಮ್ಮಮ್ಮ ಇದ್ದಿದ್ದರೆ ನೀನವಳನ್ನು ಹೀಗೆ ಸಂಕಟಪಡಿಸ್ತಾ ಇದ್ದೆಯಾ?"

"ಅಮ್ಮ ಹೀಗನ್ನುತ್ತಲೇ ಇರಲಿಲ್ಲ. ನಾ ಮಾಡಿದ್ದಾದರೂ ಏನಣ್ಣ? ಅವರು ಒಂದು ಸುಳ್ಳು ಚಾಡಿ ಹೇಳಿದ್ದನ್ನೇ ನಿಜ ಅಂತ—"

"ಹೋಗಲಿ ಬಿಡು. ....ಸ್ಕೂಲಿಲ್ವೇ?"

"ಹೂಂ. ಹೋಗ್ತೀನಿ"

ಮೂರ್ತಿ ಎದ್ದು ಬಚ್ಚಲಮನೆಗೆ ಹೋದ. ರಾಮಣ್ಣ ಕಣ್ಣು ತುಂಬ ಅವನನ್ನೇ ನೋಡಿದರು. ಆ ನಿಲುವು, ಆ ನಡಿಗೆ—ಆ ದನಿ ಕೂಡ ಸುಶೀಲಳದೇ. ಆದರೆ ಆ ಹಟ—ಹಟಮಾರಿತನ ಎಲ್ಲಿಯದು?

ಮೂರ್ತಿ ಮುಖತೊಳೆದು ತಂದೆಯ ಹತ್ತಿರ ಬಂದು ನಿಂತ—

"ಅಣ್ಣಾ" ಎಂದು ತಲೆ ತಗ್ಗಿಸಿದ, ಏನೋ ಕೇಳಬೇಕೆಂದಿರುವವನಂತೆ.

"ಏನೋ?"

"ನಾಣಿ ಚಿಕ್ಕಪ್ಪನ ಮನೆಗೆ-ಹಾಸನಕ್ಕೆ ಯಾವಾಗಣ್ಣಾ ಹೋಗೋದು?"

"ಈ ವರ್ಷ ಆಗಲಿ, ಮುಂದಿನ ವರ್ಷ ಹೋಗಿ ಅಲ್ಲಿಯೇ ಸ್ಕೂಲಿಗೆ ಸೇರಿಕೊಳ್ಳುವೆಯಂತೆ" ಎನ್ನುತ್ತಾ ರಾಮಣ್ಣ ಕಾಫಿ ಕುಡಿಯಲು ಅಡಿಗೆ ಮನೆಗೆ ಹೋದರು. ಮೂರ್ತಿ ಅವರ ಕಡೆಯೇ ನೋಡುತ್ತಾ ನಿಂತಿದ್ದವನು ಮೆಲ್ಲನೆ ಕೋಟು ಹಾಕಿಕೊಂಡು ಪುಸ್ತಕವನ್ನೆತ್ತಿಕೊಂಡು ಹೊರಟ. ಅವನ ಕಣ್ಣಿನ ತೀವ್ರ ಹೊಳಪಿನಲ್ಲಿ ಯಾವುದೋ ಹಟ, ಸಂಕಲ್ಪ ಮೂಡಿತ್ತು. ಒಳಗಿನಿಂದೊಂದೆರಡು ಬಾರಿ "ಮೂರ್ತಿ ಮೂರ್ತಿ" ಎಂದು ಕೂಗಿ ರಾಮಣ್ಣ ಕಾಫಿಯ ಬಟ್ಟಲು ತರುವ ವೇಳೆಗೆ ಮೂರ್ತಿ ಕೋಣೆಯಲ್ಲಿರಲಿಲ್ಲ. ಅವನ ಕಾಲುಗಳಾಗಲೇ ಶಾಲೆಯ ಹಾದಿಯ ಕಲ್ಲುಗಳನ್ನು ತುಳಿಯುತ್ತಿದ್ದುವು.

೨

ಅನಂತಮೂರ್ತಾಚಾರ‍್ರೆಂದರೆ ಕನ್ನಡ ಹೇಳುವ ಮೇಷ್ಟ್ರಲ್ಲೆಲ್ಲಾ ಒಂದು ಬಗೆಯ ಹಾಸ್ಯ. ಅವರು ಚೆನ್ನಾಗಿ ಪಾಠ ಹೇಳುತ್ತಿರಲಿಲ್ಲವೆಂದಲ್ಲ—ಉಪಾಧ್ಯಾಯರಲ್ಲಿ ಅವನು ಚೆನ್ನ ಇವನು ಚೆನ್ನಿಲ್ಲವೆಂಬ ತಾರತಮ್ಯ ಗಣನೆಯೇ ಇಲ್ಲ. ಎಲ್ಲ ಯಾಂತ್ರಿಕ! ನಗುವಿಗೆ ಕಾರಣ ಅವರ ಕೋಪ, ಅವರ ಗಿಡ್ಡ ದೇಹ—ಸುಮಾರು ४-४॥ ಅಡಿ ಇದ್ದರೆ ಹೆಚ್ಚು. ಕಚ್ಚೆ ಪಂಚೆಕಟ್ಟಿ ಹರಕು ಕೋಟು ಹಾಕಿ ಬಂದರೆಂದರೆ ಸಾಕು ಬೀದಿಯಲ್ಲೆಲ್ಲರೂ ಅವರ ಕಡೆಗೇ ನೋಡುವರು. ಆ ವಿಚಿತ್ರ ಉಡಿಗೆಗೂ ವಿಚಿತ್ರ ಅವರ ನಡಿಗೆ. ಎಡಗಾಲ ನೆತ್ತಿ ಎತ್ತಿ ಬೀಸಿ ಮುಂದೆ ಹಾಕುತ್ತಿದ್ದುದರಿಂದ ಕಾಲು ಚೆಂಡೊದೆಯಲು ಹೋಗಿ ನೆಲದ ಮೇಲೆ ಕುಕ್ಕಿದಂತೆ ಕಾಣುತ್ತಿತ್ತು. ಇದಕ್ಕೆ ಸರಿಯಾಗಿ ಅವರ ಅಸಾಧಾರಣ ಕೋಪ! ಮೂಗಿನ ತುದಿಯಲ್ಲಿ ಅಂಟಿಕೊಳ್ಳುತ್ತಿದ್ದ

ನಶ್ಯದ ಪುಡಿಯೊಂದಿಗೇ ಇರುತ್ತಿತ್ತು ಕೋಪ. ಮಾತುಮಾತಿಗೂ ಉರಿದು ಬೀಳುತ್ತಿದ್ದರು. ಆ ಕೋಪದಲ್ಲಿ ಅವರಿಗೆ ತಾರತಮ್ಯ ಜ್ಞಾನವೇ ಇರುತ್ತಿರಲಿಲ್ಲ.

ಹುಡುಗರೆಲ್ಲರಿಗೂ ಅವರನ್ನು ಕಂಡರೇ ನಡುಕ! ಯಾವ ನಿಮಿಷದಲ್ಲಿ ಯಾರ ಮೇಲೆ ಬೆತ್ತ ನರ್ತನಮಾಡುವುದೋ ಯಾರಿಗೆ ಗೊತ್ತು? ಅಪರಾಧಿ ಯಾರು, ಯಾರು ತಪ್ಪಿತಸ್ಥರಲ್ಲ ಎಂಬುದನ್ನು ನೋಡದೆ ಹೊಡೆದುಬಿಡುತ್ತಿದ್ದರು. ಒಂದು ಬಾರಿ ಮೂರ್ತಿಯ ಕ್ಲಾಸಿನಲ್ಲಿ ಇಬ್ಬರು ಹುಡುಗರು ಕಡಲೇಕಾಯಿ ತಿನ್ನುತ್ತಿದ್ದರು. ತಿನ್ನುತ್ತಿದ್ದರೆಂಬುದಕ್ಕಿಂತ ಜೇಬಿನಲ್ಲಿ ತುಂಬಿಕೊಂಡು ತಂದಿದ್ದರೆಂದರೆ ಸರಿ. ಪಕ್ಕದ ಹುಡುಗ ಹಾಗೆಯೇ ಒಬ್ಬನನ್ನು ಒಂದು ಕಾಯಿ ಕೊಡೆಂದು ಕೇಳಿದ. ಅವನು ಮೇಷ್ಟರಿಗೆ ಹೆದರಿ ಕೊಡಲಿಲ್ಲ. ಪಕ್ಕದವನು ಅವನನ್ನು ಕೈಯಿಂದ ಚುಚ್ಚಿದ. ಅವನ ಒದ್ದಾಟದಲ್ಲಿ ಕೈಯಲ್ಲಿದ್ದ ಪುಸ್ತಕ ಕೆಳಕ್ಕೆ ಬಿದ್ದುಹೋಯಿತು. ಪುಸ್ತಕವನ್ನೆತ್ತಿಕೊಳ್ಳಲು ಬಗ್ಗಿದ ಬೆನ್ನಿಗೆ ಮೇಷ್ಟರ ಬೆತ್ತ ಬಾಸುಂಡೆಯ ಬಳುವಳಿ ಕೊಟ್ಟಿತು! ಮತ್ತೊಂದು ಬಾರಿ ಒಬ್ಬ ತನ್ನ ಪಕ್ಕದವನನ್ನು ಗುಂಡುಸೂಜಿಯಿಂದ ಚುಚ್ಚಲು, ಚುಚ್ಚಿಸಿಕೊಂಡವನು ದೂರುಕೊಟ್ಟ. ಆಚಾರ್ಯರು ಕೋಪದಲ್ಲಿ "ಚಾಡಿ ಹೇಳುತ್ತೀಯಾ" ಎಂದು ಚುಚ್ಚಿಸಿಕೊಂಡವನ ಕೈಯಲ್ಲಿ ರಕ್ತ ಬರುವವರೆಗೂ ಹೊಡೆದುಬಿಟ್ಟರು. ಇದರಿಂದ, ಅವರೆಂದರೆ ಹುಡುಗರು ಭಯದಿಂದ ನಡುಗುತ್ತಿದ್ದರು. ಅವರ ಕ್ಲಾಸಿನಲ್ಲಿ ಯಾರೂ ತುಟಿಪಿಟಕ್ಕೆನ್ನುತ್ತಿರಲಿಲ್ಲ.

ಮೂರ್ತಿಗೆ ಮೊದಲ ಪಾಠ ಅನಂತಮೂರ್ತಾಚಾರ್ರದು. ಇನ್ನೆಲ್ಲಿ ಹೊತ್ತಾಗಿ ಹೋದೀತೋ ಎಂದು ಶಾಲೆಗೆ ಅವಸರವಸರವಾಗಿ ಬಂದ.

ದಾರಿಯಲ್ಲೆಲ್ಲಾ ಒಂದೇ ಯೋಚನೆ—

"ಅಮ್ಮ ಇದ್ದಿದ್ದರೆ ಹೀಗಾಗುತ್ತಿರಲಿಲ್ಲ, ಅಮ್ಮ ಇದ್ದಿದ್ದರೆ ಚೆನ್ನಾಗಿರುತ್ತಿತ್ತು!" ಅದು ಹೇಗೆ ಚೆನ್ನಾಗಿರುತ್ತಿತ್ತೋ, ಅದು ಹೇಗಾಗುತ್ತಿತ್ತೋ ಅದು ಗೊತ್ತಿಲ್ಲ! ಆದರೆ "ಅಮ್ಮ ಇದ್ದಿದ್ದರೆ?" ಎಂದು ಅವನ ನಾಡಿನಾಡಿಯೂ ನುಡಿಯುತ್ತಿತ್ತು. ಕ್ಲಾಸಿಗೆ ಬಂದಾಗ ಇನ್ನೂ ೧೦ ನಿಮಿಷವಿತ್ತು. ಹೊರಗೆ ಶಾಲೆಯ ಹುಡುಗರೆಲ್ಲಾ ಒಬ್ಬೊಬ್ಬರಾಗಿ ಬಂದು ಸೇರುತ್ತಿದ್ದರು. ಮೂರ್ತಿ ಶಾಲೆಯ ಮೆಟ್ಟಿಲ ಮೇಲೆ ನಿಂತು ನೋಡಿದ. ಎಲ್ಲೆಲ್ಲೂ

ಹಚ್ಚಹಸುರಿನ ಮೇಲೆ ಹೊಂಬಿಸಿಲು ಹಾಯಾಗಿ ನಿದ್ರೆಹೋಗುತ್ತಿತ್ತು; ಎಳೆತನ, ಆನಂದ ಎಲ್ಲ ಕಡೆಯೂ ತುಂಬಿದಂತಿತ್ತು. ಆದರೆ ಅದೇಕೋ ಏನೋ ಮೂರ್ತಿಗೇನೂ ಬೇಕಾಗಿಲ್ಲ. ಎಂದಿನಂತೆ ಹೃದಯ ಅರಳಲಿಲ್ಲ. ಯಾವುದೋ ನೋವು ಅವನ ಹೃದಯದಲ್ಲಿ ಮನೆಮಾಡಿಕೊಂಡು ಕೊರೆಯುತ್ತಿತ್ತು. ಮೆಟ್ಟಲಿನ ಪಕ್ಕದಲ್ಲಿದ್ದ ಕಂಬವನ್ನೊರಗಿಕೊಂಡು ನಿಂತ ಅವನ ಮುಖದ ಮೇಲೆ ಬಿಸಿಲು ಬಿದ್ದು ಮೆರುಗು ಕೊಟ್ಟಿತ್ತು. ಮೆಲ್ಲಮೆಲ್ಲನೆ ತಾಯಿಯ ನೆನಪಾದಂತೆ ಮೂರ್ತಿಯ ಮುಖ ಕಟುವಾಯಿತು. ಕಣ್ಣಿನಲ್ಲಿ ಕಾಂತಿ ಉಮ್ಮಳಿಸಿ ಬಂತು. ಯಾವುದರ ಪರಿವೆಯೂ ಇಲ್ಲದೆ ಮೂರ್ತಿ ಹಾಗೆಯೇ ಹುಚ್ಚು ಹಿಡಿದವನಂತೆ ತರಗತಿಯೊಳನುಗ್ಗಿದ.

ಆಚಾರ್ಯರು ಪಾಠವನ್ನು ಸ್ವಾರಸ್ಯವಾಗಿ ಹೇಳುತ್ತಿದ್ದರು. ಅದೂ ಧ್ರುವನ ಕಥೆ. ಪದ್ಯದಲ್ಲಿದ್ದುದರಿಂದ ಮನ ನಾಟುವಂತಿತ್ತು. ಪಾಠದಲ್ಲಿ ಮೈಮರೆತಿದ್ದರು ಆಚಾರ್ಯರು. ಧ್ರುವನನ್ನು ಮಲತಾಯಿ ಕಂಡರೀತಿ. ಉತ್ತಾನುಪಾದರಾಯ ಎರಡನೆಯ ಹೆಂಡತಿಗೆ ಮಾರುಹೋದ ಬಗೆ, ಎಳೆಯ ಹುಡುಗನಾದರೂ ನೊಂದ ಜೀವಿ ಧ್ರುವ ತನ್ನ ಹಟಬಿಡದೆ ಕಾಡಿಗೆ ನಡೆದು ಎಡರುಗಳನ್ನೆಲ್ಲಾ ಎದುರಿಸಿ ಕೊನೆಗೂ ತನ್ನ ಹಟಸಾಧಿಸಿದುದು. ಇದನ್ನು ಹೇಳುತ್ತಾ ಹೇಳುತ್ತಾ ಆಚಾರ್ಯರು ತಮ್ಮನ್ನೇ ಮರೆತರು. ಅವರ ಬಾಯಿಂದ ಒಂದೇ ಸಮನಾಗಿ ಮಾತು ಹೊಳೆಯಂತೆ ಹರಿಯುತ್ತಿತ್ತು. ಅವರಂತೆಯೇ ಮೈಮರೆತಿದ್ದ ಮೂರ್ತಿ. ಧ್ರುವ ಹಟಸಾಧಿಸಿದ, ಹಿಡಿದ ಹಟ ಬಿಡಲಿಲ್ಲ. ತಾನೇಕೆ ಬಿಡಬೇಕೆಂದುಕೊಂಡ. ಮಲತಾಯಿಯ ನಡೆ ನುಡಿ ನೆನಪಾಯಿತು. ತನ್ನ ತಾಯಿಯೂ ನೆನಪಾಯಿತು. ತನ್ನ ತಾಯಿ ಹೇಗಿದ್ದಿರಬಹುದು, ಸುನೀತಿಯಂತೆ ಒಳ್ಳೆಯವಳಾಗಿದ್ದಿರಬಹುದೇ? ಪ್ರೇಮ ವಿಶ್ವಾಸ, ವಾತ್ಸಲ್ಯ, ಮಮತೆ, ದಯೆಗಳಿಂದ ತುಂಬಿದ್ದಿರಬಹುದೇ! ಮೂರ್ತಿಯ ಮನಸ್ಸು ಕಲ್ಪನೆಗೋಡಿತು. ತನ್ನ ತಾಯಿಯನ್ನೂ, ತನ್ನ ತಾಯಿಯ ಮೂರ್ತಿಯನ್ನೂ ಚಿತ್ರಿಸಿಕೊಳ್ಳಲಾರಂಭಿಸಿದ. ತಾಯಿಯನ್ನು ನೆನಪಿಗೆ ತಂದುಕೊಳ್ಳಬೇಕೆಂದಾಗಲೆಲ್ಲಾ ಅವನಿಗೆ ತಮ್ಮ ಮನೆಯಂಗಳದಲ್ಲಿ ತೂಗುಹಾಕಿದ್ದ ನಗೆಮುಖದ ಅನ್ನಪೂರ್ಣಾದೇವಿಯ ಚಿತ್ರ ನೆನಪಿಗೆ ಬರುತ್ತಿತ್ತು. ಆ ನಗುಮುಖ ಎಲ್ಲರನ್ನೂ ಕಾಯುವೆನೆನ್ನುವ ಭರವಸೆ

ಕೊಡುವಂತಿತ್ತು. ಆ ಸುಂದರ ರೂಪ, ಆ ಮಿಂಚಿನ ಕಣ್ಣುಗಳು! ಅವನಿಗೆ ಯಾವಾಗಲೂ ತಾಯಿಯ ಆಕೃತಿ ಹಾಗೆಯೇ ತೋರುತ್ತಿತ್ತು. ಈಗಲೂ ಅದೇ ಚಿತ್ರ ಮೂಡಿತು ಮನಸ್ಸಿನಲ್ಲಿ; ಆದರೆ ಆ ತಾಯಿ ಈಗಿಲ್ಲ, ಇಲ್ಲ!

"ಮೂರ್ತಿ, ಮೂರ್ತಿ"

ಮೇಷ್ಟರು ಕೂಗಿದರೂ ಮೂರ್ತಿ ಮೈಮರೆತಿದ್ದವನು ಮಾತನಾಡಲೇ ಇಲ್ಲ. ಆಚಾರ್ಯರಿಗೆ ಒಮ್ಮೆಲೇ ರೇಗಿತು. ಒಂದುಡೇ ಮೂರ್ತಿಯ ಕಾಲಿನ ಮೇಲೊಂದೇಟು ಬಿಗಿದರು.

"ಅಯ್ಯೋ!" ಚೀರುತ್ತಾ ಮೈಯರಿತ ಮೂರ್ತಿ. ಎದುರಿಗೆ ರುದ್ರ ರೂಪಿ ಅನಂತಮೂರ್ತ್ಯಾಚಾರ್ಯರು!

"ಮುಟ್ಠಾಳ? ಸ್ಕೂಲಿನಲ್ಲಿ ನಿದ್ರೆಮಾಡುತ್ತೀಯಾ! ಬೆಳೆದಿದ್ದೀಯಾ ಎಮ್ಮೆ ತೊಮ್ಮಣ್ಣನಂತೆ, ಇರುವುದಿನ್ನೂ ಲೋವರ್ ಸೆಕೆಂಡರಿ! ನಾಚಿಕೆಯಿಲ್ಲ! ತಿಂದುತಿಂದು ಕೊಬ್ಬಿದೀಯಾ, ಹಂದಿ!"

ಒಂದೇ ಸಮನಾಗಿ ಮಾತಿನ ಜತೆಗೆ ಬೆತ್ತದಿಂದ ಏಟುಗಳೂ ಬಿದ್ದುವು. ಮೂರ್ತಿ ಕಲ್ಲಿನಂತೆ ನಿಂತಿದ್ದ; ತಾನು ೧೪ ವರ್ಷವಾದರೂ ಲೋವರ್ ಸೆಕೆಂಡರಿಯಲ್ಲೇ ಇರಲು ಕಾರಣ ತನ್ನ ಮಲತಾಯಿ, ತಾನಲ್ಲ; ಶಾಲೆಗೆ ಬೇಗ ಸೇರಿಸದೇ ಇದ್ದದು ಅವರದೇ ತಪ್ಪು. ತಾನೆಲ್ಲಾ ಕ್ಲಾಸಿನಲ್ಲೂ ಮೊದಲಿಗ ನಾಗಿಯೇ ಬಂದಿರಲಿಲ್ಲವೇ, ಎನ್ನುವ ಚಿಂತೆ ಮಿಂಚಿತು ತಲೆಯಲ್ಲಿ. ಧ್ರುವನ ಹಟ—ಅದನ್ನು ಹಟವೆನ್ನಲಾಗದು; ಮನೋದಾರ್ಢ್ಯವೆನ್ನಬೇಕು. ಕಿರಿಯ ರಲ್ಲಿ ಯಾವುದನ್ನು ಹಟವೆನ್ನುವೆವೋ ಅದನ್ನೇ ಕೀರ್ತಿವಂತರಲ್ಲಿ ಮನೋ ದಾರ್ಢ್ಯವೆನ್ನುತ್ತೇವೆ! ಧ್ರುವನ ಮನೋದಾರ್ಢ್ಯ ಮೂರ್ತಿಗೂ ಬಂದಂ ತಾಗಿತ್ತು. ಬೆತ್ತ ಮುರಿಯಿತು; ಜತೆಗೆ ಮೂರ್ತಿಯೂ ನೋವು ತಡೆಯ ಲಾರದೆ ಬೆಂಚಿನ ಕೆಳಕ್ಕುರುಳಿದ, ಕುಸಿದ. ಮೂರು ದಿನವಾಗಿತ್ತು ಊಟ ಮಾಡಿ, ಬಳಲಿದ ಜೀವ ಏಟು ತಡೆಯಲಾರದೆ ಹೋದ!

ಆಚಾರ್ಯರಿಗೆ, ಅಚಾತುರ್ಯ ನಡೆದುಹೋಯಿತೆನಿಸಿ ತಕ್ಷಣವೇ ನೀರು ತರಿಸಿ ತಲೆಗೆ ತಟ್ಟಿದರು. ಹೋಟಲಿನಿಂದ ಹಾಲು ತರಿಸಿ ಕುಡಿಯಲು ಕೊಟ್ಟು ಕೊಂಚ ಸಮಾಧಾನಮಾಡಿದರು. ಆ ವಿಕಾರಾಕೃತಿಗೂ ಹೃದಯ

ದಲ್ಲಿ ವಿಶ್ವಾಸವಿದೆ, ಪ್ರೇಮವಿದೆಯೆಂಬುದು ಅಂದು ಶಾಲೆಯವರಿಗೆ ಮೊಟ್ಟ ಮೊದಲು ಅರಿವಾಯಿತು.

ಮೂರ್ತಿ ಮನೆಗೆ ಹಿಂತಿರುಗಿದಾಗ ಬಹು ಸುಸ್ತಾಗಿದ್ದ. ಬಿಸಿಲಿನಲ್ಲಿ ಬಂದುದು, ಊಟವಿಲ್ಲದುದು, ಎಲ್ಲಕ್ಕೂ ಕಲಶವಿಟ್ಟಂತೆ ಮೈಮುರಿಯ ಏಟು ಇವೆಲ್ಲಾ ಅವನನ್ನು ಹಣ್ಣಾಗಿಸಿದ್ದುವು. ಮನೆಗೆ ಬಂದವನೇ ನೇರವಾಗಿ ಅಂಗಳದಲ್ಲಿದ್ದ ಅನ್ನಪೂರ್ಣೆಯ ಚಿತ್ರವನ್ನೆತ್ತಿಕೊಂಡು ತನ್ನ ಕೋಣೆಗೆ ಹೋಗಿ ಬಿದ್ದುಕೊಂಡ. ಒಂದೇ ಸಮನೆ ಅದರ ಕಡೆಗೇ ನೋಡುತ್ತಿದ್ದ; ಹೃದಯಕ್ಕೆ ಸಮಾಧಾನ ನೀಡುವವರು ಬೇಕಾಗಿತ್ತು. ನೊಂದ ಜೀವನಕ್ಕೆ ವಿಶ್ವಾಸಬೇಕಾಗಿತ್ತು, ಪ್ರೇಮಬೇಕಾಗಿತ್ತು. ಯಾರಾದರೂ ಅವನೆದೆಯ ಕೊರತೆ ತುಂಬಿಕೊಡುವವರು ಬೇಕಾಗಿತ್ತು. ಅದೇಕೋ ಏನೋ ತಂದೆ ಆಗಾಗ ತೋರುತ್ತಿದ್ದ ಅಲ್ಪವಿಶ್ವಾಸ ಮಲತಾಯಿ ಯಾವಾಗಲೂ ತೋರುತ್ತಿದ್ದ ತಾತ್ಸಾರದಲ್ಲಿ ಮುಳುಗಿಹೋಗಿತ್ತು—ನಾಶವಾಗಿತ್ತು. ತಾಯಿಯ ಪ್ರೇಮವಿಲ್ಲದ ಮೂರ್ತಿಗೆ ಜಗತ್ತೆಲ್ಲವೂ ಶೂನ್ಯವಾಗಿತ್ತು. ತನಗೆ ಒಲವು ನೀಡಿ ಸಮಾಧಾನಕೊಡುವವರಾರೂ ಇಲ್ಲವೆನಿಸಿತು. ಚಿತ್ರವನ್ನೇ ದಿಟ್ಟಿಸಿ ನೋಡುತ್ತಿದ್ದ ಮೂರ್ತಿಯ ಕಣ್ಣುಗಳಲ್ಲಿ ನೀರು ಪಳಪಳ ಸುರಿಯಲಾರಂಭಿಸಿತು. ಅಮ್ಮ ಹೇಗಿದ್ದಳೆಂಬುದನ್ನು ತಿಳಿಯಬೇಕೆನ್ನಿಸಿತು; ಆದರೆ ಕೇಳುವುದಾದರೂ ಯಾರನ್ನು? ಹಾಗೆಯೇ ಚಿಂತಿಸುತ್ತಾ ನಿದ್ರೆಹೋದ ಮೂರ್ತಿ.

ಸಂಜೆ ಬಂದು ರಾಮಣ್ಣ ಕೂಗಿದಾಗಲೇ ಮೂರ್ತಿಗೆಚ್ಚರ! ಹಾಸಿಗೆಯೆಲ್ಲಾ ಬೆವರಿನ ಮುದ್ದೆಯಾಗಿತ್ತು. ಮೂರ್ತಿ ಕನಸು ಕಂಡಿದ್ದ; ತಾಯಿ ಬಂದು ಅವನಿಗೇನೇನೋ ಅವ್ಯಕ್ತವಾಗಿ, ಅರಿವಿಗೆ ನಿಲುಕದುದನ್ನು ಹೇಳಿ ಹೋಗಿದ್ದಳು. ಆದರೆ ಅವನಿಗೆ ಅದರಿಂದೆಷ್ಟೋ ಹಿಗ್ಗಾಗಿತ್ತು.

"ಊಟವಾಯಿತೇನೋ?" ಎಂದರು ರಾಮಣ್ಣ ಅವನನ್ನೆಚ್ಚರಿಸಿ.

ಮೂರ್ತಿ ಅಂದೂ ಊಟಮಾಡಿರಲಿಲ್ಲ. ಉತ್ತರಕೊಡದೆ ಸುಮ್ಮನಿದ್ದ. ರಾಮಣ್ಣ ಒಳಕ್ಕೆ ಹೋದರು. ಲಕ್ಷಮ್ಮ ಹಿತ್ತಿಲ ಕಡೆ ಕೂತಿದ್ದರು, ಹೊರಗಾಗಿ. ಆದ್ದರಿಂದ ಹುಡುಗನನ್ನು ಕೇಳುವವರೇ ಇಲ್ಲ. ರಾಮಣ್ಣನಿಗೆ ಬಹಳ ದುಃಖವಾಯಿತು. ಮೂರು ದಿನದಿಂದ ಅನ್ನವಿಲ್ಲದೆ ಸೊರಗುತ್ತಿದ್ದಾನಲ್ಲಾ ಎಂದು ಮೂರ್ತಿಯನ್ನೊಳಕ್ಕೆ ಕರೆದುಕೊಂಡು ಹೋಗಿ ತಾವೇ ಅನ್ನ ಹಾಕಿದರು. ಮೂರ್ತಿಗೆ ಅಂದಿನ ಊಟ ಅಮೃತದಂತಿತ್ತು.

" ಅಣ್ಣಾ "

" ಊಂ "

" ಅಮ್ಮ ಹೇಗಿದ್ದಳಣ್ಣಾ ? "

" ಹೂಂ ! " ಎಂದು ನಿಟ್ಟುಸಿರಿಟ್ಟರು ರಾಮಣ್ಣ.

" ಹೇಗಿದ್ದಳಣ್ಣಾ ಅಮ್ಮ ? " ಮೂರ್ತಿಯ ದನಿ ಗದ್ಗದಿತವಾಯಿತು.

" ಮೂರ್ತಿ, ನಿಮ್ಮಮ್ಮ ಮುತ್ತಿನಂಥವಳು. ಕರುಣೆ, ಪ್ರೇಮ, ವಿಶ್ವಾಸ, ಮಮತೆಗಳೆಲ್ಲಾ ತುಂಬಿತ್ತು. ಒಂದು ದಿನವಾಗಲೀ ಕೋಪಗೊಳ್ಳಲಿಲ್ಲ. ಒಂದು ಸಾರಿಯಾಗಲೀ ಬಿರುಮಾತಾಡಲಿಲ್ಲ ಎರಡು ವರ್ಷದ ಕಾಲ ನನ್ನ ಮನೆ ಬೆಳಗಿಸಿದಳು ; ಆಮೇಲೆ ನಿನ್ನನ್ನು ಹೆತ್ತು ಬಾಣಂತಿಕಾಯಿಲೆಯಿಂದ ಹೋಗಿಬಿಟ್ಟಳು ". ಕಣ್ಣೊರೆಸಿಕೊಂಡರು ರಾಮಣ್ಣ.

" ನೋಡೋಕೆ ಹೇಗಿದ್ದಳಣ್ಣಾ ? "

" ಎಲ್ಲಾ ನಿನ್ನ ಹಾಗೆಯೇ ಮಗು. ಕೊಂಚವೂ ವ್ಯತ್ಯಾಸವೇ ಇಲ್ಲ. ಎಲ್ಲ ನಿನ್ನ ಮುಖದ ಮಾಟದಂತೆಯೇ ! ನೀ ಹುಟ್ಟಿದಾಗ ಎಷ್ಟು ಆನಂದ, ಚೊಚ್ಚಲು ಗಂಡಾಯಿತೆಂದು ಎಷ್ಟು ಸಂತೋಷ ! ಯಾವಾಗಲೂ ನಿನ್ನನ್ನೇ ನೋಡುತ್ತಿದ್ದಳು. ನೀನಿನ್ನೂ ಎಳೆಯ ಕೂಸು. ಇನ್ನೂ ತಾಯಿಯ ಗುರುತು ಕೂಡ ನಿನಗೆ ಹತ್ತಿರಲಿಲ್ಲ. ನಿನ್ನ ಬಚ್ಚುಬಾಯಲ್ಲಿ ನಗು ಸುಳಿದರೆ ಸಂತೋಷ, ನೀನು ಅತ್ತರೂ ಅದೊಂದು ಹಿಗ್ಗು ; ನಿನ್ನ ಧ್ವನಿಯಲ್ಲೇ ಸ್ವರ್ಗವಿತ್ತು ! ನಿನ್ನನ್ನು ದೊಡ್ಡವನಾಗಿ ಬೆಳೆಸಿ, ನೀನು ಕೀರ್ತಿ ಸಂಪಾದಿಸಿ ದೊಡ್ಡ ಕೆಲಸದಲ್ಲಿ ಸೇರಿಕೊಂಡು ಸುಖವಾಗಿರಬೇಕೂಂತಿತ್ತು ಅವಳ ಆಸೆ. ಎಷ್ಟೊಂದು ಆಸೆ, ಆಕಾಂಕ್ಷೆ ! ಆದರೆ.... "

ರಾಮಣ್ಣನವರಿಗೆ ಮುಂದೆ ಮಾತೇ ಹೊರಡದಾಯಿತು. ಮೂರ್ತಿಯನ್ನು ತಬ್ಬಿಕೊಂಡು ಗಳಗಳನೆ ಅತ್ತುಬಿಟ್ಟರು.

" ಅಣ್ಣಾ, ಅಣ್ಣಾ "

" ಹೂಂ, ಮೂರ್ತಿ "

" ಅಮ್ಮ ಯಾಕಣ್ಣಾ ಸತ್ತುಹೋದಳು ? "

"ಬಾಣಂತಿಯಾದಾಗ ಆರೈಕೆ ಸರಿಯಾಗಲಿಲ್ಲ. ಜ್ವರ ಬಂತು, ಎಷ್ಟೊಂದು ಔಷಧಮಾಡಿದರೂ ಏನೂ ಪ್ರಯೋಜನವಾಗಲಿಲ್ಲ, ಹೋಗಿಬಿಟ್ಟಳು. ಆದರೆ ಎಷ್ಟೊಂದು ಒಳ್ಳೆಯವಳು ಅನ್ನುತ್ತೀ ಮೂರ್ತಿ! ನಿನಗೆ ಕಷ್ಟವಾಗಕೂಡದು, ಹೇಗೋ ನೀನು ಸುಖವಾಗಿದ್ದರೆ ಸರಿ, ನಿನಗೆ ಸರಿಯಾಗಿ ವಿದ್ಯೆ ಕಲಿಸಬೇಕು ಅಂತ ನನಗೆ ಹೇಳಿಹೇಳಿ ಹೋದಳು".

"ಇನ್ನುಮೇಲೆ ಸರಿಯಾಗಿ ಓದ್ಕೋತೀನಣ್ಣಾ; ಯಾರ ತಂಟೆಗೂ ಹೋಗೋಲ್ಲ".

"ನಮ್ಮನ್ನು ಬಿಟ್ಟು ದೇವರಲ್ಲಿ ಸೇರಿದಳು".

"ಆದ್ಯಾಕಣ್ಣಾ ದೇವರು ಅಮ್ಮನ್ನ ಮಾತ್ರ ಕರೆದುಕೊಂಡ?"

"ಅವನಿಷ್ಟ!"

ಮೂರ್ತಿ ತನ್ನ ಎಳೆತನದ ಆಟಗಳನ್ನೆಲ್ಲಾ ತುಳಿಯುವ ಮನಸ್ಸು ಮಾಡಿದ. ಹಟಸಾಧಿಸುವ ಪಣತೊಟ್ಟ. ತನ್ನ ತಾಯಿಯ ಮಾತನ್ನು ನಿಜಗೊಳಿಸಬೇಕೆಂದುಕೊಂಡ. ಆದರೆ ಒಂದು ಮಾತು ನಿಜ; ತನ್ನ ಸುಖಕ್ಕಾಗಿ ಅಷ್ಟೊಂದು ಹಂಬಲಿಸಿದ ತಾಯಿ ತಾನೇ ಇಂದಿಲ್ಲ! ಅಮ್ಮನನ್ನು ಆಗಲೇ ಏಕೆ ಕರೆದುಕೊಂಡುಬಿಟ್ಟನೋ ದೇವರು ಎಂದು ಮೂರ್ತಿಯ ಮನಸ್ಸು ಒಂದೇ ಸಮನೆ ಪ್ರಶ್ನಿಸುತ್ತಿತ್ತು. ಅದು ಬಗೆಹರಿಯದ ಸಮಸ್ಯೆ!

"ಮೂರ್ತಿ, ಇನ್ನೊಂದು ಮಾತು. ನಿನಗಿಷ್ಟ ಬಂದಂತಿರು. ಆದರೆ ಅವಳನ್ನು ಮಾತ್ರ ರೇಗಿಸಬೇಡ, ನೋಯಿಸಬೇಡ. ಅವಳಿಗೂ ಮನಸ್ಸಿಗೆ ನೋವಾಗುತ್ತೆ".

ಮಲತಾಯಿಯ ಮಾತೇಳುತ್ತಲೇ ಮೂರ್ತಿಯ ಮನಸ್ಸು ಕಟುವಾಯಿತು. ಅಮ್ಮನಿಲ್ಲದುದರಿಂದ ತಾನೇ ಈ ಮಲತಾಯಿ ಬಂದುದು. ಅಮ್ಮನಿದ್ದಿದ್ದರೆ ಇವಳಿರುತ್ತಲೇ ಇರಲಿಲ್ಲ. ಆಗ ಎಷ್ಟು ಸುಖವಾಗಿರಬಹುದಾಗಿತ್ತು; ತನ್ನ ಆಟಪಾಟಗಳಿಗೆ ಯಾರೇ ಆಗಲಿ ತೊಡಕು ತರುತ್ತಿರಲಿಲ್ಲ. ಮೂರನೆಯ ಮನೆಯ ಚಂದ್ರು ಇಲ್ಲವೇ, ಅವನೆಷ್ಟು ಚೇಷ್ಟೆಮಾಡುತ್ತಾನೆ, ಗಲಾಟೆಮಾಡುತ್ತಾನೆ. ಆದರೆ ಅವನ ತಾಯಿ ಅವನನ್ನೆಷ್ಟು ಪ್ರೀತಿಸುತ್ತಾರೆ. ತನ್ನನ್ನು ಮಲತಾಯಿ ಹಾಗೆ ಕಾಣುವಳೇನು? ಸಾಧ್ಯವಾದಷ್ಟು ಬೇಗ ಮಲತಾಯಿಯಿಂದ ದೂರವಾಗಬೇಕೆನ್ನಿಸಿತು ಮೂರ್ತಿಗೆ,

"ಅಣ್ಣಾ ಹಾಸನಕ್ಕೆ ಈಗಲೇ ಕಳಿಸಿಬಿಡಣ್ಣಾ" ಎಂದ.

"ಈ ವರ್ಷದ ಪರೀಕ್ಷೆ ಮುಗಿದು ಹೋಗಲಿ ಬಿಡೋ. ಪರೀಕ್ಷೆ ಮುಗಿಸಿಕೊಂಡು ಹೋಗಿ ಅಲ್ಲಿಯೇ ಹೈಸ್ಕೂಲು ಸೇರುವೆಯಂತೆ" ಎಂದರು ರಾಮಣ್ಣ ಮೆಲ್ಲನೆ.

"ಹೂಂ" ಎಂದ ಅರೆಮನಸ್ಸಿನಲ್ಲಿ ಮೂರ್ತಿ.

ಮೂರ್ತಿ ಊರಿನ ಹುಡುಗರ ಜತೆಗೆ ಆಡಲು ಹೋಗುವುದನ್ನೇ ನಿಲ್ಲಿಸಿ ಬಿಟ್ಟ. ಅವರೊಂದಿಗೆ ಆಡಿದರೆತಾನೇ ಜಗಳ, ಬೈಗಳು? ಅದೇ ಬೇಡ ವೆಂದು ಸಂಜೆಯಾದೊಡನೆ ನೇರವಾಗಿ ಮನೆಗೆ ಬರುತ್ತಿದ್ದ. ತಿಂಡಿ ಯೇನಾದರೂ ಇದ್ದರೆ ತಿಂದು, ಮನೆ ಬಿಟ್ಟು ಕುಕ್ಕನಹಳ್ಳಿ ಕೆರೆಯ ಏರಿಯ ಮೇಲೆ ಕುಳಿತು ಕಾಲಕಳೆಯುತ್ತಿದ್ದ.

ಮೂರ್ತಿ ಸ್ವಭಾವವಾಗಿಯೇ ಎಳೆತನವುಳ್ಳವನು. ಈಗ ಅದನ್ನೇ ಕತ್ತರಿಸಿ ಹಾಕುವ ಸ್ಥಿತಿಯೊದಗಿತ್ತು. ಅದನ್ನೇನೋ ನಡೆಸಿದ. ಆದರೆ ಅದರಿಂದ ಅವನ ಮನಸ್ಸಿನಲ್ಲಿ ದುಗುಡ ಮೂಡಲಾರಂಭವಾಯಿತು. ತಾಯಿಯ ನೆನಪು ಕ್ಷಣೇ ಕ್ಷಣೇ ಬರುತ್ತಿತ್ತು. ತನ್ನ ತಾಯಿಯನ್ನು ತನಗುಳಿಸಿಕೊಡ ಲಾರದ ದೇವರು ಒಳ್ಳೆಯವನೇ ಎಂದೂ ಒಮ್ಮೊಮ್ಮೆ ಚಿಂತೆ. ಇದಕ್ಕೆ ಅನುವಾಗಿ ಕೆರೆಯ ಏರಿಯ ಮೇಲೆ ದಿನವೂ ಕಾಣುತ್ತಿದ್ದ ಹುಚ್ಚ! ಅವ ನಾಡುತ್ತಿದ್ದ ಮಾತುಗಳು ಸುಮ್ಮನೆ ಎದೆಯಲ್ಲಿ ಕೊರೆಯುತ್ತಿದ್ದುವು. ತಾಯಿಯ ನೆನಪಾದಾಗಲೆಲ್ಲ ಹುಚ್ಚನ ಮಾತುಗಳು ಧಿಗ್ಗನೇಳುತ್ತಿದ್ದುವು. ಮೊದಲ ಬಾರಿ ಕೆರೆಯ ಏರಿಯ ಮೇಲೆ ನಡೆದಾಗ ಅವನ ಮಾತುಗಳನ್ನು ಮೂರ್ತಿ ಗಮನಿಸಿರಲಿಲ್ಲ. ಹುಚ್ಚ, ಏನೋ ಹುಚ್ಚುಹುಚ್ಚಾಗಿ ಅಂದು ಕೊಳ್ಳುವನೆಂದುಕೊಂಡಿದ್ದ. ಆದರೆ ದಿನೇ ದಿನೇ ಅವನ ಮಾತು ಕಿವಿಯಲ್ಲಿ ಪ್ರತಿಧ್ವನಿತವಾಗುತ್ತಿತ್ತು; ಅದರ ಹಿಂದೆ ಏನೋ ಇದೆಯೆನ್ನಿಸಿತು. ಹುಚ್ಚ ಯಾರನ್ನೋ ಪ್ರೇಮಿಸಿದನಂತೆ, ಆಕೆ ಅವನೆದುರು ಮನೆಯವಳೇ; ಅವಳು ಇನ್ನು ಯಾರನ್ನೋ ಮದುವೆಯಾದಳು; ಇವನು ಹುಚ್ಚನಾದ! ಯಾವಾ ಗಲೂ ಅವಳದೇ ಯೋಚನೆ, ಪ್ರಪಂಚ ತನಗೆ ಮೋಸಮಾಡಿದುದೇ ಮಾತು. ಮೂರ್ತಿ ಕೆರೆಯ ಏರಿಯ ಮೇಲೆ ಹೋಗಿ ನಿಂತು, ಸೂರ್ಯ ಸಾಯುವ ಮುನ್ನ ರಕ್ತ ಕಾರಿ, ತನ್ನ ನೀಲಿಯ ಕಿಂಕಾಪನ್ನೆಲ್ಲಾ ರಕ್ತವರ್ಣವಾಗಿಸಿ

ಕೆರೆಯ ನೀರು ರಕ್ತದಂತೆ ಕೆಂಪಾಗಿಸುವುದನ್ನೇ ಎವೆಯಿಕ್ಕದೆ ನೋಡುತ್ತಿದ್ದಾಗ ಹಿಂದಿನಿಂದ ಹುಚ್ಚ ಬಂದು ಜೋರಾಗಿ ನಕ್ಕ! ಮೂರ್ತಿ ಬೆಚ್ಚಿದ. ತಕ್ಷಣವೇ ಧೈರ್ಯ ತಂದುಕೊಂಡ, ಹುಚ್ಚ ತನ್ನನ್ನೇನುತಾನೇ ಮಾಡ ಬಲ್ಲನೆಂದು! ಹುಚ್ಚ ಪಕ್ಕದಲ್ಲಿ ನಿಂತು ಗಹಗಹಿಸಿ ನಕ್ಕರೂ ಮೂರ್ತಿ ಸುಮ್ಮನೆ ಅಲೆಗಳ ಕಡೆಗೇ ನೋಡುತ್ತಿದ್ದ. ಹುಚ್ಚ ಜೋರಾಗಿ ಕೂಗಿದ, ಅರಚಿದ!—

"ಪ್ರಪಂಚ ಬಹಳ ಕೆಟ್ಟದು. ನಿನಗೆ ಬೇಕಾದುದನ್ನು ಕಿತ್ತುಕೊಳ್ಳುತ್ತದೆ. ನಿನ್ನನ್ನು ಮೋಸಗೊಳಿಸುತ್ತದೆ. ನಿನ್ನನ್ನು ತುಳಿಯುತ್ತದೆ. ಹುಚ್ಚು ಪ್ರಪಂಚದಲ್ಲಿ ಯಾವುದೂ ಸರಿಯಿಲ್ಲ!"

"ಹುಚ್ಚುಪ್ರಪಂಚದಲ್ಲಿ ಯಾವುದೂ ಸರಿಯಿಲ್ಲ! ನಿನಗೆ ಬೇಕಾದುದನ್ನು ಕಿತ್ತುಕೊಳ್ಳುತ್ತದೆ!"

—ಎಂತಹ ಮಾತು! ವಿಚಿತ್ರ ಮಾತು ಎನಿಸಿತು ಮೂರ್ತಿಗೆ.

"ಹೋ! ಹೋ! ಹೋ! ಬಯಸಿದ್ದೊಂದೂ ನಿನಗಿಲ್ಲ! ನಿನಗೆ ಬೇಕಾದುದೆಲ್ಲಾ ಬೇರೆಯವರಿಗೇ!" ಹುಚ್ಚ ಮತ್ತೆ ಕೂಗಿದ.

ಇನ್ನು ಅಲ್ಲಿ ನಿಲ್ಲಲಾರದೆ ಮೂರ್ತಿ ಎದ್ದು ಬೇರೆ ಕಡೆಗೆ ಹೋಗಿದ್ದ. ಹುಚ್ಚನ ಮಾತಿಗೆ ಮನಸ್ಸು ಮಾರುಹೋಗಿ ಮೊರ್ದನಿಕೊಡುತ್ತಿತ್ತು. ಹುಚ್ಚನ ಮಾತಿನಲ್ಲಿ ನಿಜವಿದೆಯೆನ್ನಿಸಿತು. ಆ ವೇಳೆಗೆ ಮತ್ತೆ ಹುಚ್ಚನ ಮಾತುಗಳು ಗಾಳಿಯಲ್ಲಿ ತೇಲಿಕೊಂಡು ಬಂದುವು.—

"ಬರುವವರು ಬರುತ್ತಾರೆ. ಹೋಗುವವರು ಹೋಗುತ್ತಾರೆ. ಆದರೆ ನಮಗೆ ಬೇಕಾದವರು ಮಾತ್ರ ಇಲ್ಲ. ನಮಗೆ ಬೇಕಾದುದು ಇಲ್ಲ!"

ಒಂದೇ ಸಮನಾಗಿ ಚಿಂತಿಸಲಾರಂಭಿಸಿದ ಮೂರ್ತಿ. ನಮಗೆ ಬೇಕಾದುದು ಒಂದೂ ಇಲ್ಲ. ಯಾವುದೂ ಸರಿಯಿಲ್ಲ! ಸರಿಯಿದ್ದಿದ್ದರೆ ತಾಯಿ ಉಳಿಯುತ್ತಿರಲಿಲ್ಲವೇ? ಮೂರ್ತಿ ಹೊರ ನೋಟಕ್ಕೆ ಮಂಕಾಗುತ್ತ ಬಂದ. ಯಾವಾಗಲೂ ಚಿಂತೆ, ಚಿಂತೆ. ಅಂತರ್ಮುಖಿಯಾಗಿ ಒಳಗೇ ನೋವನ್ನನುಭವಿಸಲಾರಂಭಿಸಿದ. ಯಾರೊಂದಿಗೂ ಹೆಚ್ಚು ಮಾತಿಲ್ಲ, ಯಾರೊಂದಿಗೂ ಆಟಪಾಟವಿಲ್ಲ! ತಾನಾಯಿತು, ಶಾಲೆಯಾಯಿತು, ಸಂಜೆ ಕೆರೆಯ ಏರಿ

ಯಾಯಿತು. ಮಲತಾಯಿಯೊಂದಿಗೆ ಮಾತು ಕೂಡ ಆಡುತ್ತಿರಲಿಲ್ಲ. ತಮ್ಮಿಬ್ಬರ ನಡುವೆ ಅಗಾಧ ಕಡಲಿದೆಯೆನ್ನುವಂತಿತ್ತು ಅವನ ಭಾವ!

ಲಕ್ಷ್ಮಮ್ಮನವರಿಗೆ ಮೂರ್ತಿಯ ರೀತಿ ಹೊಸದಾಗಿ ಕಂಡರೂ ಸರಿ ಬೀಳಲಿಲ್ಲ. ಯಾವಾಗಲೂ ಯಾವುದಕ್ಕಾದರೂ ಗೊಣಗುತ್ತಲೇ ಇರುತ್ತಿದ್ದರು. ಮೂರ್ತಿಯನ್ನು ಬಯ್ಯಲು ಯಾವ ರೀತಿಯೂ ಅನುವೇ ಸಿಗುತ್ತಿರಲಿಲ್ಲ. ಅವನು ವಿರೋಧಿಸಿದರೆ ತಾನೇ ಬಯ್ಯುವುದಕ್ಕೆ! ಯಾವಾಗಲೋ ಬಂದು ಒಂದಿಷ್ಟು ಅನ್ನ ತಿಂದು ಹೊರಟುಹೋಗುತ್ತಿದ್ದ. ನೆರೆ ಹೊರೆಯವರಿಂದ ಚಾಡಿಯ ಮಾತೇ ಇಲ್ಲ. ಆದರೂ ಲಕ್ಷ್ಮಮ್ಮನವರು ಅವನಿದ್ದ ಕೊಂಚ ಹೊತ್ತೇ ಏನಾದರೂ ಅನ್ನುತ್ತಿದ್ದರು. ಅದು ಮೂರ್ತಿಯ ಮನಸ್ಸನ್ನು ನೋಯಿಸುತ್ತಿದ್ದರೂ ಅವನು ಮಾತ್ರ ತುಟಿಯಲುಗಿಸುತ್ತಲೂ ಇರಲಿಲ್ಲ. ಆದರೆ ಒಂದು ದಿನ ಮಾತ್ರ ಅವನ ತಾಳ್ಮೆ ಕಟ್ಟೆಯೊಡೆಯಿತು.

ಅಂಗಳದಲ್ಲಿದ್ದ ಅನ್ನಪೂರ್ಣೆಗೂ ಅವನ ತಾಯಿಗೂ ಹೇಗೋ ಹೃದಯ ಗಂಟುಹಾಕಿತ್ತು. ಆ ಪಟಕ್ಕೆ ದಿನವೂ ಊದುಬತ್ತಿ ಹಚ್ಚಿಡುತ್ತಿದ್ದ ಮೂರ್ತಿ. ಊದುಕಡ್ಡಿ ಹಚ್ಚಿಟ್ಟರೆ ಅವನಿಗೇನೋ ಒಂದು ಬಗೆಯ ಸಮಾಧಾನ. ರಾಮಣ್ಣನವರೂ ಅದಕ್ಕೆ ಅಭ್ಯಂತರ ತರಲಿಲ್ಲ. ಒಂದು ದಿನ ಮೂರ್ತಿ ಊದುಕಡ್ಡಿ ಹಚ್ಚಿಟ್ಟು ತನ್ನ ಕೋಣೆಗೆ ಹೋಗಿ ಹಿಂತಿರುಗುವ ವೇಳೆಗೆ ಪಟಕ್ಕೆ ಸಿಕ್ಕಿಸಿದ್ದ ಊದುಕಡ್ಡಿಯನ್ನು ಕಿತ್ತು ಆರಿಸುತ್ತಿದ್ದಳು ಲಕ್ಷ್ಮಮ್ಮ!

"ಈ ಮುಂಡೇಮಗನಿಗೆ ಇದು ಬೇರೆ ದಂಡ!" ಎಂದು ಗೊಣಗಿದ್ದು ಮೂರ್ತಿಯ ಕಿವಿಗೆ ಬಿತ್ತು! ಪಟದಿಂದ ಊದುಕಡ್ಡಿ ತೆಗೆದುದಿರಲಿ, ತನ್ನನ್ನು ಮುಂಡೇಮಗನೆಂದು ತನ್ನ ತಾಯಿಗವಮಾನಮಾಡಿದಳಲ್ಲಾ ಎಂದು ಮೂರ್ತಿಗೆ ರಕ್ತ ಕುದಿಯಿತು. ತನ್ನ ಕೋಣೆಯಿಂದ ಹೊರಬಂದು ಕೋಪದಲ್ಲಿ ಅಡಿಗೆಮನೆಯ ಕಡೆಗೆ ನಡೆದ. ಬಾಗಿಲು ಮುಚ್ಚಿದ್ದುದನ್ನು ಜೋರಾಗಿ ನೂಕಿದ. ಬಾಗಿಲ ಹಿಂದೆ ನಿಂತಿದ್ದ ಲಕ್ಷ್ಮಮ್ಮನವರ ಹಣೆಗೆ ಚಿಲಕ ಬಡಿದು ರಕ್ತ ಬಂತು.

"ನನ್ನನ್ನು ಕೊಂದುಬಿಡು! ರಾಕ್ಷಸ! ನಾನೇನು ಪಾಪಮಾಡಿದ್ದೆನೋ ಈ ಪಿಶಾಚಿಯ ಕೈಯಲ್ಲಿ ಇಷ್ಟು ಸಂಕಟಪಡುವುದಕ್ಕೆ! ಅಯ್ಯೋ! ದೇವರೇ!

ನನ್ನನ್ನೇಕೆ ಈ ನರಕಕ್ಕೆ ತಂದೆಸೆದೆ" ಒಂದೇ ಸಮನಾಗಿ ಅಬ್ಬರದಿಂದ ಬೊಬ್ಬೆ ಯಿಟ್ಟರು ಲಕ್ಷಮ್ಮ.

ಮೂರ್ತಿಯ ಕೋಪ ಮತ್ತೂ ಹೆಚ್ಚಿತು. ಲಕ್ಷಮ್ಮ ಅವನ ಕಡೆ ನೋಡಿ ಬೊಬ್ಬೆ ಮತ್ತೂ ಹೆಚ್ಚಿಸಿದರು. ಕೆಳಗುರುಳಿ ಹೊರಳಿದರು. ಈ ಅವಾಂತರದಲ್ಲಿ ಬೇಳೆಯ ಪಾತ್ರೆ ಉರುಳಿತು. ಕಾಲಮೇಲೆ ಬಿಸಿನೀರು ಸಿಡಿದು ಬೊಬ್ಬೆಯಾಯಿತು. ರಾಮಣ್ಣ ಸ್ನಾನದಮನೆಯಿಂದ ಓಡಿಬಂದರು. ಲಕ್ಷಮ್ಮ ಚಾಡಿ ಚುಚ್ಚಿದರು: "ನೋಡಿ, ಬಂದು ಕೋಪಕ್ಕೆ ಬಾಗಿಲನ್ನು ನೂಕಿ ಪೆಟ್ಟು ಬೀಳಿಸಿ ಅದು ಸಾಲದೂಂತ ಬೇಳೆಯ ಪಾತ್ರೆ ಉರುಳಿಸಿ ಮೈ ಮೇಲೆಲ್ಲಾ ಬೊಬ್ಬೆ ಬರುವಂತೆ ಮಾಡಿದಾನೆ. ನನಗಿಲ್ಲಿ ಇರಲಾಗುವುದಿಲ್ಲ. ಇಲ್ಲ ಅವನಿರಲಿ–ಇಲ್ಲ ನಾನಿರುತ್ತೇನೆ. ಇಬ್ಬರೂ ಒಂದಿಗೇ ಇರುವುದಸಾಧ್ಯ! ಇವತ್ತೇ ಇದನ್ನಿತ್ಯರ್ಥಮಾಡಿ."

ಮೂರ್ತಿಗೆ ತಂದೆಯನ್ನು ನೋಡಿದೊಡನೆಯೇ ಕೋಪ ತಣ್ಣಗಾಯಿತು. ಮರುಮಾತಿಲ್ಲದೆ ತಲೆ ತಗ್ಗಿಸಿ ರೂಮಿನ ಕಡೆ ನಡೆದ. ರಾಮಣ್ಣ ಅವನ ತೋಳನ್ನು ಭದ್ರವಾಗಿ ಹಿಡಿದು ನಿಲ್ಲಿಸಿದರು. "ಅವಳನ್ನು ಸಾಯಿಸಬೇಕಂ ದೇನೋ ನಿನ್ನಿಷ್ಟ? ಸಾಯಿಸಿಬಿಡು; ತೃಪ್ತಿಪಟ್ಟುಕೋ!" ಎಂದು ಕೂಗಿ ಕೆನ್ನೆಗೊಂದು ಬಿಗಿದರು.

ಮೂರ್ತಿ ಒಂದು ಬಾರಿ ಅವರನ್ನೇ ದುರುಗುಟ್ಟಿ ನೋಡಿ ತನ್ನ ಕೋಣೆಗೆ ನುಗ್ಗಿ ಹಾಸಿಗೆಯ ಮೇಲೆ ಬಿದ್ದುಕೊಂಡು "ಅಮ್ಮಾ ನೀನಿದ್ದಿದ್ದರೆ! ಇದ್ದಿದ್ದರೆ!" ಎಂದ ಒಂದೇ ಸಮನಾಗಿ ಹೃದಯದಿಂದ ದುಃಖ ಉಮ್ಮಳಿಸಿ ಹರಿದುಬರು ತ್ತಿತ್ತು. ಹುಚ್ಚನ ಮಾತೂ ಇದ್ದಕ್ಕಿದ್ದಂತೆ ನೆನಪಿಗೆ ಬಂತು. ಧಿಗ್ಗನೆದ್ದು ಮನದ ತೆರೆಯ ಮೇಲೆ ಕುಣಿಯಲಾರಂಭವಾಯಿತು.

"ಪ್ರಪಂಚ ಕೆಟ್ಟಿದ್ದು, ಇಲ್ಲಿ ಯಾವುದೂ ಸರಿಯಿಲ್ಲ! ಬಯಸಿದುದು ಸಿಗುವುದಿಲ್ಲ. ಬರುವವರು ಬರುತ್ತಾರೆ! ಹೋಗುವವರು ಹೋಗುತ್ತಾರೆ. ನಮಗೆ ಬೇಕಾದವರು ಮಾತ್ರ ಇಲ್ಲ!"

ತಾಯಿಯ ನೆನಪು ಒಂದೇ ಸಮನಾಗಿ ಬಂದಿತು. ಜತೆಗೆ ಜಗತ್ತು ಕೆಟ್ಟದೇ ಹೌದು, ಕಠಿಣ ಕಲ್ಲು! ಮೋಸದ ಸಂತೆಯೆಂಬ ಭಾವನೆಯೂ

ಮನಸ್ಸಿನಲ್ಲಿ ಮೂಡಿತು. ಈ ಅಶಾಂತಿಯ ಬೇಗೆಯಲ್ಲಿ ಮೂರ್ತಿ ಬೆಂದು ಬಾಡಿದ. ಸುಮ್ಮನೆ ಹೊರಳಾಡಿದ. ಕಣ್ಣುಬಿಟ್ಟು ಛಾವಣಿಯನ್ನೇ ನೋಡುತ್ತಿದ್ದ. ಅಲ್ಲಿ ಹುಚ್ಚನ ಛಾಯೆ, ಹುಚ್ಚನ ಮಾತುಗಳು! ಆಮೇಲೆ ತನ್ನ ತಾಯಿಯ ಕಲ್ಪಿತ ಮೂರ್ತಿ. ಮಲತಾಯಿ ಅಂದ "ಮುಂಡೇಮಗ!" ಎಲ್ಲೆಲ್ಲೂ ತಾಂಡವವಾಡುತ್ತಿತ್ತು. ಅವನೆದೆ ಹಿಂಡುತ್ತಿತ್ತು. ಹಾಗೆಯೇ ಎದ್ದು ಹೊರಟ ಮನೆ ಬಿಟ್ಟು. ಕೆರೆಯ ಏರಿಯ ಮೇಲೆ ಬಂದು ಬಿದ್ದುಗೊಂಡ.

ಮಧ್ಯಾಹ್ನದ ಬಿಸಿಲು ಬಲು ತೀವ್ರವಾಗಿತ್ತು. ಕೆರೆಯ ನೀರು ಥಳ ಥಳಿಸುತ್ತಿದ್ದರೂ ಮೂರ್ತಿಯ ಗಮನ ಆ ಕಡೆ ಹೋಗಲಿಲ್ಲ. ದೂರದಲ್ಲಿ ಒಂದು ಮರದ ನೆರಳು ದೊಡ್ಡದಾಗಿ ಪಸರಿಸಿತ್ತು. ಅದರ ಅಡಿಯಲ್ಲಿ ಒಬ್ಬ ವ್ಯಕ್ತಿ ಕುಳಿತಿದ್ದ. ಮೀನು ಹಿಡಿಯುತ್ತಾ, ತನ್ನಂತೆ ತಾನು ಹಾಡಿಕೊಳ್ಳುತ್ತಿದ್ದ.

"ಹುಂ, ಸುಖದ ನೆರಳಿನಲ್ಲಿ ಹಾಯಾಗಿದ್ದಾನೆ" ಎಂದುಕೊಂಡ ಮೂರ್ತಿ.

ಸಂಜೆ ಮೂರ್ತಿ ಮನೆಗೆ ಬಂದಾಗ ರಾಮಣ್ಣ ಅವನಿಗಾಗಿ ಕಾದಿದ್ದರು. ಮೂರ್ತಿಯನ್ನು ಕಳಿಸುವ ವಿಷಯದಲ್ಲಿ ಹೆಂಡತಿಯೊಡನೆ ಮಾತುಕತೆಯಾಗಿ ಕೊನೆಗೆ ಮಾರನೆಯ ದಿನವೇ ಹಾಸನಕ್ಕೆ ಅವನನ್ನು ಕಳುಹಿಸಿಬಿಡಬೇಕು ಎಂದು ತೀರ್ಮಾನಿಸಿದ್ದರು. ಹೋಗಲಿ, ಅಲ್ಲಾದರೂ ಸುಖವಾಗಿರಲಿ ಎಂದು ರಾಮಣ್ಣನವರ ಇಚ್ಛೆ; ಸದ್ಯ, ತೊಲಗಿತಲ್ಲಾ ಶನಿ ಎಂದು ಲಕ್ಷ್ಮಮ್ಮನವರಿಗೆ ಹಿಗ್ಗು!

"ನೋಡು ಮೂರ್ತಿ, ನೀನೂ ಅವಳೂ ಒಂದೇ ಜಾಗದಲ್ಲಿರುವುದು ಅಸಾಧ್ಯ. ನಾನು ನಿನ್ನನ್ನೂ ಬಿಡಲಾರೆ, ಅವಳನ್ನೂ ಬಿಡಲಾರೆ" ಎಂದರು ರಾಮಣ್ಣ.

"ನನ್ನನ್ನು ಬಿಡಲಾರದೆ ಏನು" ಮೂರ್ತಿ ಮನಸ್ಸಿನಲ್ಲೇ ಎಂದು ಕೊಂಡ.

"ಹೀಗೆ ದಿನೇ ದಿನೇ ಮನೆಯಲ್ಲಿ ಕುರುಕ್ಷೇತ್ರ ಆದರೆ ಯಾರಿಗೂ ಸುಖವಿಲ್ಲ ಆದ್ದರಿಂದ ನಿನ್ನನ್ನು ಚಿಕ್ಕಪ್ಪನ ಮನೆಗೆ ಕಳಿಸಿಬಿಡೋದೂಂತ ತೀರ್ಮಾನಿಸಿದೆ. ನೀನು ನಾಳೆಯೇ ಹೋಗಬೇಕು"

"ನಾಳೆಯೇ ಹೋಗಣ್ಣಾ ?"

"ಮತ್ತೇನು? ಅವಳು ಹಟಹಿಡಿದಿದಾಳೆ. ನೀ ಹೋಗೋವರೆಗೂ ಅನ್ನ ತಿನ್ನೋಲ್ಲ ಅಂತ. ಅವಳಿಗೋಸ್ಕರವಾದರೂ ನೀ ಹೋಗಲೇಬೇಕು. ನಾಳೆಯೇ ಬೆಳಗ್ಗೆ ರೈಲಿಗೆ ಹೊರಟುಬಿಡು"

"ಅವಳಿಗೋಸ್ಕರವಾದರೂ ನೀ ಹೋಗಲೇಬೇಕು!" ತನಗಾಗಿ ಯಾವುದೂ ಇಲ್ಲ. ತಾನು ಮೂರು ದಿನ ಊಟಮಾಡದೇ ಹೋದಾಗ ಹೆಂಡತಿಯ ವಿರುದ್ಧ ಒಂದೇ ಒಂದು ಮಾತನ್ನು ಆಡಲಿಲ್ಲ. ಈಗ ಅವಳಿಗೋಸ್ಕರ ತಾನು ನಾಳೆಯೇ ಹಾಸನಕ್ಕೆ ಹೋಗಬೇಕು, ಹೀಗೆಯೇ ಎಲ್ಲರೂ! ತಿರಸ್ಕಾರದ ನಗೆ ಮೂಡಿತು ಮೂರ್ತಿಯ ಬಾಡಿದ ಮುಖದ ಮೇಲೆ.

"ಶಾಲೆಯಿಂದ ಲೀವಿಂಗ್ ಸರ್ಟಿಫಿಕೇಟ್ ತಂದು ನಾಡಿದ್ದು ಕಳಿಸಿಕೊಡುತ್ತೇನೆ. ನೀನು ಅಲ್ಲೇ ಸೇರಿಕೋ. ನಾಣಿ ಚಿಕ್ಕಪ್ಪ ಹೇಳಿದಂತೆ ಕೇಳಿಕೊಂಡಿರು. ಪೋಲಿಪೋಲಿ ಅಲೆಯಬೇಡ. ನಿನ್ನ ಓದೆಷ್ಟೋ ಅಷ್ಟು ಮಾತ್ರ ನೋಡಿಕೊಂಡಿರು. ಯಾರೊಂದಿಗೂ ಜಗಳಕ್ಕೆ ಹೋಗಬೇಡ"

ಹೀಗೆಯೇ ಒಂದೇ ಸಮನಾಗಿ ರಾಮಣ್ಣ ಏನೇನೋ ಬೋಧಿಸುತ್ತಿದ್ದರು. ಮೂರ್ತಿ ಸುಮ್ಮನೆ ನಿಂತು ಕೇಳುತ್ತಿದ್ದ. ಆದರೆ ಅವನ ಮನಸ್ಸಿನ ಯೋಚನೆಗಳೇ ಬೇರೆ. ಜಗತ್ತೆಷ್ಟು ಕೆಟ್ಟದು, ಎಷ್ಟು ಸ್ವಾರ್ಥಿ ಎಂಬುದು ಅವನ ಎಳೆಮನಸ್ಸಿನ ಮೇಲೆ ಅಚ್ಚೊತ್ತುತ್ತಿತ್ತು. ಅದರ ಭಾರದಲ್ಲಿ ಅವ ನೆದೆ ಒದ್ದಾಡುತ್ತಿತ್ತು. ತನ್ನ ಸ್ವಂತ ತಂದೆ, ತನ್ನದಾವ ತಪ್ಪಿಲ್ಲದಿದ್ದರೂ, ತನ್ನ ಮಲತಾಯಿಯನ್ನೊಲಿಸುವುದಕ್ಕಾಗಿ, ತನ್ನನ್ನು ಮನೆಯಿಂದ ಹೊರ ದೂಡುತ್ತಿರುವರಲ್ಲಾ ಎಂದು ಅವನಿಗೆ ಬಹಳ ದುಃಖವಾಯಿತು. ತಂದೆಯ ಮಾತೆಲ್ಲಾ ಕೇಳಿಕೊಂಡು ರೂಮಿನೊಳಕ್ಕೆ ಹೋದ; ದೀಪ ಹಾಕಿದ.

ಚಿಟ್ಟೆಯೊಂದು ಬಂದು ದೀಪದ ಸುತ್ತ ಸುತ್ತಿತು. ದೀಪ ಮುಟ್ಟು ವಂತೆಯೂ ಇಲ್ಲ, ಅದು ಬಿಡುವಂತೆಯೂ ಇಲ್ಲ. ಬಲ್ಬಿನ ಗಾಜಿಗೆ ಹೊಡೆದು ಕೆಳಗೆ ಬೀಳುವುದು. ಮತ್ತೆ ಏಳುವುದು. ಮತ್ತೆ ತಾಕಲಾಟ, ಒದ್ದಾಟ, ಸುತ್ತಾಟ, ಮತ್ತೆ ಕೆಳಕ್ಕುರುಳುವುದು! ಈ ಸಂಕಟಕ್ಕಿಂತ ದೀಪಕ್ಕೆ ಸಿಕ್ಕಿ ಒಮ್ಮೆಗೇ ಭಸ್ಮವಾದರೇ ಒಳ್ಳೆಯದೆನಿಸಿತು ಮೂರ್ತಿಗೆ.

"ಹೌದು, ಹೌದು" ಎಂದಿತು ಗಡಿಯಾರ ತನಗೆ ಅವನ ಹೃದಯದ ನೋವೆಲ್ಲವೂ ತಿಳಿದಂತೆ!

೩

ಹಾಸನದ ರೈಲುನಿಲ್ದಾಣ ಊರಿಗೆ ಕೊಂಚ ದೂರವೇ. ಚನ್ನರಾಯಪಟ್ಟಣದ ಹಾದಿಯಲ್ಲಿರುವ ನಿಲ್ದಾಣಕ್ಕೂ ಪೇಟೆಗೂ ಒಂದು ಮೈಲಿ ದೂರವಾಗುತ್ತದೆ. ಈ ದಾರಿಯಲ್ಲಿಯೇ ಸರ್ಕಾರಿ ಕಚೇರಿಗಳು. ಇವುಗಳನ್ನು ದಾಟಿ ಬಂದರೆ ಬಸ್ಸುನಿಲ್ದಾಣ. ಅಲ್ಲಿಂದ ಮೈಸೂರು ಹಾದಿಯಲ್ಲಿ ಒಂದು ಮೈಲಿ ಹೋದರೆ ಸಿಗುವುದೇ ನಾಣಿ ಚಿಕ್ಕಪ್ಪನ ಊರು ಚನ್ನಪಟ್ಟಣ. ಚನ್ನಪಟ್ಟಣವೆಂದು ಆ ಹಳ್ಳಿಗೆ ಹೆಸರಿಟ್ಟವರಾರೋ ತಿಳಿಯದು. ಇರುವುದು ಇಪ್ಪತ್ತು ಮನೆ. ಮನೆಯೇನು ಗುಡಿಸಿಲೆಂದರೆ ಸರಿ. ಅಲ್ಲಿದ್ದ ಒಂದೇ ಒಂದು ಮನೆಯೆಂದರೆ ನಾರಣಪ್ಪನವರದು. ಸುಖವಾಗಿ ಸಂಸಾರ ಸಾಗುವಷ್ಟು ಸಂಪತ್ತಿತ್ತು ನಾರಣಪ್ಪನವರಿಗೆ. ಮನೆಯಲ್ಲಿ ಕೆಲವು ಹಸು, ಎಮ್ಮೆ, ಕರಾವು ಯಾವಾಗಲೂ ಇದ್ದೇ ಇರುತ್ತಿತ್ತು. ವರ್ಷಕ್ಕೆ ಸಾಕಾಗಿ ಮಾರಲೂ ಕೊಂಚ ಉಳಿಯುತ್ತಿತ್ತು ಅವರಿಗೆ ಬರುತ್ತಿದ್ದ ಭತ್ತ; ಇದರ ಜತೆಗೆ ಯಾಲಕ್ಕಿ ತೋಟದಿಂದ ಬೇಕಾದಷ್ಟು ವರಮಾನ ಬರುತ್ತಿತ್ತು. ಸುಖವಾಗಿ ಕೂತುಣ್ಣುವಷ್ಟಿತ್ತು. ನಾರಣಪ್ಪನ ಮನೆಯಿಂದ ಹಳ್ಳಿಯವರೆಲ್ಲಾ ತಮಗೆ ಬೇಕಾದ ಸಂಬಾರ ಪದಾರ್ಥಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಅವರನ್ನು ಕಂಡರೆ ಎಲ್ಲರಿಗೂ ಗೌರವ. ಆದರೆ ಎಲ್ಲರೂ ಅವರನ್ನು ಸಲಿಗೆಯಿಂದಲೇ ಮಾತನಾಡಿಸುವರು. ಯಾವಾಗ ಯಾರು ಕಣ್ಣಿಗೆ ಬಿದ್ದರೂ ಅವರನ್ನು ಮಾತಾಡಿಸಿ, ಯೋಗಕ್ಷೇಮ ವಿಚಾರಿಸದೆ ಮುಂದೆ ಹೆಜ್ಜೆಹಾಕುವಂತೆಯೇ ಇಲ್ಲ. ಅವರಿಗೆ ಬೇಕಾದ ಔಷಧ ಕಷಾಯಗಳನ್ನು ಮಾಡಿಕೊಡುತ್ತಿದ್ದರು ನಾರಣಪ್ಪ. ಊರವರೆಲ್ಲರನ್ನೂ ಸಲಿಗೆಯಿಂದಲೇ ಕಂಡರೂ ನಾರಣಪ್ಪನವರಿಗೆ ಅಚ್ಚುಮೆಚ್ಚೆಂದರೆ ಗರಡಿಯ ಉಸ್ತಾದ್ ಕೃಷ್ಣಪ್ಪ. ಕಿಟ್ಟಪ್ಪ ಎಂದೆಲ್ಲರೂ ಕರೆಯುವ ರೂಢಿ. ಕಿಟ್ಟ ಎಂಬುದು ನಾರಣಪ್ಪನವರೊಬ್ಬರ ಹಕ್ಕು.

ಕಿಟ್ಟಪ್ಪನಿಗೆ ಒಂದು ಕೊರಗೆಂದರೆ ತಮ್ಮ ಹಳ್ಳಿಯಲ್ಲೂ ಒಂದು ಗರಡಿಯಿಲ್ಲದುದು. ದಿನವೂ ಹಾಸನಕ್ಕೆ ಹೋಗಿ ಅಲ್ಲಿ ಮಾವಿನ ತೋಪಿನ ಪಕ್ಕದ

ಗರಡಿಯ ಮನೆಯಲ್ಲಿ ಸಾಧನೆ ಮಾಡುತ್ತಿದ್ದ. ನಾರಣಪ್ಪ ಕಿಟ್ಟ ಇಬ್ಬರೂ ಜತೆಯಲ್ಲಿ ಬೆಳಗಿನ ಜಾವ ಹೊರಟುಬಿಟ್ಟರೆ ಗರಡಿಯಲ್ಲಿ ಕಿಟ್ಟ ಕಸರತ್ತು ನಡೆಸಿ ಕುಸ್ತಿ ಮುಗಿಸುವ ವೇಳೆಗೆ ನಾರಣಪ್ಪ ಕೆರೆಯಲ್ಲಿ ಸ್ನಾನ ತೀರಿಸಿ ಸಂಧ್ಯಾವಂದನೆ ಮಾಡಿ, ಬಟ್ಟೆ ಒಗೆದು ಒಣಹಾಕಿ ಗರಡಿಗೆ ಬಂದು ಬಿಡುತ್ತಿದ್ದರು. ಇಬ್ಬರೂ ಅಲ್ಲಿಂದ ನೇರವಾಗಿ ರಾಘವಾಚಾರಿ ಹೋಟಲಿಗೆ ನುಗ್ಗಿ, ದೋಸೆ ಬೆಣ್ಣೆ ತಿಂದು ಕಾಫಿಕುಡಿದು ಊರಿನಲ್ಲಿ ಅಲೆದು ಏನಾದರೂ ತರಕಾರಿ ತೆಗೆದುಕೊಂಡು ಹಿಂತಿರುಗುವುದು. ಇದು ದಿನದ ರೂಢಿ. ಸಂಜೆ ಮಾತ್ರ ನಾರಣಪ್ಪ ತಾವೂ ಗರಡಿಗೆ ಹೋಗಿ ಕೊಂಚಕಾಲ ಕೈಕಾಲಾಡಿಸುತ್ತಿದ್ದರು. ನಿಜವಾಗಿ ಆ ಗರಡಿ ನಡೆಸುತ್ತಿದ್ದವರೆಂದರೆ ನಾರಣಪ್ಪ! ಏನಾದರೂ ಒಂದು ಪೂಜೆಯಾಗಬೇಕು, ಹಣ್ಣುಕಾಯಾಗಬೇಕೆಂದರೆ ಹಣ ಬಿಚ್ಚುತ್ತಿದ್ದವರು ನಾರಣಪ್ಪನವರೇ!

ನಾರಣಪ್ಪ ಆಗತಾನೇ ಹಾಸನದಿಂದ ಬಂದು ಅಂಗಳದಲ್ಲಿ ಕಾಲುಚಾಚಿ ಕುಳಿತಿದ್ದರು. ಎದುರಿಗೆ ಸಪ್ಪೆ ಮೋರೆಹಾಕಿಕೊಂಡು ಕಿಟ್ಟಪ್ಪ ಮುದುರಿಕೊಂಡಿದ್ದ. ನಾರಣಪ್ಪ ಏನೋ ಯೋಚನೆಮಾಡುತ್ತಿದ್ದವರು ಇದ್ದಕ್ಕಿದ್ದಂತೆ "ಕಿಟ್ಟ, ಆ ಗರಡಿ ನಿನಗೆ ಸರಿಹೋಗದಿದ್ದರೆ ಇಲ್ಲೇ ಒಂದೇಕೆಮಾಡ ಬಾರದು?" ಎಂದರು.

"ಅದೆಂಗಾಯ್ತದೆ ಏಳಿ? ಇಂದೆ ಮಾಡೋಕೇಂತ ಓಗಿ ಮಟ್ಟಿ ಪೂಜೇಗ್ಮೊದಲ್ನಾಗೆ ದೀಪಾ ಉಳ್ಕೋಗಿ ಅಪ್ಸಕ್ನ ಆಗ್ಲಿಲ್ವಾ? ಅದ್ಕೇ ಅಟ್ಟಿಯೋರೆಲ್ಲ ಸೇರಿ ಬೇಡಾಂತ ತೀರ್ಮಾನಿಸ್ಲಿಲ್ವಾ?" ಎಂದ ಕಿಟ್ಟ.

"ಮತ್ತೆ ಏನುಮಾಡೋದು ಹೇಳು? ಒಂದ್ಕೆಲಸಮಾಡು, ಹಾಸನದಲ್ಲೇ ಬಸ್ ಸ್ಟಾಂಡಿನ ಆ ಕಡೆ ಯಾಕೆ ಒಂದು ಹೊಸ ಗರಡಿ........"

"ಅದೇನೋ ಮಾಡ್ಬೋದು. ಅದ್ರೇ‥"

"ಆದರೇನು?"

"ಈ ಗಲ್ಲಿಯೋರು ಸುಮ್ಕಿರ್ತಾರಾ?"

"ಎಲ್ಲಾ ಇರ್ತಾರೆ. ನಾಳೆ ಹೋಗಿ ಅದನ್ನೆಲ್ಲಾ ಸರಿಮಾಡು. ನಾನು ಪಂಚಾಂಗ ನೋಡಿ ಒಳ್ಳೆಯ ದಿನ ಗೊತ್ತುಮಾಡ್ತೀನಿ" ಎಂದರು ನಾರಣಪ್ಪ.

"ಊಂ"

"ಕಿಟ್ಟ, ಅದೆಲ್ಲಾ ಸರಿ" ನಾರಣಪ್ಪ ಇನ್ನೇನೋ ಹೇಳಬೇಕೆನ್ನುವಷ್ಟರಲ್ಲಿ ಹೊರಗಿನಿಂದ ಮೂರ್ತಿ ಬರುವುದು ಕಾಣಿಸಿತು. ಕೂಡಲೇ ನಾರಣಪ್ಪ ಎದ್ದು ಜೋರಾಗಿ ನಗುತ್ತಾ "ಓಹೋಹೊ ಯಾವಾಗ ಬಂತು ಸವಾರಿ. ಕಿಟ್ಟ, ಇವನು ನಮ್ಮಣ್ಣನ ಮಗ ಮೂರ್ತಿ ಅಂತ. ಇವನನ್ನು ಒಳ್ಳೆಯ ಪೈಲ್ವಾನ್ ಮಾಡೋ ಭಾರ ನಿನ್ನದು. ಎಲ್ಲಿ ಮೂರ್ತಿ....ಇದೇನೋ ಇದು ಹೀಗಿದೀಯಾ ಬಡಕಲುಬಡಕಲಾಗಿ ಮೇವು ಕಾಣದ ಹೋತನ ಹಾಗೆ. ನೋಡು ನನ್ನ ಕೈ ಹೇಗಿದೆ!" ಎನ್ನುತ್ತಾ ತಮ್ಮ ಕೈ ಮಾಂಸಖಂಡ ತೋರಿಸಿದರು. ಮೂರ್ತಿ ಅವಾಕ್ಕಾದ. ಇನ್ನೂ ತಾನು ಒಳಕ್ಕೆ ಬರುವುದಕ್ಕೇ ಇಲ್ಲ. ಆಗಲೇ ಚಿಕ್ಕಪ್ಪ ಏನೇನೋ ಮಾತಂದರಲ್ಲಾ.

"ಕಿಟ್ಟ ನೀ ಹೋಗು, ಸಂಜೆ ಬಾ; ಕೊಂಚ ಬೇಗ ಬಾ" ಎಂದು ನಾರಣಪ್ಪ ಅವನನ್ನು ಕಳಿಸಿ ಮೂರ್ತಿಯನ್ನು ಹತ್ತಿರ ಕರೆದುಕೊಂಡು ಮಂಚದ ಮೇಲೆ ಕೂರಿಸಿಕೊಂಡರು.

"ಯಾಕೋ ಮಗೂ ಹೀಗೆ, ಛೇ! ಛೇ! ಹೋಗಲಿ, ಅಣ್ಣ ಹೇಗಿದಾನೆ, ಅವಳು ನಿಮ್ಮ ಚಿಕ್ಕತಾಯಿ ಹೇಗಿದಾಳೆ?"

ನಾರಣಪ್ಪ ಲಕ್ಷ್ಮಮ್ಮನನ್ನು ಚಿಕ್ಕತಾಯಿಯೆಂದರೆಂಬುದು ಮೂರ್ತಿಗೆ ಗೊತ್ತು. ಇದಕ್ಕೆ ಕಾರಣವಿಷ್ಟೆ, ನಾರಣಪ್ಪ ಹಿಂದೆ ಒಂದು ಸಾರಿ ಮೈಸೂರಿಗೆ ಬಂದಿದ್ದಾಗ ಮೂರ್ತಿಯ ಪರವಾಗಿ ಮಾತಾಡಿದ್ದಕ್ಕೆ "ನಾನವನ ಚಿಕ್ಕತಾಯಿ; ನಿಮಗೇನು ಗೊತ್ತು!" ಎಂದು ದಬಾಯಿಸಿದ್ದರು ಲಕ್ಷ್ಮಮ್ಮ. ಅಂದಿನಿಂದ ಅದೇ ಪದವನ್ನುಪಯೋಗಿಸುತ್ತಿದ್ದರು ನಾರಣಪ್ಪ.

"ಎಲ್ಲಾ ಚೆನ್ನಾಗಿದಾರೆ, ನಾಣಿ. ನಾನಿನ್ನುಮೇಲೆ ಇಲ್ಲಿಯೇ ಇರಬೇಕಂತೆ ಅಣ್ಣ ಹೇಳಿದ. ನಾನಿದ್ದ ಕಡೆ ಅವಳಿರುವುದಿಲ್ಲವೆಂದು ಹಟ ಹಿಡಿದಳಂತೆ".

ಮೂರ್ತಿಯ ಹೃದಯದ ದುಃಖವೆಲ್ಲ ಉಕ್ಕಿಬಂತು. ಚಿಕ್ಕಪ್ಪನ ತೊಡೆಯ ಮೇಲೆ ಮುಖ ಮುಚ್ಚಿ ಅಳಲಾರಂಭಿಸಿದ. ನಾರಣಪ್ಪ ಬಹಳ ಕಷ್ಟದಿಂದ ಮೂರ್ತಿಯನ್ನು ಸಮಾಧಾನಗೊಳಿಸಿದರು. ಮೂರ್ತಿಯ ದುಃಖ ಮೆಲ್ಲಮೆಲ್ಲನೆ ಕಡಿಮೆಯಾದಂತೆ ಆದುದನ್ನೆಲ್ಲ ಹೇಳಿದ. ನಾರಣಪ್ಪನ ಮುಖವೂ ಗಂಟಿಕ್ಕಿತು. ಮೂರ್ತಿಯ ತಾಯಿ ಸುಶೀಲ ಎಷ್ಟು ಒಳ್ಳೆಯವ

ರೆಂಬುದು ಅವರಿಗೆ ಗೊತ್ತು. ಅವರಿಗಿನ್ನೂ ಆ ದಿನಗಳ ನೆನಪಿತ್ತು. ಮದುವೆಯಾಗಿ ಮನೆಗೆ ಬಂದ ಹೊಸದರಲ್ಲಿ ನಾರಣಪ್ಪ ಅತ್ತಿಗೆಯ ಹಿಂತನ, ವಿಶ್ವಾಸಗಳನ್ನೆಲ್ಲಾ ಕಂಡರಿತಿದ್ದರು. ತನ್ನನ್ನೆಷ್ಟು ವಿಶ್ವಾಸದಿಂದ ಕಾಣು ತ್ತಿದ್ದರು ಅತ್ತಿಗೆ ಎಂಬುದನ್ನು ನೆನೆದು ನಾರಣಪ್ಪನವರ ಕಣ್ಣಿನಲ್ಲಿ ನೀರು ತುಂಬಿತು. ತಾನು ಮರ ಹತ್ತಿ ಬಿದ್ದು ಕಾಲುಬಾತುಕೊಂಡು ಸಂಕಟ ಪಟ್ಟಾಗ ಹಗಲೂ ರಾತ್ರಿ ಸೇವೆಮಾಡಿದ ಅತ್ತಿಗೆಯನ್ನು ಹೇಗೆತಾನೇ ಮರೆಯಲು ಸಾಧ್ಯ. ತನ್ನ ನಿರಸನಿ (cynical) ಜೀವನವನ್ನು ತಿದ್ದಲು ಯತ್ನಿಸಿದ ಮೂರ್ತಿಯ ತಾಯಿಯನ್ನು ಹೇಗೆತಾನೇ ಮರೆಯುವುದು! ಕಣ್ಣಿನಲ್ಲಿ ಪಳಪಳ ನೀರು ಸುರಿಯಿತು. ಮೆಲ್ಲನೆ ಮೂರ್ತಿಯ ಬೆನ್ನು ಸವರುತ್ತಾ,

"ಏಳು, ಮೂರ್ತಿ, ಏಳು. ಈ ಪ್ರಪಂಚ ಒಳ್ಳೆಯವರಿಗಲ್ಲ; ಎಲ್ಲ ನೀಚರಿಗೆ ಸಮಾಧಾನಮಾಡಿಕೋ" ಎಂದರು. ಮೂರ್ತಿ ಕತ್ತೆತ್ತಿ ನೋಡಿದ. ಚಿಕ್ಕಪ್ಪನೂ ಅಳುತ್ತಿರುವುದು ಕಾಣಿಸಿತು. ತನ್ನಂತೆ ತನ್ನ ತಾಯಿಗಾಗಿ ದುಃಖಪಡುವ ಮತ್ತೊಬ್ಬ ವ್ಯಕ್ತಿಯೂ ಇದ್ದಾನೆಂದು ಅವನಿಗೆ ಕೊಂಚ ಸಮಾಧಾನವಾಯಿತು.

ಮೂರ್ತಿ, ನಾರಣಪ್ಪ ಇಬ್ಬರೂ ಊಟಕ್ಕೆ ಕುಳಿತರು. ಮೂರ್ತಿ ತಿಂದರೂ ನಾರಣಪ್ಪನಿಗೆ ಸಮಾಧಾನವೇ ಇಲ್ಲ. "ಏನಿದು ಚೆನ್ನಾಗಿದೆ ಇದಕ್ಕೇ ಹೀಗಿರೋದು. ಎಲ್ಲಿ ಸೀನ ಇವನಿಗೆ ಹುಳಿ ತಂದು ಹಾಕಿ ಆ ಬಟ್ಟಲಿನಲ್ಲಿ ತುಪ್ಪ ತೆಗೊಂಬಾ"

ಮೂರ್ತಿಗೆ ಕಕ್ಕಾವಿಕ್ಕಿಯಾಯಿತು. ಒಂದು ಬಟ್ಟಲು ತುಪ್ಪ ಹುಳಿ ಯಲ್ಲಿ ಕಲಸಿದ ಅನ್ನಕ್ಕೆ. ಅವನು ಕಂಡುಕೇಳದ ಮಾತು ಅದು. ಸುಮ್ಮನೆ ಚಿಕ್ಕಪ್ಪನ ಕಡೆಗೇ ನೋಡುತ್ತಾ ಕುಳಿತ.

"ಹೂಂ ಊಟಮಾಡೋ, ತುಪ್ಪ ಹೆಚ್ಚಾಯ್ತೇನೋ ಹುಚ್ಚುಹುಡುಗ; ಚೆನ್ನಾಗಿ ತಿಂದು ಪೈಲ್ವಾನನಾಗಬೇಕು; ಜೋರಾಗಿ ಕಟ್ಟು ಮಸ್ತಾಗಿರ ಬೇಕು; ನೋಡಿದರೆ ದೃಷ್ಟಿ ಆಗಬೇಕು—ಹಾಗಿರಬೇಕು. ಅದು ಬಿಟ್ಟು ಮಡಿ ಕೋಲಿಗೆ ಬಟ್ಟೆ ತುಗಲಿಸಿದ ಹಾಗಿದ್ದರೆ ಏನು ಬಂತು. ಇದರಿಂದ ಬುದ್ಧೀನೂ ಬೆಳೆಯುತ್ತಂತೆ—ಕೇಳಿಲ್ಲವೇನೋ ಇಂಗ್ಲೀಷಿನಲ್ಲಿ 'A sound mind in

a sound body' ಅಂತ. ದೇಹ ಚೆನ್ನಾಗಿದ್ದರೆತಾನೇ ಬುದ್ಧಿ ಚೆನ್ನಾಗಿರುತ್ತೆ. ಏ ಸೀನ ಏನೋ, ಪಲ್ಯ ತೆಗೊಂಬಾ ಸ್ವಲ್ಪ; ಹಾಂ, ಮೂರ್ತಿ ನೀನೀವಾಗ ಯಾವ ಕ್ಲಾಸಿನಲ್ಲಿ ಓದ್ತಾ ಇದೀಯೊ?"

"ಲೋವರ್ ಸೆಕೆಂಡರಿಗೆ ಈ ಸಾರಿ ಹಣ ಕಟ್ಟಬೇಕು"

"ಓಹೋ, ಐದ್ರೂಪಾಯಿ ಪರೀಕ್ಷೆಗೋ, ನೋಡು ಇಲ್ಲೇ ಸ್ಕೂಲಿಗೆ ಸೇರಿಸಿಬಿಡ್ತೀನಿ. ಕೆರೆ ಏರಿಯ ಮೇಲಿಂದ ಆ ಕಡೆ ಸ್ವಲ್ಪ ದೂರ ಹೋದರೆ ಅಲ್ಲೊಂದು ಚರ್ಚಿದೆ ನೋಡು, ಅದರ ಆ ಕಡೇನೇ ಸ್ಕೂಲು. ನಾಳೆ ಮೇಸ್ಟ್ರಿಗೆ ಹೇಳಿ ಸೇರಿಸಿಬಿಡ್ತೀನಿ"

"ಲೀವಿಂಗ್ ಸರ್ಟಿಫಿಕೇಟ್ ತಂದಿಲ್ಲ; ಅಣ್ಣ ಕಳಿಸ್ತೀನಿ ಅಂತ...."

"ಅದೆಲ್ಲಾ ಯಾಕೋ, ನಾನಿರಬೇಕಾದರೆ ಯಾವುದೂ ಬೇಡ. ನೀನಿನ್ನೂ ಹುಡುಗ ನಿನಗೇನೂ ಗೊತ್ತಿಲ್ಲ; ಹಣ ಎಲ್ಲಾ ಕೆಲಸಾನೂ ಮಾಡುತ್ತೆ".

ಊಟ ಮುಗಿದಮೇಲೆ ನಾರಣಪ್ಪ ಬೋರನನ್ನು ಕೂಗಿ ಚಿಕ್ಕರಾಯರಿಗೊಂದು ಮಂಚ ತರಹೇಳಿದರು. ಹತ್ತು ನಿಮಿಷದಲ್ಲೇ ಒಂದು ಮಂಚ ಸಿದ್ಧವಾಯಿತು.

"ನಿನ್ನ ಹಾಸಿಗೆಯೆಲ್ಲಿ?" ಎಂದರು ಮೂರ್ತಿಯನ್ನು ಕೂಗಿ.

ಅವನ ಹಾಸಿಗೆಯೇನು? ಒಂದು ಜಮುಖಾನ, ಒಂದು ಹೊದೆಯುವ ಹರುಕು ಕಂಬಳಿ!

"ಥೂ! ಏನು ಇದೇನೇ ನಿನ್ನ ಹಾಸಿಗೆ! ಅಣ್ಣನಿಗೆ ಕೊಂಚವಾದರೂ ಬುದ್ಧಿ ಇದ್ದರೆ! ಇರೋನೊಬ್ಬ ಮಗ; ಅವನಿಗೆ ಇಷ್ಟೇನೆ; ಬೋರಾ, ಗಾಡಿ ಕಟ್ಟಿಕೊಂಡು ಹೋಗಿ ರಾಮಶೆಟ್ಟರಂಗಡಿಯಿಂದ ಒಂದು ಮೆತ್ತೆ, ಎರಡು ದಿಂಬು, ಎರಡು ಮಗ್ಗುಲು ಹಾಸಿಗೆ, ಒಂದು ರಗ್ಗು ತೆಗೊಂಬಾ" ಎಂದರು.

ಆ ವೇಳೆಗೆ ಅಡಿಗೆಯ ಸೀನ ಎಲೆಯಡಿಕೆ ತಂದಿಟ್ಟ.

"ನೋಡು ಮೂರ್ತಿ, ನಿನಗೇನು ಬೇಕೋ ಅದು ಮಾಡು. ನಿನಗಾವುದಕ್ಕೂ ಕಮ್ಮಿಯಿಲ್ಲ. ಬೇಕಾದಷ್ಟು ತಿನ್ನು, ಆಡು, ಕುಣಿ, ಸಂತೋಷವಾಗಿರು. ಇದ್ದಾಗ ತಿನ್ನಬೇಕು ಸುಖವಾಗಿರಬೇಕು. ಪ್ರಪಂಚ ಬಹಳ ಕೆಟ್ಟದು".

ಮೂರ್ತಿಗೆ ತಕ್ಷಣ ಆ ಹುಚ್ಚನ ಮಾತುಗಳ ನೆನಪಾಯಿತು. ಅವನು ಹುಚ್ಚ! ಜಗತ್ತಿನಲ್ಲಿ ಎಲ್ಲವನ್ನು ಕಳೆದುಕೊಂಡವನು ತನಗಾಗಿ, ತನ್ನದಾಗಿ ಏನೂ ಇಲ್ಲದವನು ಅಂದುದನ್ನೇ ಈ ಸುಖ ಪುರುಷ ಸುಖವಾಗಿರುವನೆಂದು ಜನ ತಿಳಿದಿರುವ ಈತ, ಬೇಕುಬೇಕಾದಂತೆ ಖರ್ಚು ಮಾಡುವಾತನೂ ಹೇಳುವನಲ್ಲಾ ! ಮೂರ್ತಿಗೆ ಈ ಎರಡು ಧ್ರುವಗಳ ಕೂಡಿಕೆ ಅರ್ಥವೇ ಆಗಲಿಲ್ಲ.

ನಾರಣಪ್ಪನ ಮುಖದಲ್ಲಿ ಗಾಂಭೀರ್ಯ ಮೂಡಿತ್ತು. ಕಣ್ಣಿನಲ್ಲಿ ಕಿಡಿ ಸಿಡಿಯುತ್ತಿತ್ತು. ಜಗತ್ತಿನ ಮೇಲೆ ಸೇಡು ತೀರಿಸಿಕೊಳ್ಳುವಂತಿತ್ತು ಮುಖದ ಮೇಲಿನ ಆ ಭಾವ!

"ನೀನಿನ್ನೂ ಚಿಕ್ಕವನು ಮೂರ್ತಿ. ನಿನಗೆ ತಿಳಿಯುವುದು ಕಷ್ಟ. ಪ್ರಪಂಚ ಬಹಳ ಕೆಟ್ಟದು. ನಮಗೆ ಬೇಕಾದುದು ಸಿಗುವುದಿಲ್ಲ. ಯಾವುದೋ ಒಂದು ತಾನಾಗಿಯೇ ಬರುತ್ತದೆ. ಅದು ನಮಗೆ ಬೇಕಿಲ್ಲದಿದ್ದರೂ ಒಪ್ಪಬೇಕು. ನಮಗೆ ಬೇಕಾದುದು ಹಾಳಾಗಿಹೋಗುವುದನ್ನು, ನಶಿಸಿಹೋಗುವುದನ್ನು ನಾವೇ ಕಣ್ಣಾರೆ ನೋಡಬೇಕು".

ಅವರ ಕಣ್ಣಿನಲ್ಲಿ ಅಪಾರ ನೋವು ಕಾಣುತ್ತಿತ್ತು ಮೂರ್ತಿಯ ಕಣ್ಣಿಗೆ. ಇದೇತಾನೇ ನಗುನಗುತ್ತಾ ಮಾತನಾಡಿದ ವ್ಯಕ್ತಿ ಇದೇನೇ ಎಂದು ಸಂಶಯ ಬಂದಿತು. ಮೌನವಾಗಿ ಅವರ ಕಡೆಗೇ ದಿಟ್ಟಿಸುತ್ತಿದ್ದ.

"ಹೋಗಲಿ ಬಿಡು, ಈಗ ಆ ಮಾತು ಬೇಡ. ನಾಳೆ ಶಾಲೆಗೆ ಸೇರುವೆಯಂತೆ. ಚೋರ ನಿತ್ಯವೂ ಗಾಡಿಯಲ್ಲಿ ಕರೆದುಕೊಂಡು ಹೋಗಿ ಬಿಟ್ಟುಬಿಡುತ್ತಾನೆ. ಚೆನ್ನಾಗಿ ಓದಿಕೊ; ನಿಮ್ಮ ಮೇಸ್ಟರಿಗೆ ಹೇಳ್ತೇನೆ ನಾನೂ: ಈಗ ನಿದ್ರೆಹೋಗು ಸಂಜೆಗೆ ನನ್ನ ಜತೆಗೆ ಗರಡಿಗೆ ಬಾ".

ಮೂರ್ತಿ ತನ್ನ ಚಿಕ್ಕಪ್ಪನ ಪಕ್ಕದಲ್ಲಿ ಮಲಗಿಕೊಂಡು ಛಾವಣಿಯ ಕಡೆಗೇ ದಿಟ್ಟಿಸುತ್ತಿದ್ದ. ಚಿಕ್ಕಪ್ಪನಿಗೇನೋ ತಕ್ಷಣ ನಿದ್ರೆಬಂದಿತ್ತು. ಆದರೆ ಮೂರ್ತಿಗೆ ಯೋಚನೆ. ಮದುವೆಯೇ ಆಗದೆ ಬೇಕಾದಷ್ಟು ಆಸ್ತಿಯಿದ್ದು ಸುಖವಾಗಿದ್ದರೂ ಪ್ರಪಂಚ ಕೆಟ್ಟದು; ನಮಗೆ ಬೇಕಾದುದು ಇಲ್ಲಿ ಸಿಗಲಾರದೆನ್ನುವರಲ್ಲಾ ಇದೇನೆಂದು ಮೂರ್ತಿಗೆ ಅರ್ಥವೇ ಆಗದು. ಹಾಗೆಯೇ ಆ ಹುಚ್ಚನ ನೆನಪಾಯಿತು. ಚಿಕ್ಕಪ್ಪನ ಮಾತೂ ಆ ಹುಚ್ಚನ ಮಾತೂ

ಒಂದೇ! ಆ ಹುಚ್ಚನಿಗಾದಂತೆಯೇ ಚಿಕ್ಕಪ್ಪನಿಗೂ ಏನಾದರೂ ಜೀವನದಲ್ಲಿ ಅಪಘಾತವಾಗಿರಬಹುದೇ ಎನಿಸಿತು. ಆದರೆ ಕೇಳುವುದು ಹೇಗೆ? ಯಾರನ್ನು ಕೇಳುವುದು? ಹೀಗೆಯೇ ನೂರು ಚಿಂತೆ! ತನ್ನ ತಾಯಿಯ ವಿಷಯವಾಗಿ ಒಳ್ಳೆಯ ಮಾತಾಡಿದ ಚಿಕ್ಕಪ್ಪ ತಂದೆಗಿಂತಲೂ ಒಳ್ಳೆಯವನೆನ್ನಿಸಿತು. ಮತ್ತೆ ಚಿಕ್ಕಪ್ಪ ಏಕೆ ಹೀಗೆ ಹಣ ವ್ಯಯಮಾಡುತ್ತಾನೆ? ಕಂಡಾಬಟ್ಟೆ ಖರ್ಚು ಮಾಡುತ್ತಾನಲ್ಲಾ ಎನಿಸಿತು. ಎಲ್ಲಾ ಪ್ರಶ್ನೆಗಳೇ. ಒಂದಕ್ಕಾದರೂ ಉತ್ತರ ನಿರ್ಧರವಾಗಿ ಸಿಗಲಿಲ್ಲ.

ಮೂರ್ತಿ ಕಣ್ತೆರೆಯುವ ವೇಳೆಗಾಗಲೇ ಸಂಜೆಯಾಗಿತ್ತು. ನಾರಣಪ್ಪ ಆಗಲೇ ಎದ್ದು ಹೊರಗಡೆ ಕಿಟ್ಟನೊಂದಿಗೆ ಹರಟೆಹೊಡೆಯುತ್ತ ಕುಳಿತಿದ್ದರು; ಮೂರ್ತಿ ಎದ್ದು ಮುಖ ತೊಳೆದು ಅವರ ಬಳಿ ಹೋದ. ಕೂಡಲೇ ನಾರಣಪ್ಪ ಸೀನನನ್ನು ಕೂಗಿ ತಿಂಡಿ ತರುವಂತ ಹೇಳಿದರು. ತಿಂಡಿ ಕಾಫಿ ಮುಗಿಸಿಕೊಂಡು ಮೂವರೂ ಹಾಸನದ ಕಡೆಗೆ ಹೊರಟರು. ಚನ್ನಪಟ್ಟಣದ ಕೆರೆ ನೀರು ತುಂಬಿತ್ತು. ತುಂಬ ಬಿಳಿದಾವರೆಯ ಹೂಗಳು. ಮೆಟ್ಟಿಲು ಹಾಕಿ ಬಟ್ಟೆ ಒಗೆಯಲು ಸಿದ್ಧಗೊಳಿಸಿದ್ದ ಜಾಗದ ಮೇಲುಗಡೆಗೊಂದು ಮಂಟಪ; ಆ ಮಂಟಪವೂ ಮುಕ್ಕಾಗಿತ್ತು. ಆದರೆ ಈಜಲು ಬಂದವರು ಬಟ್ಟೆಯಿಡಲು ಅದೊಂದು ಆಸರೆ. ಹೊರಗಿನಿಂದ ಮಂಟಪದೊಳಗಿರುವುದೇನೂ ಕಾಣುತ್ತಿರಲಿಲ್ಲ. ಕೆರೆಯಿಂದ ಮುಂದೆ ನಡೆದರೆ ಎರಡೂ ಕಡೆಗೂ ಮಾವಿನ ತೋಪು; ದೊಡ್ಡ ತೋಪುಗಳು. ಅಲ್ಲಿಂದ ಮುಂದೆಯೇ ಬಸ್ ನಿಲ್ದಾಣ. ಆ ಕಡೆಗೇ ಗರಡಿ!

ಗರಡಿ ಹೇಗಿರುವುದೆಂಬುದೇ ತಿಳಿಯದು ಮೂರ್ತಿಗೆ. ಅಲ್ಲೇನು ಮಾಡುವರೆಂಬುದೂ ತಿಳಿಯದು. ಮೈಸೂರಿನಲ್ಲಿ ಕುಸ್ತಿಪಂದ್ಯಗಳನ್ನು ನೋಡಿದ್ದ. ಆಗ ಜನ 'ಇವನು ದೊಡ್ಡ ತಮ್ಮಯ್ಯನ ಗರಡಿಯವನು' 'ಇವನು ಕರೀಂಖಾನ್ ಗರಡಿಯವನು' ಎನ್ನುವುದನ್ನು ಕೇಳಿದ್ದ. ಆದರೆ ಈಗತಾನೇ ಗರಡಿಗೆ ಸೇರಬೇಕು. ಒಳಗೆ ಕಾಲಿಟ್ಟೊಡನೆಯೇ "ಬನ್ನಿ ಐನೋರೇ ಬನ್ನಿ" ಎಂದರು ನಾಲ್ಕಾರು ಜನ. ಕೆಮ್ಮಣ್ಣಿನ ಮಟ್ಟಿಯ ಮೇಲೆ ಇಬ್ಬರು ಕುಸ್ತಿಮಾಡುತ್ತಿದ್ದರು. ಒಬ್ಬ "ಜೈ ಹನುಮಾನ್" ಎಂದು ಬಸ್ಕಿಹೊಡೆಯುತ್ತಿದ್ದ. ಇನ್ನೊಬ್ಬ ಏನೇನೋ ವಿಚಿತ್ರ ಲೆಕ್ಕಮಾಡಿ

ಕೊಂಡು ದಂಡೆ ಒತ್ತುತ್ತಿದ್ದ. ಗೋಡೆಯ ಮೇಲೊಂದು ಹನುಮಾನ್ ಚಿತ್ರಕ್ಕೆ ಹೂ ಹಾರ ಹಾಕಿದ್ದರು.

ಮೂರ್ತಿ ಕಕ್ಕಾವಿಕ್ಕಿಯಾಗಿ ನಿಂತಂತೆ ಕಿಟ್ಟ ಬಟ್ಟೆ ಬಿಚ್ಚಿ ಕಾಚಾಕಟ್ಟಿ ಪಟ್ಟುಗಳಿದ. ಕುಸ್ತಿಮಾಡುತ್ತಿದ್ದವರಿಗೆ ಈ ಪಟ್ಟು ಹಾಕು, ಕೈ ಹಾಗೆ ತಿರುಹು ಎಂದೆಲ್ಲ ಹೇಳಿಕೊಡುತ್ತಿದ್ದ. ನಾರಣಪ್ಪನವರು ಮೂರ್ತಿಯ ಬೆನ್ನ ಮೇಲೆ ಕೈಯಿಟ್ಟು "ನೋಡು ಮೂರ್ತಿ, ಅಲ್ಲಿ ಕುಸ್ತಿಮಾಡುತ್ತಿದಾನಲ್ಲ ಅವನು ರಂಗ, ಗರಡಿಗಿನ್ನೂ ಸೇರಿ ಏಳೆಂಟು ತಿಂಗಳೂ ಆಗಿಲ್ಲ. ಆಗಲೇ ಹೇಗಿದಾನೆ ನೋಡು. ನೀನೂ ಹಾಗೇ ಆಗಬೇಕು ತಿಳಿಯಿತೇ?" ಎಂದರು.

"ಕಿಟ್ಟ, ನಾಳೆಯಿಂದ ಮೂರ್ತಿ ಸಾಧನೆ ಆರಂಭಿಸಬೇಕು. ನೀನೇ ಗುರುವಾಗಬೇಕು ತಿಳೀತೋ?"

"ಆಗಲಿಬುಡಿ ಗಾವು; ಗಾವುನಂತೆ ಮಾಡ್ದೇ ಓದ್ರೆ ನನ್ನನ್ನು ಕಿಟ್ನಪ್ಪ ಅಲ್ಲಾನ್ನಿ!"

"ನಿನ್ನ ಹೆಸರು 'ಕಿಟ್ನಪ್ಪ' ಅಲ್ವೇ ಅಲ್ಲ" ಎನ್ನುತ್ತಾ ನಾರಣಪ್ಪ ಗಹಗಹಿಸಿ ನಕ್ಕರು.

ಮರುದಿನ ಶಾಲೆ ಸೇರಿದ ಮೂರ್ತಿ. ಮೇಷ್ಟರು ಅದೇಕೋ ಏನೋ ಅವನನ್ನು ಕಂಡರೆ ವಿಶ್ವಾಸ ತೋರಿಸುತ್ತಿದ್ದರು. ಚಿಕ್ಕಪ್ಪನ ಮುಂದೆ ಎಲ್ಲರೂ ಹೆಡ್ಮಾಷ್ಟರೂ ಕೂಡ ಬಾಲ ಮುರಿದ ನಾಯಿಯಂತಾಡಿದುದನ್ನು ಅವನೇ ನೋಡಿದ್ದ. ಮೇಷ್ಟರಂತೂ ಉಳಿದ ಹುಡುಗರನ್ನು ಪ್ರಶ್ನೆ ಕೇಳುತ್ತಿದ್ದರೇ ಹೊರತು ಅವನ ತಂಟೆಗೇ ಬರುತ್ತಿರಲಿಲ್ಲ. ಸಂಜೆ ಶಾಲೆ ಬಿಡುವ ವೇಳೆಗೆ ಹೊರಗೆ ಕಿಟ್ಟ ಹಾಜರು. ನೇರ ರಾಘವಾಚಾರಿ ಹೋಟಲು. ಅಲ್ಲಿಂದ ಗರಡಿ.

ಗರಡಿಗೆ ಹೋದಾಗ ಮೂರ್ತಿಗೆ ಒಂದು ಬಗೆಯ ಹೆದರಿಕೆ, ಒಂದು ರೀತಿಯ ಹಿಗ್ಗು! ಏನಾಗಿಹೋದೀತೋ, ಕೈಕಾಲು ಮುರಿದು ಹೋದರೆ ಎಂದೊಂದು ಯೋಚನೆ. ತಾನೂ ಅವರ ಹಾಗಾಗಬೇಕೆಂಬ ಆಸೆ. ಕಿಟ್ಟ ಹನುಮಾನ್ ಪಟಕ್ಕೊಂದು ಹೊಸ ಹೂಹಾರ ಹಾಕಿದ. ಎಲ್ಲರೂ ಕಾಚಾಕಟ್ಟಿ ಕಾದಿದ್ದರು. ಮಟ್ಟಿ ಪೂಜೆ ನಡೆಸಿ ಮುಟ್ಟಿ ಮುಟ್ಟಿ ಎಲ್ಲರೂ ನಮಸ್ಕರಿಸಿದರು. ಹಾಗೆಯೇ ಮೂರ್ತಿಯೂ ಪ್ರಮಾಣ ಮಾಡಿದ. ಅನಂತರ ಒಂದೆರಡು ಜತೆ ಕುಸ್ತಿ, ಆಮೇಲೆ ಮೂರ್ತಿಗೆ ಸಾಧನೆಯಾರಂಭ!

ಒಂದು ವಾರ ಮೂರ್ತಿಗೆ ಮೈಯೆಲ್ಲಾ ನೋಯುತ್ತಿತ್ತು. ಏನು ಮಾಡಿದರೂ ನೋವು ಹೋಗಲಿಲ್ಲ, "ನಾಣಿ, ಮೈಕೈಯೆಲ್ಲಾ ಕತ್ತರಿಸಿದ ಹಾಗೆ ಆಗುತ್ತಿದೆ" ಅಂದ.

"ಹಾಗೇ ಕಣೋ ಅದು, ಒಂದೆರಡು ದಿನ ಆದರೆ ತಾನಾಗೇ ಸರಿ ಹೋಗುತ್ತೆ"

ಒಂದು ವಾರದನಂತರ ನೋವು ತಗ್ಗಿತು. ಸಾಧನೆ ಜೋರಾಗಿ ಸಾಗಿತು. ಮೂರ್ತಿಯ ಮನಸ್ಸಿಗೆ ಕೊಂಚ ಸಮಾಧಾನ ದೊರೆತಂತಾಯಿತು.

ಮೂರ್ತಿಯ ಜೀವನದ ರೀತಿಯೇ ಬದಲಾಗುತ್ತ ಬಂತು. ಮೊದಲಿದ್ದ ಹದುಕು ಮಾಯವಾಯಿತು. ಈಗ ಚಿಕ್ಕಪ್ಪ ಯಾವುದಕ್ಕೂ ಕಡಿಮೆ ಮಾಡಿರಲಿಲ್ಲ. ಗರಡಿಯ ಸಾಧನೆಯಿಂದ ಮೈ ತುಂಬಿಕೊಂಡಿತು. ನೋಡಿದರೆ ದೃಷ್ಟಿಯಾಗುವಂತಾದ ಆಳು. ಜತೆಗೆ ಮನಸ್ಸಿನಲ್ಲೂ ಕೊಂಚ ಬದಲಾವಣೆಯಾಯಿತು.

ಒಂದು ದಿನ ರಾತ್ರಿ ಚಿಕ್ಕಪ್ಪ ಊಟಮಾಡದೆ ಉಪವಾಸವಿದ್ದರು ರಾತ್ರಿ ತಮ್ಮ ಒಳ ಕೋಣೆಯಲ್ಲಿದ್ದ ಪೆಟ್ಟಿಗೆಯಿಂದ ಒಂದು ಪುಟ್ಟ ಚಿತ್ರ ತೆಗೆದು ಅದನ್ನೊಮ್ಮೆ ಮುತ್ತಿಟ್ಟು ಮತ್ತೆ ಒಳಗಿಟ್ಟು ಬೀಗ ಹಾಕಿದರು.

"ನಾಣಿ, ಅದೇನದು ?"

ನಾರಣಪ್ಪನ ಕಣ್ಣಿನಲ್ಲಿ ನೀರು ತುಂಬಿತ್ತು.

"ಅದು ನನ್ನೆದೆ ಬಯಸಿದ ಹುಡುಗಿ, ಮೂರ್ತಿ. ನಾನು ಮೊದಲು ಹೀಗಿರಲಿಲ್ಲ ಮೂರ್ತಿ, ಬಹಳ ಸಂಯಮಿಯಾಗಿದ್ದೆ. ನಾನೂ ಕೊಂಚ ಓದಿದವನೇ; ಕಾಲೇಜಿನಲ್ಲಿ ಓದುತ್ತಿದ್ದಾಗ ಒಬ್ಬಾಕೆಯ ಪರಿಚಯವಾಯಿತು. ಅವಳೂ ನನ್ನನ್ನು ಪ್ರೇಮಿಸುತ್ತಿದ್ದಳು. ಆದರೆ ನಮ್ಮಿಬ್ಬರ ಜಾತಿ ಬೇರೆಯಾದ್ದರಿಂದ ನಮ್ಮಿಬ್ಬರ ಮದುವೆ ಕನಸಿನ ಕಲ್ಪನೆ! ಅದೇ ಕೊರಗಿನಲ್ಲಿ ಅವಳು ಹೋಗಿಬಿಟ್ಟಳು. ಅವಳ ಚಿತ್ರ ಇದು. ಕೊನೆಯದಾಗಿ ಅವಳು ಹೇಳಿಹೋದಳು, ನನ್ನನ್ನು ಮರೆಯಬೇಡಿರೆಂದು. ಅವಳ ನೆನಪಿಗೆ ಈ ದಿನ, ಅದಾದಮೇಲೆಯೇ ನಾನೀರೀತಿಯ ಜೀವನ ಆರಂಭಿಸಿದ್ದು. ನನ್ನದಾಗಿ. ನನ್ನವರಾಗಿ ಯಾರೂ ಇಲ್ಲ. ನನ್ನ ಹಣವಿರುವವರೆಗೂ ಹಾಗೂ ಹೀಗೂ ಜೀವನ ನಡೆಸಿಬಿಡೋಣವೆಂದು ಹಣ ಖರ್ಚುಮಾಡುತ್ತೇನೆ. ಆದರೆ ಅವಳ

ನೆನಪು ಎಂದಿಗೂ ಅಳಿಯದು. ಅವಳಿದ್ದಿದ್ದರೆ ನನ್ನ ಜೀವನ ಬೇರೆ ರೀತಿಯಾಗುತ್ತಿತ್ತು".

"ಯಾವ ಜಾತಿ, ನಾಣಿ, ಅವಳು?"

"ಕ್ರಿಶ್ಚಿಯನ್. ಜೆಸ್ಸಿ ಎಂದು ಆಕೆಯ ಹೆಸರು. ಪ್ರಪಂಚವೇ ಹಾಗೆ, ಮೂರ್ತಿ. ನಮ್ಮ ಒಂದು ಆಸೆಯೂ ನೆರವೇರುವುದಿಲ್ಲ. ಏನಾದರೂ ಒಂದು ಅಡ್ಡಿ ಆತಂಕ ಬಂದು ಜೀವನವನ್ನೇ ಕೆಡಿಸಿಬಿಡುತ್ತದೆ. ಅವಳೊಬ್ಬಳು ಇದ್ದಿದ್ದರೆ ನನ್ನ ಜೀವನಕ್ಕೂ ಸುಖವಿರುತ್ತಿತ್ತು. ನಾನೂ ಒಬ್ಬ ಗಣ್ಯ ಮನುಷ್ಯನಾಗಿರುತ್ತಿದ್ದೆ. ಆದರೆ ಈಗ ನನ್ನ ದುಃಖ ಮರೆಯಲು ನಾ ಹೀಗಾಗಿದ್ದೇನೆ. ಇದೇ ನನ್ನ ಸೇಡು! ಜಗತ್ತು ಕ್ರೂರಿಯಾದರೆ ನಾನದನ್ನು ತಿರಸ್ಕಾರದಿಂದ ಕಾಣುತ್ತೇನೆ. ಉಗಿಯುತ್ತೇನೆ; ಒದೆಯುತ್ತೇನೆ; ಆದರೆ ನಾಯಿಯಂತೆ ಮತ್ತೆ ನನ್ನ ಬಳಿಗೇ ಬರುತ್ತೆ ಜಗತ್ತು!"

ಅವಳೊಬ್ಬಳಿದ್ದಿದ್ದರೆ! ಒಂದು ವ್ಯಕ್ತಿ ಒಂದು ಜೀವನದ ಹಾದಿಯನ್ನೇ ಬದಲಾಯಿಸಬಹುದಲ್ಲ! ಒಬ್ಬ ವ್ಯಕ್ತಿಯಿಲ್ಲದೆ ಜಗತ್ತೇ ಶೂನ್ಯ! ಯಾವುದೋ ಒಂದು ತೆರವಾಗುವುದಲ್ಲಾ—ಅಮ್ಮನಿದ್ದಿದ್ದರೆ ತನ್ನ ಜೀವನವೂ ಬದಲಾಗು ತ್ತಿತ್ತೇನೋ ಎನಿಸಿತು ಮೂರ್ತಿಗೆ. ಹಾಗೆಯೇ ಯೋಚಿಸಿದ. ತಾನೀಗ ಇರುವ ರೀತಿ ತಾಯಿಗೊಪ್ಪಿತವೇ ಎಂದು. ಈಗೀಗ ತಾಯಿಯ ನೆನಪು ಕಡಿಮೆಯಾಗುತ್ತಿತ್ತು. ಯಾವುದಕ್ಕೂ ತೊಂದರೆಯಿರಲಿಲ್ಲ. ನಿಶ್ಚಿಂತೆ ಯಾಗಿತ್ತು. ಅದರಿಂದಲೇ ಏನೋ ತಾಯಿಯ ನೆನಪು ಹೆಚ್ಚಾಗಿ ಆಗುತ್ತಲೇ ಇರಲಿಲ್ಲ. ನೆನಪಾದಾಗಲೂ ಕೊಂಚಕಾಲ ಮಾತ್ರ. ಮತ್ತೆ ಅದನ್ನು ಮರೆತು ತನ್ನ ಸುಖಜೀವನದಲ್ಲಿ ಮುಳುಗುತ್ತಿದ್ದ.

೮

ಚಿಕ್ಕಪ್ಪನ ಮನೆಯಲ್ಲಿ ಸುಖಜೀವನ ಸಾಗಿದಂತೆ ಮೂರ್ತಿ ತನ್ನ ತಂದೆ, ಮಲತಾಯಿ, ಮೈಸೂರಿನ ಕಠಿನ ಜೀವನವನ್ನೆಲ್ಲಾ ಮರೆಯುತ್ತಾ ಬಂದ. ಬೆಳಗ್ಗೆ ಎದ್ದು ಚನ್ನಪಟ್ಟಣದ ಕೆರೆಗೆ ಹೋಗಿ ಈಜಿ, ಸ್ನಾನ ಮುಗಿಸಿಕೊಂಡು ಬರುವ ವೇಳೆಗೆ ಮನೆಯಲ್ಲಿ ತಿಂಡಿ ಸಿದ್ಧ. ೧೦ ಗಂಟೆಗೇ ಊಟ ಮುಗಿಸಿ ಬೋರನೊಂದಿಗೆ ಶಾಲೆಗೆ. ಸಂಜೆ ಹೋಟಲಿನಲ್ಲಿ ತಿಂಡಿ ತಿಂದು ಆಮೇಲೆ ಗರಡಿ.

ಇದು ಅವನ ದಿನಚರಿ. ಕೈಯಲ್ಲಿ ಯಾವಾಗಲೂ ಕಾಸು ಓಡಾಡುತ್ತಿತ್ತು. ಬೇಕಾದ ಆಟ ಆಡಬಹುದಿತ್ತು. ಇದರಿಂದ ಮೆಲ್ಲನೆ ಅವನ ಮನಸ್ಸಿನಲ್ಲಿ ಕೊಂಚ ಗರ್ವ ಮೂಡಲಾರಂಭವಾಯಿತು. ನಾನು ಯಾರಿಗೆ ಕಡಿಮೆ, ನನಗೇನು ಕಡಿಮೆ ಎನ್ನುವ ಭಾವನೆಯ ಬೀಜ ಮೊಳಕೆಯಿಟ್ಟಿತು. ಚಿಕ್ಕಪ್ಪ ಊರಿನವರೆಲ್ಲರನ್ನೂ ಸಮಾನತೆಯಿಂದ ಕಾಣುವುದು ಮೂರ್ತಿಗೆ ಕೊಂಚ ಅಸಹ್ಯವಾಗಿ ತೋರಿತು. ಜತೆಗೆ ಈ ಗರಡಿಯ ಅವಾಂತರ ಬೇರೆ! ಒಂದು ದಿನ ಚಿಕ್ಕಪ್ಪನಿಗೆ ಹೇಳಿಯೂ ಹೇಳಿದ. ತನಗೆ ಗರಡಿಗೆ ಬರಲಿಷ್ಟವಿಲ್ಲವೆಂದು. ಚಿಕ್ಕಪ್ಪ ಕಾರಣ ಕೇಳಲು ಏನು ಹೇಳಲೂ ತೋಚಲಿಲ್ಲ. ಅಂದೇ ಮೊಟ್ಟಮೊದಲ ಬಾರಿ ಚಿಕ್ಕಪ್ಪ ರೇಗಿದುದನ್ನು ಕಂಡುದು! ಆಗ ಮೂರ್ತಿಗೆ ಮನವರಿಕೆಯಾಗಿತ್ತು. ತನ್ನ ಬೇಳೆಕಾಳು ಚಿಕ್ಕಪ್ಪನ ಮುಂದೆ ಬೇಯಲಾರದೆಂದು! ಮೂರ್ತಿಗೆ ಆ ಬಾರಿ ನಾಪಾಸಾಯಿತು. ಮತ್ತೆ ಅದೇ ಶಾಲೆ ಸೇರಿದ. ನಾಪಾಸಾದಾಗ ಚಿಕ್ಕಪ್ಪ ರೇಗಿದ್ದರೂ ಆಮೇಲೆ ಅವರೇ ಸಮಾಧಾನಮಾಡಿದರು. ಇದರಿಂದ ಮೂರ್ತಿಗೆ ಸ್ವೇಚ್ಛೆಯಾಗಿರಲು ಬೆಂಬಲಕೊಟ್ಟಂತಾಗಿತ್ತು.

ಎರಡು ವರ್ಷ ಕಳೆದಿತ್ತು ಮೂರ್ತಿ ಹಾಸನಕ್ಕೆ ಬಂದು. ಈಗ ಮೂರ್ತಿಗೆ ೧೬ ವರ್ಷ. ಆದರೆ ಆಳು ನೋಡಲು ೨೦ ವರ್ಷದ ಕಟ್ಟು-ಮಸ್ತಿನ ಗರಡಿ ವಸ್ತಾದ್. ಮೊದಲ ವರ್ಷ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ಪಾಸಾಗದೆ ಎರಡನೆಯ ವರ್ಷ ತೇರ್ಗಡೆಯಾಗಿ ಹೈಸ್ಕೂಲ್ ಸೇರಿದ. ಮೂರ್ತಿಗೆ ಎತ್ತಿನಗಾಡಿಯಲ್ಲಿ ಹೋಗುವುದಿಷ್ಟವಿಲ್ಲ. ಅಸಹ್ಯವಾಗಿ ತೋರಿತು. ಚಿಕ್ಕಪ್ಪನಿಗೆ ಹೇಳಿದ್ದಕ್ಕೆ ಅವರು ನಕ್ಕುಬಿಟ್ಟಿದ್ದರು. ಆದರೆ ಈಗ ಹೈಸ್ಕೂಲಿಗೆ ಸೇರಿದೊಡನೆಯೇ ತಾನು ಆ ಗಾಡಿಯಲ್ಲಿ ಹೋಗುವುದಿಲ್ಲವೆಂದು ಹಟಹಿಡಿದ. ೧೫ ದಿನಗಳಲ್ಲೇ ಕುದುರೆಗಾಡಿಯೊಂದನ್ನೇರ್ಪಾಡು ಮಾಡಿದರು ನಾರಣಪ್ಪ.

ಮೂರ್ತಿ ಗಾಡಿಯಲ್ಲಿ ಕುಳಿತು ಹೋಗುತ್ತಿರುವಾಗ ಈಚೆಗೆ ಒಂದು ಹೊಸ ನೋಟ ಕಾಣುತ್ತಿದ್ದ. ಕೆರೆಯ ತಿರುವಿನಲ್ಲಿ ಒಬ್ಬ ಹುಡುಗಿ ಅವನ ಕಡೆಗೇ ದೃಷ್ಟಿಸುತ್ತಿದ್ದಳು. ಗಾಡಿ ಹೋಗುವವರೆಗೂ ಅವನಕಡೆಗೇ ದೃಷ್ಟಿಸಿ ಮತ್ತೆ ಆ ಕಡೆ ಮಾಯವಾಗುತ್ತಿದ್ದಳು. ಮೂರ್ತಿಯು ಈಗ ಯುವಕ. ಸಾಕಷ್ಟು ಕೈಯಲ್ಲಿ ಕಾಸು ಓಡಾಡುತ್ತಿತ್ತು. ತಲೆಯಲ್ಲಿ ಏನೇನೋ ಕಲ್ಪನೆಗಳು ಸುಳಿಯುತ್ತಿದ್ದುವು. ಮೊದಲು ಮೊದಲು ಅವನು ಸುಮ್ಮ

ನಿದ್ದರೂ ಅವಳೂ ಅಲ್ಲಿಗೆ ಬಂದು ತನ್ನ ಕಡೆಗೇ ನೋಡುವುದು ಸಾಮಾನ್ಯವಾಗಿ ಹೋದಂತೆ ಅವನೂ ಅವಳನ್ನೇ ದಿಟ್ಟಿಸುತ್ತಿದ್ದ. ಬರುಬರುತ್ತಾ ಅವಳು ನಕ್ಕರೆ ತಾನೂ ನಗುವುದು; ಹೀಗೆಯೇ. ಗಾಡಿಯ ಕೆಂಪ ಎಲ್ಲ ನೋಡುತ್ತಿದ್ದ. ಆದರೆ ಅದೇಕೊ ಸುಮ್ಮನಿದ್ದ.

ಒಂದು ದಿನ ಅವಳಾಗಿಯೇ ಬಂದು ಮಾತನಾಡಿಸಿದಳು.

" ನನ್ನನ್ನು ಗಾಡಿಯಲ್ಲಿ ಕೂರಿಸಿಕೊಳ್ಳುವಿರೇನು ? "

ಮೂರ್ತಿಯ ಮುಖ ಒಮ್ಮೆಲೇ ಕೆಂಪಾಯಿತು. ಏನು ಹೇಳಲೂ ತೋಚಲಿಲ್ಲ; ರಕ್ತ ತಲೆಗೆ ಉಕ್ಕಿ ಹರಿಯಿತು. ಬಾಯಿಂದ ಮಾತು ಹಾಗೆಯೇ ತುಂಡುತುಂಡಾಗಿ ಹೊರಬಿತ್ತು.

" ಬ-ನ್ನಿ—ಬ-ನ್ನಿ "

ಗಾಡಿ ಹತ್ತಲು ಹೋದ ಅವಳ ಕಾಲು ಜಾರಿತು. ಮೂರ್ತಿ ತಕ್ಷಣ ಅವಳ ಕೈ ಹಿಡಿದು ಮೇಲಕ್ಕೆಳೆದುಕೊಂಡ. ಮೈ ಜುಮ್ಮೆಂದಿತು. ಅವಳ ಕೃತಜ್ಞ ಕಣ್ಣುಗಳಿಂದ ಮನ ಜುಮ್ಮೆಂದಿತು. ಹುಡುಗಿ ಅವನ ಪಕ್ಕದಲ್ಲಿಯೇ ಕುಳಿತಳು. ಅವಳ ಸೀರೆಯ ಸೆರಗು ತುಸು ಜಾರಿ ಕಂಚುಕ ಹೊರಕಾಣು ತ್ತಿತ್ತು. ಚೆನ್ನಾಗಿ ಬೆಳೆದ ಹುಡುಗಿ; ಸುಮಾರು ೧೬-೧೭ ವಯಸ್ಸಿರ ಬಹುದು; ರೂಪವತಿಯಲ್ಲದಿದ್ದರೂ ಲಾವಣ್ಯವತಿ. ಗಾಡಿ ಜೋಲಿದಾಗ ಲ್ಲೆಲ್ಲ ಅವಳ ಮೈ ಮೂರ್ತಿಯ ಮೈಗೆ ತಾಕುತ್ತಿತ್ತು. ಮೂರ್ತಿಯ ಮನಸ್ಸಿನಲ್ಲೊಂದು ಬಗೆಯ ಕಳವಳ, ಹಿಗ್ಗು, ಹೆದರಿಕೆ! ಏನೋ ಹೇಳ ಲಾರದ ಹಿಗ್ಗು ; ರೂಪವಿಲ್ಲದ ಹೆದರಿಕೆ! ಅವಳನ್ನು ಮಾತನಾಡಿಸುವ ಹಿರಿ ಬಯಕೆ. ಮಾತಾಡಿಸಲು ಹೆದರಿಕೆ! ಅವಳ ಕಡೆಗೇ ನೋಡುತ್ತಿರಬೇಕೆಂಬ ಆಸೆ; ಅವಳೇನೆಂದುಕೊಂಡಾಳೋ ಎಂಬ ಆತಂಕ. ಅವಳ ಮೈ ತಾಕಿದಾಗ ಲೆಲ್ಲ ವಿದ್ಯುತ್‌ಲಹರಿ ಹರಿಹರಿದು ಮೈಯೆಲ್ಲ ಪುಲಕಗೊಳ್ಳುತ್ತಿತ್ತು. ಗಾಡಿಯ ಕುದುರೆಯ ಕತ್ತಿನ ಗೆಜ್ಜೆಯ ಒಲವಿನ ಗೀತಕ್ಕೆ ದಾರಿ ಕುಣಿಯುತ್ತ ಕುಣಿ ಯುತ್ತ ಸಾಗಿತ್ತು.

* * *

" ಎಳೆ ನಾಗರಗಳ ಅಂಗೇನೆ ಕಚ್ಬಾಡ್ತಾರೆ " ಎಂದ ಬೋರ.

ನಾರಣಪ್ಪ ಬಹಳ ಯೋಚನೆಯಲ್ಲಿ ಮುಳುಗಿದ್ದರು. ಮಂಚದ ಮೇಲಿಂದೆದ್ದು ಹೀಗಿಂದ ಹಾಗೆ ಶತಪಥಿಸುತ್ತಿದ್ದರು. ಮೂರ್ತಿಗೆ ಆ ಹುಡುಗಿ

ಎಲ್ಲಿ ಗಂಟುಬಿದ್ದಳು? ಅವಳು ಯಾರೆಂಬುದೇ ಅವರ ಮನಸ್ಸಿಗೆ ಹೊಳೆಯದು.

"ಬೋರ, ಆ ಹುಡುಗಿ ಯಾರು ನಿನಗೆ ಗೊತ್ತೆ?"

"ಆ ಕಿರಿಸ್ತಾನರಗುಡಿ ಐತಲ್ಲಾ, ಅದರ ಆ ಚೋರಿ ದೊಡ್ಡ ಮಾಡಿಮನೆ"

"ಹುಂ, ಇಂಜನಿಯರ್ ಮನೆ"

"ಊಂ, ಅಲ್ಲಿಂದ ಬತ್ತದೆ ದಿನಾಗ್ಲೂ ಆ ಉಡ್ಗಿ"

"ಅವರಿಬ್ಬರೂ ಎಲ್ಲಿ?"

"ಕೆರೆಮಂಟ್ಪೆ ಐತಲ್ಲಾ ಅಲ್ಲಿ. ಮೂರ್ತಪ್ಪ ಗಲ್ಡಿಯಿಂದ ಬರೋದ್ನೇ ಕಾದಿತ್ತದೆ ಆ ಉಡ್ಗಿ"

"ಸರಿ ನೋಡೋಣ"

ನಾರಣಪ್ಪನಿಗೆ ಬಹಳ ಯೋಚನೆಗಿಟ್ಟುಕೊಂಡಿತು. ಮೂರ್ತಿ ಇನ್ನೂ ಚಿಕ್ಕ ವಯಸ್ಸಿನಲ್ಲೇ ಹೀಗಾದನೆಂದುಕೊಂಡಿರಲಿಲ್ಲ. ಹೇಗೆ ಬೇಕಾದರೂ ಹಣ ಖರ್ಚು ಮಾಡಲಿ, ಸುಖವಾಗಿರಲಿ ಆದರೆ ಹೆಂಗಸಿನ ಸಹವಾಸ ಮಾತ್ರ ಬೇಡ ವೆಂದು ಅವರ ಮತ. ತಮ್ಮೊಲವಿನ ಜೆಸ್ಸಿಯನ್ನು ಕಳೆದುಕೊಂಡ ನಾರಣಪ್ಪ ನಿಗೆ ಉಳಿದ ಹೆಂಗಸರೆಲ್ಲಾ ಬೇಡವಾದರು. ಬೇಕೆಂದರೆ ಯಾವ ಹೆಣ್ಣನ್ನಾ ದರೂ ಅವರು ಕೊಳ್ಳಬಹುದಾಗಿತ್ತು. ಆದರೆ ಅವರಿಗೆ ಅದು ಬೇಡವಾಗಿತ್ತು. ಹೆಂಗಸನ್ನು ಪ್ರೇಮಿಸಿ, ಆಕೆಯೊಲವನ್ನು ಸಂಪಾದಿಸಿದರೂ ಕೂಡ ಎರಡು ಹೃದಯಗಳ ಕೂಡಿಕೆಗೆ ಕ್ರೂರೀಜಗತ್ತು ಅಡ್ಡಿಯಾಗುವುದೆಂದು ಅವರಿಗೆ ಗೊತ್ತಿತ್ತು, ಅನುಭವವಾಗಿತ್ತು! ಇನ್ನು ಮೂರ್ತಿಯ ಬಾಳೂ ಎಲ್ಲಿ ಹಾಳಾಗಿ ಹೋದೀತೋ ಎಂದು ಅವರ ಹೆದರಿಕೆ. ಏನಾದರೂ ಆಗಲಿ, ಒಮ್ಮೆ ಪರೀಕ್ಷಿಸಿ ನೋಡಬೇಕೆಂದು ಅವರ ಮನಸ್ಸು. ಸಂಜೆ ಹೋಗಿ ಅವರನ್ನು ನೋಡಿ ಬಂದು ಆಮೇಲೆ ಯಾವುದೂ ಮಾತೆಂದು ಸುಮ್ಮನಿದ್ದರು. ಈಗ ಹೊಳೆಯಿತು ಅವ ರಿಗೆ ಮೂರ್ತಿ ಗರಡಿಯಿಂದ ತಮಗಿಂತ ಮೊದಲೇ ಹೊರಟು ಮನೆಗೇಕೆ ಹೊತ್ತಾಗಿ ಬರುವನೆಂಬುದು. ಕುದುರೆಗಾಡಿಯಲ್ಲಿ ಕುಳಿತು ಹೋಗುತ್ತಿದ್ದುದೂ ಇದಕ್ಕೇ ಇರಬಹುದೆನ್ನಿಸಿತು. ಯಾವಾಗಲೂ ಠೀವಿಯಿಂದ, ಹೊಸ ಬಟ್ಟೆಗಳನ್ನು ಹೊಲಿಸುತ್ತಿದ್ದುದೂ ಇದಕ್ಕೇ ಇರಬಹುದೆಂದು ಸಂಶಯ ವಾಯಿತು.

" ಬೋರ, ಎಷ್ಟು ದಿನದಿಂದ ಹೀಗೆ ? " ಎಂದು ಕೇಳಿದರು.

" ನಂಗಿದು ಗೊತ್ತೇ ಇರ್ಲಿಲ್ಲ ಬುದ್ಧಿ. ನಮ್ಮೈದ ಕೆಂಪ ಗಾಡಿ ಒಡ್ಯೋನು ಯೋಳ್ದಮೇಲೆನೇ ನಂಗೂ ತಿಳ್ದದ್ದು. ಈಗ್ನಾಕೈದು ದಿನ್ದಿಂದ ನಾನೇ ಕಣ್ಣಾರೆ ಕಂಡೆ. ಇಂಗೇ ಎಷ್ಟೋ ದಿನ್ದಿಂದ."

" ಸರಿ, ಸರಿ "

*　　　　*　　　　*

ಮೂರ್ತಿ ಗರಡಿಯಿಂದ ಅವಸರವಸರವಾಗಿ ಬಂದವನೇ ಸುತ್ತ ಮುತ್ತ ನೋಡಿದ. ಯಾರೂ ಇರಲಿಲ್ಲವೆಂದು ಖಚಿತವಾದೊಡನೆಯೇ ಮಂಟಪದ ಬಳಿ ಬಂದು ಒಳಹೊಕ್ಕು ಮೆಲುದನಿಯಿಂದ

" ಸರೂ " ಎಂದ.

" ಓ " ಮಧುರ ದನಿಯೊಂದು ಉತ್ತರ ಕೊಟ್ಟಿತು.

" ಬಾ "

ಸರುವಿನ ಕೈಹಿಡಿದು ಕೊಂಡು ಹೊರಕ್ಕೆಳೆದು ಕೊಂಡ ಮೂರ್ತಿ. ಸೂರ್ಯ ಆಗತಾನೇ ಮುಳುಗುತ್ತಿದ್ದ. ಆಕಾಶವೆಲ್ಲಾ ರಂಗು ರಂಗಾಗಿತ್ತು. ಕೆರೆಯಲ್ಲಿ ಬೆಳೆದಿದ್ದ ಬಿಳಿದಾವರೆಗಳ ಮೇಲೆ ಕೆಂಗಿರಣದ ಛಾಯೆ ಬಿದ್ದು ಬೃಹದಾಕಾರದ ಗುಲಾಬಿಗಳಂತೆ ಕಾಣುತ್ತಿದ್ದವು. ಸರುವಿನ ಕೆನ್ನೆ ಹೊಳೆಯುತ್ತಿತ್ತು.

ಕೈಯಲ್ಲಿ ಕೈಯಿಟ್ಟು ಪಕ್ಕದ ಹೊಲದ ಕಾಲುಹಾದಿ ಹಿಡಿದರು. ಹೊಲ ದಾಟಿ ಆ ಕಡೆಯ ಸಂತೆಮಾಳದ ದೊಡ್ಡ ಬಯಲಿನ ಪಕ್ಕದ ಮಾವಿನ ತೋಪಿಗೆ ಹೋದರು. ಇಬ್ಬರೂ ನೆಲದ ಮೇಲೆ ಹಾಯಾಗಿ ಬಿದ್ದುಕೊಂಡರು. ಮೂರ್ತಿ ತಂದಿದ್ದ ತಿಂಡಿಯ ಪೊಟ್ಟಣ ಬಿಚ್ಚಿ ಸರು ಅವನ ಬಾಯಿಗೊಂದು ಜಿಲೇಬಿಯಿಟ್ಟಳು. ಅವನು ಅರ್ಧಕ್ಕೆ ಕಚ್ಚಿ ನೀನೂ ತಿನ್ನೆಂದು ಬಾಯಿ ಮುಂದೆ ಮಾಡಿದ. ಅವಳು ಅವನ ಬಾಯಲ್ಲಿದ್ದ ಉಳಿದರ್ಧವನ್ನು ಕಚ್ಚಿದಳು. ಮೂರ್ತಿ ಅವಳನ್ನು ತಬ್ಬಿಕೊಂಡುಬಿಟ್ಟ. ಗಾಳಿ ಅವರಿಬ್ಬರ ಹುಚ್ಚು ನಗೆಯನ್ನು ಮರ ದೆಲೆಗಳಿಗೆ ಪಿಸುಗುಟ್ಟಿತು.

"ಸರೂ, ಲೇ, ಸರೂ"

"ನಾನು ಮಾತಾಡೋಲ್ಲ. ನನಗೆ ಕೋಪ ಬಂದಿದೆ"

"ಓಹೋ, ಹಾಗೋ. ಹಾಗಾದರೆ ನಾನೂ ಮಾತಾಡುವುದಿಲ್ಲ." ಎಂದು ಬೇರೊಂದು ಪಕ್ಕಕ್ಕೆ ಹೊರಳಿದ. ಅವಳೂ ಮುನಿಸಿನಿಂದ ಬೇರೆಕಡೆ ಮುಖ ತಿರುವಿಕೊಂಡಳು. ಒಂದೆರಡು ಕ್ಷಣವೇ ಒಂದೆರಡು ಯುಗವಾಗಿ ತೋರಿತು ಮೂರ್ತಿಗೆ. ಅವಳ ಸೀರೆಯ ಸೆರಗು ಅವನ ಮುಖದ ಮೇಲೆ ಹಾದುಬಿದ್ದಿತು. ಮೆಲ್ಲನೆ ಅವಳ ಕಡೆ ಓರೆನೋಟ ಬೀರಿದ. ಅವಳೂ ಅದೇ ಸಮಯಕ್ಕೆ ಸರಿಯಾಗಿ ಅವನ ಕಡೆ ನೋಡಿದಳು ಇಬ್ಬರೂ ಕದ್ದವರಂತೆ ತಕ್ಷಣ ತಿರುಗಿದರು. ಮತ್ತೆ ಜೋರಾಗಿ ನಕ್ಕು ಒಬ್ಬರ ಪಕ್ಕಕ್ಕೊಬ್ಬರು ಸರಿದರು.

"ಸರೂ, ನಿಮ್ಮಮ್ಮ ಏನೂ ಅನ್ನೋಲ್ಲವೇನೇ?"

"ಯಾಕನ್ನುತ್ತಾರೆ? ಅವಳಿಗೆ ಗೊತ್ತಾದರೆ ತಾನೇ. ನಾನೆಲ್ಲೊ ಸ್ನೇಹಿತರ ಮನೆಗೆ ಹೋಗಿದೀನಿಂತ ತಿಳಕೊಂಡಿದಾಳೆ ಅಮ್ಮ ಮೂರ್ತಿ, ನಿಮ್ಮಮ್ಮ ಏನೂ .." ಮೂರ್ತಿಯ ಕೈಹಿಡಿತ ಇದ್ದಕ್ಕಿದ್ದಂತೆ ಸಡಿಲವಾಯಿತು. ಮುಖ ಗಂಭೀರವಾಯಿತು. ಅಮ್ಮ, ತನ್ನ ತಾಯಿ, ತನ್ನ ತಾಯಿಯ ನೆನಪು ಅವನಿಗೆ ಬಹಳ ಕಾಲ ಬಂದಿರಲಿಲ್ಲ. ಹಿಂದೊಮ್ಮೆ ಬಂದಿತ್ತು. ಅದು ಸರುವಿನೊಂದಿಗೆ ಕೂಡಿಕೆಯಾದ ದಿನ. ಆ ಸುಂದರ ಇರುಳು, ಸುಂದರ ನಿಸರ್ಗ, ಎದುರಿಗೆ ಸುಂದರ ಮೂರ್ತಿ ಸರೋಜ ಅವನಿಗೂ ಯೌವನದ ಕಾವು. ಅವಳನ್ನು ತಬ್ಬಿಕೊಂಡಿದ್ದ, ಗಾಢವಾಗಿ. ಅವಳ ಮೈಬಿಸಿ ತನ್ನ ಮೈಬಿಸಿಗೆ ಅಂಟಿಹೋಗಲೆಂಬಂತೆ ಅವಳನ್ನು ತಬ್ಬಿಕೊಂಡಿದ್ದ. ಆ ಸಮಯದಲ್ಲಿ ಮೈಯೆಲ್ಲಾ ಮನಸ್ಸಾಗಿ, ಮನಸ್ಸು ಸರುವಿನಲ್ಲಿತ್ತು. ಅವನಿಗೆ ಗೊತ್ತಿದ್ದುದು ಒಂದೇ. ಸರೂ, ಸರೂ—ಸರುವಿನ ಸುಂದರ ದೇಹ ತನ್ನ ಆಲಿಂಗನದಲ್ಲಿದ್ದುದು! ಆಗ ಅರೆಮೈಮರೆತ ಆ ಆನಂದದಲ್ಲಿ ತಾಯಿಯ ನೆನಪು ಇದ್ದಕ್ಕಿದ್ದಂತೆ ಬಂದಿತು! ಅಮ್ಮ ಇದನ್ನೊಪ್ಪುತ್ತಿದ್ದಳೇ ಎನಿಸಿತು. ಸರುವಿನ ಮೈಬಳಸಿದ್ದ ಕೈ ಸಡಿಲವಾಗಿತ್ತು. ಚಂದನದ ಕಿರಣಗಳನ್ನೆಸೆಯುತ್ತಾ ಉದಯಿಸುತ್ತಿದ್ದ ಚಂದ್ರ ತಾಯಿಯ ಅಸಮ್ಮತಿ ಸೂಚಿಸುವಂತೆ ಮೂರು ಮೋಡಗಳ ಮಧ್ಯೆ ಮಾಯವಾದ. ಆದರೆ, ರಕ್ತದ ಕಾವಿನಿಂದ ಮೈ ಮನ ಸುಡುತ್ತಿತ್ತು. "ಸರು!" ಬಹುಕಷ್ಟದಿಂದ ಅಂದೆಲ್ಲಾ ಸಂಕಟಪಟ್ಟ; ಕೊರಗಿದ್ದ; ರಾತ್ರಿಯೆಲ್ಲಾ ಅದೇ ಯೋಚನೆ.

ಒಂದು ಕಡೆ ಸರುವಿನ ಸುಂದರದೇಹ ತನಗಿತ್ತ ನೂತನಾನಂದದ ಅನುಭವ; ಮತ್ತೊಂದು ಕಡೆ ತಾಯಿಯ ನೆನಪು. ಅಮ್ಮ ಅದನ್ನೊಪ್ಪುವಳೇ; ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಹೊರಳಾಡಿದ. ಮರುದಿನವೆಲ್ಲಾ ಮೈ ಆಯಾಸದ ಜತೆಗೆ ಮನಸ್ಸಿನ ದುಗುಡ! ಮುಖ ಸಪ್ಪೆಯಾಗಿತ್ತು. ಆದರೆ ತುಟಿಯಿನ್ನೂ ಸರುವಿತ್ತ ಮುತ್ತಿನ ಕಾವಿನಲ್ಲಿ ಉರಿಯುತ್ತಿತ್ತು. ಆ ದಿನವೆಲ್ಲಾ ಸರುವನ್ನು ಕಾಣಲು ಹೋಗಲು ಮನಸ್ಸಾಗಲಿಲ್ಲ; ಆದರೆ ಮರುದಿನವೇ ತಾನೇತಾನಾಗಿ ದಾರಿಯಲ್ಲಿ ಸರು ಕಣ್ಣಿಗೆ ಬಿದ್ದಾಗ ಎಲ್ಲಾ ಮರೆತುಹೋಗಿತ್ತು; ಇಂದು ಮತ್ತೆ ತಾಯಿಯ ನೆನಪು; ಮೂರ್ತಿಯ ಮುಖ ಕೊಂಚ ಗಂಭೀರವಾಯಿತು.

ಸರು ಕೊಂಚಕಾಲ ಸುಮ್ಮನೆ ಅವನ ಕಡೆಗೇ ನೋಡುತ್ತಿದ್ದಳು.

"ಮೂರ್ತಿ, ಮೂರ್ತಿ ನಾನೇನಾದರೂ ಅಂದೆನೇ?"

"ಏನೂ ಇಲ್ಲ" ಎಂದು ಮೈ ಕೊಡವಿಕೊಂಡು ಎದ್ದು ಕುಳಿತ ಮೂರ್ತಿ.

"ಅಲ್ಲಾ ಸರೂ, ಇದು ತಿಳಿದರೆ ಜನ ಏನಂದಾರು?"

"ಜನರ ಬಾಯಿಮುಚ್ಚಿಸಲು ನಮ್ಮ ಬಳಿ ಹಣವಿಲ್ಲವೆ?"

"ನಿಮ್ಮ ಅಪ್ಪ—"

"ತಿಳಿದರೇನೀಗ? ನಾನು ನಿನ್ನನ್ನೇ ಮದುವೆಯಾಗಿಬಿಡುತ್ತೇನೆಂದು ಹೇಳಿದರಾಯಿತು" ಮೂರ್ತಿ ಮನಸ್ಸಿನಲ್ಲೇ 'ಮದುವೆ–ಮದುವೆ' ಎಂದುಕೊಂಡ. ಸರೋಜ ತನ್ನ ವಯಸ್ಸಿನವಳೇ; ದೊಡ್ಡ ಮನೆತನದವಳು; ಇಂಜಿನಿಯರ್ ರಾಮಸ್ವಾಮಿಯವರ ಮಗಳು. ಸುಖವಾಗಿ ಬೆಳೆದವಳು. ತನನ್ನೇ ಪ್ರೇಮಿಸುವಳು—ತನ್ನನ್ನೇ ಮದುವೆಯಾಗುವಳು.

"ಮೂರ್ತಿ, ಹೊತ್ತಾಯಿತು, ಮನೆಗೆ ಹೋಗೋಣ"

"ಹೂ" ಎಂದು ನಿಟ್ಟುಸಿರಿಟ್ಟು ಎದ್ದು ನಿಂತ ಮೂರ್ತಿ. ಇಂದು ಅವನು ಸರುಗೆ ಕೊಟ್ಟ ಮುತ್ತಿನಲ್ಲಿ ಎಂದಿನ ಕಾವಿರಲಿಲ್ಲ!

ಅಂದು ಭಾನುವಾರ. ಶಾಲೆಯಿರಲಿಲ್ಲ; ಭಾನುವಾರವೆಂದರೆ ಮೂರ್ತಿ ಸರೋಜೆಯರಿಗೆ ಅತ್ಯಾನಂದದ ದಿನ. ದಿನವೆಲ್ಲಾ ಪೂರ್ಣ ರಜೆಯಾದುದರಿಂದ ಸಂಜೆ ಬಹುಬೇಗನೇ ಸೇರಿ ಬಹಳ ಕಾಲ ಜತೆಯಲ್ಲಿರಬಹುದು.

ಸುಮಾರು ೫॥ ಆಗಿದ್ದಾಗಲೇ ಮೂರ್ತಿ ಬಾಯಲ್ಲಿ ಸೀಟಿಹಾಕುತ್ತಾ ಬಟ್ಟೆಹಾಕಿಕೊಂಡ. ಜೇಬಿನಲ್ಲಿ ನೋಡಿಕೊಂಡರೆ ದುಡ್ಡೇ ಇರಲಿಲ್ಲ. ಕೂಡಲೇ ನಿಸ್ಸಂಕೋಚವಾಗಿ ನಾರಣಪ್ಪನ ಬಳಿ ಬಂದು,

"ನಾಣಿ, ಸ್ವಲ್ಪ ದುಡ್ಡು ಬೇಕು" ಎಂದ.

ಚಿಕ್ಕಪ್ಪ ಎಂದಿನಂತೆ ತೆಗೆದುಕೊ ಎಂದುಬಿಡುವರೆಂದವನ ನಿರೀಕ್ಷೆ. ಆದರೆ ಚಿಕ್ಕಪ್ಪ "ಯಾಕೆ?" ಎಂದೊಡನೆ ಆಕಾಶವೇ ಕಳಚಿಬಿದ್ದಂತಾಯಿತು.

"ಹಾಗೆಯೇ ಬೇಕಾಗಿತ್ತು" ತಡವರಿಸಿಕೊಂಡು ಹೇಳಿದ.

ನಾರಣಪ್ಪ ಕೊಂಚಕಾಲ ತಲೆತಗ್ಗಿಸಿ ಯೋಚನೆ ಮಾಡಿದರು. "ಹೂಂ ತೆಗೆದುಕೊ" ಎಂದರು. 'ಮೂರ್ತಿ ದುಡ್ಡು ತೆಗೆದುಕೊಂಡು ಹೊರಟ. ಹೋಟಲಿಗೆ ಹೋಗಿ ಬೇಕಾದಷ್ಟು ತಿಂಡಿ ಕಟ್ಟಿಸಿಕೊಂಡು ಸರುವನ್ನು ಕಾಣಲು ಮಂಟಪಕ್ಕೆ ಹೋದ. ಸರು ಯಾಕೋ ಇನ್ನೂ ಬಂದಿರಲಿಲ್ಲ. ಇನ್ನೇನು ಬಂದಾಳು, ಬಂದಾಳೆಂದು ಕಾದು ಕಾದು ಬೇಸರವಾಯಿತು. ಸರು ಎಷ್ಟು ವೇಳೆಯಾದರೂ ಬರಲೇ ಇಲ್ಲ. ಮೂರ್ತಿ ನೋಡಿದ. ಆಗಲೇ ಸೂರ್ಯ ಮುಳುಗುತ್ತಿದ್ದ. ಐದು ಗಂಟೆಗೇ ಬರುತ್ತಿದ್ದ ಸರು ಇಷ್ಟು ಹೊತ್ತಾದರೂ ಯಾಕೆ ಬರಲಿಲ್ಲ? ಮನಸ್ಸು ಕುಗ್ಗಿತು. ನಾಡಿನಾಡಿಯೂ "ಸರು ಬರಲಿಲ್ಲ, ಸರು, ಸರು," ಎನ್ನುತ್ತಿತ್ತು. ಮೈಯೆಲ್ಲಾ ಕಣ್ಣಾಗಿ ನೋಡಿದ. ಮೈಯೆಲ್ಲಾ ಕಿವಿಯಾಗಿ ಕೇಳಿದ. ಸರು ಬರಲಿಲ್ಲ. ಮೂರ್ತಿ ನಿರಾಸೆಯಿಂದ ತಿಂಡಿಯನ್ನೆಲ್ಲಾ ಕೆರೆಯೊಳಕ್ಕೆಸೆದ, ಕುಗ್ಗಿದ ಮನಸ್ಸಿನಿಂದ ಕಾಲೆಳೆದುಕೊಂಡು ಮನೆಗೆ ಹಿಂದಿರುಗಿದ. ತಾನೆಲ್ಲಾದರೂ ಕಾಣದೆ ಬಂದೆನೋ ಎಂದು ಮತ್ತೊಮ್ಮೆ ಮಂಟಪದ ಕಡೆಗೆ ಹೋಗಿ ಬಂದ. ಆದರೆ ಸರು ಇಲ್ಲ.

ಮೂರ್ತಿ ಕಾಲೆಳೆದುಕೊಂಡು ಹೊಸಿಲು ದಾಟಿದೊಡನೆಯೇ ಎದುರಿಗೆ ನಾರಣಪ್ಪನವರು ಕಾದಿದ್ದುದನ್ನು ಕಂಡ.

"ಮೂರ್ತಿ ಬಾ ಇಲ್ಲಿ."

ಮೂರ್ತಿ ಮೆಲ್ಲನೆ ಬಳಿ ಹೋಗಿ ನಿಂತ. ಮಾತಾಡದೆ ತಲೆ ತಗ್ಗಿಸಿದ. ಇನ್ನೂ ಹೃದಯ 'ಸರು–ಸರು' ಎನ್ನುತ್ತಿತ್ತು.

"ಎಲ್ಲಿ ಹೋಗಿದ್ದೆ?" ಚಿಕ್ಕಪ್ಪನ ದನಿ ಗಡುಸಾಗಿತ್ತು.

"ಇಲ್ಲೇ ಕೆರೆಯ ಬಳಿ"

"ಇಷ್ಟು ಹೊತ್ತಿನಲ್ಲಿ!"

ಮೂರ್ತಿ ಮಾತಾಡಲಿಲ್ಲ. ಏನು ಹೇಳಲೂ ತೋರಲಿಲ್ಲ. ಕಣ್ಣೆತ್ತಿ ನೋಡಿದಾಗ ಚಿಕ್ಕಪ್ಪ ರುದ್ರರೂಪಿಯಾಗಿದ್ದರು. ಕಣ್ಣಿನಲ್ಲಿ ಕೆಂಡ ಕಾರತ್ತಿತ್ತು.

"ನನಗೆ ತಿಳಿಯದೆಂದಿದ್ದೀಯೇನು?" ಎಂದು ಎದ್ದು ನಿಂತರು.

"ಕಿಟ್ಟ! ಕಿಟ್ಟ! ಕರಕೊಂಡು ಬಾರೋ—"

ಚಿಕ್ಕಪ್ಪನ ಕೋಣೆಯಿಂದ ಕಿಟ್ಟ ಸರೋಜೆಯನ್ನು ಕರೆದು ತಂದ. ಮೂರ್ತಿಗೆ ಜಂಘಾಬಲವೇ ಉಡುಗಿ ಹೋದಂತಾಯಿತು.

"ಇವಳನ್ನು ಕಾಣಲು ತಾನೇ ಹೋಗಿದ್ದೆ?"

ಮೂರ್ತಿಗೆ ತಲೆಯೆತ್ತಲು ಹೆದರಿಕೆ. ತುಟಿ ಒಣಗಿತ್ತು.

"ನೀನೇ ಹೇಳು, ತಾಯಿ—ನಿನ್ನನ್ನು ನೋಡಲು ತಾನೇ ಇವನು ಬಂದಿದ್ದುದು?"

"ಹೌದು" ಎಂದು ತಲೆಯಲ್ಲಾಡಿಸಿದಳು ಸರೋಜ. ಮೂರ್ತಿ ತಲೆಯೆತ್ತಿ ಅವಳ ಕಡೆ ನೋಡಿದಾಗ ಅವಳ ನೋಟದಲ್ಲಿ ಹಟ, ತಾತ್ಸಾರ ತೋರಿತು.

"ನೋಡು, ತಾಯಿ. ಅವನನ್ನೇತಕ್ಕೆ ಕೆಣಕಿದೆ–ಕೆಡಿಸಿದೆ. ನಿನಗಿದು ಸರಿಯೇ? ನಿಮ್ಮ ಮನೆತನ ದೊಡ್ಡದು. ಯಾರಾದರೂ ದೊಡ್ಡ ಮನುಷ್ಯ ನಿನ್ನನ್ನು ಮದುವೆಯಾಗುತ್ತಿರಲಿಲ್ಲವೇ, ನಿನಗೆ ಮದುವೆ ಕೂಡ ಗೊತ್ತಾಗಿದ್ದು ನಮ್ಮ ಹುಡುಗನ ಬೆನ್ನಿಗೇಕೆ ಬಿದ್ದೆ?"

ನಾರಣಪ್ಪನ ದನಿಯಲ್ಲಿ ದುಃಖ ತುಂಬಿತ್ತು. ಸರು ಮಾತಾಡಲಿಲ್ಲ.

"ಇಷ್ಟು ಚಿಕ್ಕವಯಸ್ಸಿಗೇ ಹುಡುಗನನ್ನು ಕೆಡಿಸಿದೆಯಲ್ಲಾ—ಅವರ ತಂದೆಗೇನು ಹೇಳುವುದು. ನಿಮ್ಮ ತಾಯಿತಂದೆ ಏನೆಂದಾರು? ನಿನ್ನ ಗಂಡ ತಾನೇ ಏನು ಹೇಳುವನು! ಅಷ್ಟೊಂದು ಯೋಚಿಸಬೇಡವೇ ತಾಯಿ. ಇದು ನಿಮ್ಮ ಮನೆತನಕ್ಕೇ ಅವಮಾನವಲ್ಲವೇ ತಾಯಿ?"

ಸರು ತಲೆ ತಗ್ಗಿಸಿದಳು. ಮೂರ್ತಿ ಅವಳು ಧೈರ್ಯವಾಗಿ ತನ್ನ ಚಿಕ್ಕಪ್ಪನಿಗೆ ಉತ್ತರ ಕೊಡುವಳೆಂದಿದ್ದ. ಆದರೆ ಸರು ಉತ್ತರಕೊಡಲಿಲ್ಲ.

"ಕಿಟ್ಟ, ಆ ಹುಡುಗಿಯನ್ನು ಕರೆದುಕೊಂಡು ಹೋಗು" ಎಂದರು ನಾರಣಪ್ಪ.

"ಮತ್ತೆಂದೂ ಇವನ ಜತೆಗೆ ಬರಬೇಡ ತಾಯಿ. ನಿನ್ನನ್ನು ಬೇಡಿ ಕೊಳ್ಳುತ್ತೇನೆ!"

ಮೂರ್ತಿಗೆ ಎದೆಯೊಡೆಯಿತು. ಸರೂ ತನ್ನನ್ನೇ ಮದುವೆಯಾಗುವುದಾಗಿ ಹೇಳಿದವಳು! ಆಗಲೇ ಮದುವೆ ಗೊತ್ತಾಗಿದೆಯಂತೆ! ತೆಪ್ಪಗೆ ಹೊರಟುಹೋದಳಲ್ಲಾ. ತನ್ನ ಚಿಕ್ಕಪ್ಪ! ತಾನು ಬಯಸಿದುದು ಸಿಗದೆ ಹೋದುದಕ್ಕೆ ತನ್ನ ಬಯಕೆಯನ್ನೂ ಬಲಿಕೊಟ್ಟನಲ್ಲಾ ಎಂದು ಚಿಕ್ಕಪ್ಪನ ಮೇಲೆ ಕೋಪ! ಅವನ ಕೈಯಲ್ಲಿದ್ದಿದ್ದರೆ ಖಂಡಿತವಾಗಿಯೂ ಆ ಕ್ಷಣವೇ ಚಿಕ್ಕಪ್ಪನನ್ನು ಭಸ್ಮಮಾಡಿಬಿಡುತ್ತಿದ್ದ. ಅಷ್ಟೊಂದು ಬಿಸಿಯಾಗಿತ್ತು ರಕ್ತ!

ಮೂರ್ತಿ ಗರಡಿಗೆ ಹೋಗುವುದನ್ನು ನಿಲ್ಲಿಸಿದ. ಚಿಕ್ಕಪ್ಪನೊಂದಿಗೆ ಸರಿಯಾಗಿ ಮಾತಾಡುತ್ತಲೇ ಇರಲಿಲ್ಲ. ಶಾಲೆಗೆ ಹೋದರೆ ಹೋದ. ಇಲ್ಲದಿದ್ದರೆ ಇಲ್ಲ. ಎಲ್ಲದರಲ್ಲಿಯೂ ಒಂದು ಬಗೆಯ ನಿರಾದರ. ಯಾರಿದ್ದರೇನು, ಬಿಟ್ಟರೇನು? ನನಗೆ ಬೇಕಾದುದೊಂದು ಇಲ್ಲದಮೇಲೆ ಎಂದು. ದಿನವೂ ಸಂಜೆ ತಾನೂ ಸರೋಜೆಯೂ ಜತೆಯಾಗಿ ಕೂತು ನಕ್ಕುನಲಿಯುತ್ತಿದ್ದ ಮಂಟಪದ ಬಳಿ ಹೋಗಿ ಕುಳಿತುಕೊಳ್ಳುವನು. ಅಲೆಗಳನ್ನೇ ನೋಡುತ್ತಾ ಕೂತು ರಾತ್ರಿ ಬಹು ಹೊತ್ತಾದ ಮೇಲೆ ಮನೆಗೆ ಬರುವನು.

ಮೂರ್ತಿ ದಿನೇ ದಿನೇ ಸೊರಗುವುದನ್ನು ಕಂಡು ನಾರಣಪ್ಪನಿಗೂ ಹೆದರಿಕೆಯಾಯಿತು ಸರುವಿಗಾಗಿ ಇಷ್ಟೊಂದು ಕಾತರ ಇವನಿಗಾದೀತೆಂದು ಆವರೆಣಿಸಿರಲಿಲ್ಲ. ಮೂರ್ತಿಯಂತೂ ಜಟ್ಟಿಯಾಗಿದ್ದವನು ತೆಳ್ಳಗಾಗುತ್ತ ಬಂದ!

ಈಚೀಚೆಗೆ ಮನಸ್ಸಿನ ನೋವಿನಲ್ಲಿ ತಾಯಿಯ ನೆನಪು ಬರಲಾರಂಭವಾಗಿತ್ತು. ಅಮ್ಮ! ಅಮ್ಮನಿದ್ದಿದ್ದರೆ? ಅಮ್ಮನಿದ್ದಿದ್ದರೆ? ತನಗೆ ಹೀಗಾಗುತ್ತಿರಲೇ ಇಲ್ಲವೆಂಬುದು ಅವನ ಹುಚ್ಚು ಭರವಸೆ! ಅಂತರ್ಮುಖಿಯಾದ ಅವನ ಮನಸ್ಸು ಏನೇನೋ ಕಲ್ಪಿಸಿಕೊಳ್ಳುತ್ತಿತ್ತು. ಸರುವಿಗಾಗಿದ್ದ ನೋವು,

ಒಲವೆಲ್ಲ ಜಗತ್ತಿನ ಮೇಲಿನ ದ್ವೇಷಕ್ಕೆ ತಿರುಗಿತು. ಸರುವಿಗೆ ಮದುವೆ ಬೇರೆ! ಮೂರ್ತಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡ. ಪ್ರಪಂಚ ಬಹಳ ಕೆಟ್ಟದು. ನಮಗ ಬೇಕಾದ-ದೊಂದೂ ಸಿಗುವುದಿಲ್ಲ. ಅದೇ ಮಾತನ್ನು ಕುಕ್ಕರಹಳ್ಳಿಯ ಕೆರೆಯ ಮೇಲಿನ ಹುಚ್ಚ ಆಡಿದ್ದ. ಅದೇ ಮಾತನ್ನು ನಾಣಿ ಚಿಕ್ಕಪ್ಪ ಹೇಳಿದ್ದ. ಇದರಿಂದ ಚಿಕ್ಕಪ್ಪನಲ್ಲಿ ಮತ್ತೆ ಮೊದಲಿದ್ದ ಸಲಿಗೆಯೇ ತೋರಲಾರಂಭವಾ ಯಿತು. ಮತ್ತೆ ಎಂದಿನಂತೆ ಗರಡಿಗೆ ಹೋಗಲಾರಂಭಿಸಿದ. ಪುನಃ ಗಾಡಿಯ ಕುದುರೆಯ ಕೊರಳಿನ ಗೆಜ್ಜೆಯ ಕುಣಿತಕ್ಕೆ ದಾರಿ ಹಿಂದೆಹಿಂದೆ ಸರಿಯುತ್ತಿತ್ತು!

೫

ಮೂರ್ತಿಯ ಮೇಲೆ, ಸರೋಜೆಯ ಮದುವೆಯ ಘಟನೆ ಅವನೆಣಿ ಸಿದ್ದುದಕ್ಕಿಂತಲೂ ಹೆಚ್ಚು ಪರಿಣಾಮ ತೋರಿತು. ಕೆಲವು ದಿನಗಳು ಯಾವಾ ಗಲೂ ಸರುವಿನ ವಿಷಯವಾಗಿಯೇ ಯೋಚಿಸುತ್ತಾ ಕುಳಿತಿರುತ್ತಿದ್ದ. ಎಲ್ಲೆಲ್ಲಿ ನೋಡಿದರೂ ಅವಳ ಆಕೃತಿಯೇ ಎದ್ದುತೋರುತ್ತಿತ್ತು. ಕಿವಿಯಲ್ಲಿ ಅವಳ ಮಾತುಗಳೇ ಪ್ರತಿಧ್ವನಿತವಾಗುತ್ತಿದ್ದುವು. ಹಾಗೆಯೇ ಜತೆಗೆ 'ಸರು ನನ್ನನ್ನು ಬಿಟ್ಟಳು' ಎಂಬ ಸತ್ಯವೂ ಮನಸ್ಸಿನಲ್ಲಿ ಕೊರೆಯಲಾರಂಭಿಸಿತು. ಇದರಿಂದ ಮೂರ್ತಿಗೆ ಮೆಲ್ಲನೆ ಹೆಂಗಸಿನಲ್ಲಿ ನಂಬಿಕೆ ಮಾಯವಾಯಿತು. ಅಂತರ್ಮುಖಿ ಮನಸ್ಸು ತನ್ನ ಸುತ್ತ ಚಿಂತೆಯ ಬಲೆ ನೇದುಕೊಂಡಿತು. ಜಗತ್ತೇ ಹೀಗೆ. ಜಗತ್ತಿನ ಜೀವನವೇ ಹೀಗೆ. ಜಗತ್ತಿನ ಜನರೆಲ್ಲ ಹೀಗೆಯೇ. ಯಾರನ್ನೂ ಯಾರ ಮಾತನ್ನೂ ನಂಬುವುದು ಸಾಧ್ಯವಿಲ್ಲ. ಎಲ್ಲರೂ ಮೋಸ ಗಾರರೆಂಬ ಭಾವನೆ ಮನಸ್ಸಿನಲ್ಲಿ ಬೇರೂರಿ ಬೆಳೆಯಲಾರಂಭಿಸಿತು. ಈ ಹೃದ ಯದ ನೋವು ಹೆಚ್ಚಾದಂತೆ ಮೂರ್ತಿಗೆ ತಾಯಿಯ ನೆನಪೂ ಹೆಚ್ಚಾಯಿತು. ಈಗೀಗ ಅವನಿಗೆ ಒಮ್ಮೊಮ್ಮೆ ಅನಿಸುತ್ತಿತ್ತು. ತಾನು ಸರುವಿನೊಂದಿಗೆ ಸೇರ ಬಾರದಾಗಿತ್ತು; ಸೇರಿದುದು ತಪ್ಪು. ಅದರಿಂದ ತನಗೇ ಕೆಡುಕೆಂದು ಅಂದು ಕೊಳ್ಳುತ್ತಿದ್ದ. ಆದರೆ ಅದು ಹೀಗೆಯೇ ಎಂದು ಖಚಿತವಾಗಿ ಹೇಳುವುದಾ ದರೂ ಹೇಗೆ? ಅಮ್ಮ ಇದ್ದಿದ್ದರೆ? ಅಮ್ಮ ಇದ್ದಿದ್ದರೆ'ಈ ತೊಂದರೆಯೆಲ್ಲ ಇರುತ್ತಲೇ ಇರಲಿಲ್ಲ.

ಮೂರ್ತಿ ಯಾವಾಗಲೂ ಗಂಭೀರನಾಗಿಯೇ ಇರುತ್ತಿದ್ದ. ತಾಯಿ ತನ್ನನ್ನು ವಿದ್ಯಾವಂತನಾಗಿ ಕಾಣಬಯಸಿದುದು ಪದೇಪದೇ ಮನಸ್ಸನ್ನು ಕಾಡುತ್ತಿತ್ತು. ಶಾಲೆಗೆ ಗಾಡಿಯಲ್ಲಿ ಹೋಗುವುದನ್ನು ಬಿಟ್ಟು, ಉಡಿಗೆತೊಡಿಗೆ ಯಲ್ಲಿದ್ದ ಆಸಕ್ತಿಯೆಲ್ಲ ಮಾಯವಾಗಿ ಸಾಮಾನ್ಯ ಉಡಿಗೆಯನ್ನೇ ಹಾಕಿ ಕೊಳ್ಳುತ್ತಿದ್ದ. ಗರಡಿಗೆ ಹೋಗುವುದನ್ನೇನೋ ನಿಲ್ಲಿಸಲಿಲ್ಲ. ಆದರೆ ತನಗೆ ಸಿಕ್ಕಿದ ವೇಳೆಯನ್ನೆಲ್ಲಾ ಓದುವುದರಲ್ಲೇ ಕಳೆಯಲಾರಂಭಿಸಿದ. ದಿನವೂ ಗರಡಿಯಿಂದ ಕೊಂಚ ಮುಂಚೆಯೇ ಹೊರಟು ಪುಸ್ತಕ ಭಂಡಾರಕ್ಕೆ ಹೋಗಿ ಅಲ್ಲಿ ಓದುತ್ತಾ ಕುಳಿತುಕೊಳ್ಳುವನು. ಮತ್ತೆ ರಾತ್ರಿ ಮನೆಗೆ ಹಿಂದಿರುಗಿದ ಮೇಲೆ ತಾನೆರವಲು ತಂದಿದ್ದ ಪುಸ್ತಕಗಳನ್ನೋದಿ ಪಾಠಗಳನ್ನೋದಿ ಮಲಗಿ ಕೊಳ್ಳುವನು.

ಮೂರ್ತಿಯ ಮೈಕಟ್ಟನ್ನು ಕಂಡು ಶಾಲೆಯ ಅಧಿಕಾರಿಗಳು ಅವನನ್ನೇ ಆಟಗಳ ನಾಯಕನನ್ನಾಗಿ ನೇಮಿಸಿದರು. ಆದರೆ ಮೂರ್ತಿ ಒಪ್ಪಲಿಲ್ಲ. ಈಗ ಪುಸ್ತಕಗಳಲ್ಲೇ ಅವನ ಮನ ನಟ್ಟಿತ್ತು. ಒಂದಲ್ಲ ಒಂದು ಪುಸ್ತಕವನ್ನೋದು ವುದು. ಕೆಲವು ಬಾರಿ ಅರ್ಥವಾಗುತ್ತಿರಲಿಲ್ಲ. ಅವುಗಳನ್ನು ತನ್ನ ಸ್ನೇಹಿತ ಶಂಕರುಗೆ ತೋರಿಸಿ ತಿಳಿದುಕೊಳ್ಳುತ್ತಿದ್ದ.

ಶಂಕರುವನ್ನು ಜನರೇನೋ 'ವಿಚಿತ್ರ ಹುಡುಗ' ಎನ್ನುತ್ತಿದ್ದರು. ಎಲ್ಲರೂ ಅವನನ್ನು ನೋಡಿ 'ಅಯ್ಯೋ ಪಾಪ' ಅನ್ನುವರೇ—ಕೆಲವರಂತೂ ಅವನಿಗೆ ಹುಚ್ಚೇ ಹಿಡಿದಿದೆಯೆನ್ನುತ್ತಿದ್ದರು. ಇಷ್ಟಕ್ಕೆಲ್ಲ ಕಾರಣ ಶಂಕರುವಿನ ಧ್ಯೇಯವಾದ. ಶಂಕರು ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಓದಿ ಬಿ. ಎ. ಡಿಗ್ರಿ ತೆಗೆದುಕೊಂಡಿದ್ದ. ಮನೆಯವರ ಬಲವಂತಕ್ಕಾಗಿ ಸರ್ಕಾರಿ ಕೆಲಸಕ್ಕೂ ಸೇರಿದ್ದ. ಆದರೆ ಆ ಕೆಲಸದ ಸೇವಕ ಮನೋಭಾವ ಅವನಿಗಿರಲಿಲ್ಲ.—ಇದೂ ಅಲ್ಲದೆ ಅವನು ಕವಿಗಳ, ಕಾದಂಬರಿಕಾರರ ಪ್ರಭಾವಕ್ಕೊಳಗಾಗಿದ್ದ. ಒಂದು ಆದರ್ಶಕ್ಕಾಗಿ ಜನ ಹೆಣಗಾಡಬೇಕು, ಒಂದು ಆದರ್ಶಸಾಧನೆಗಾಗಿ ಎಂತಹ ತೊಂದರೆಯಾದರೂ ಸಹಿಸಬೇಕು ಎನ್ನುವ ಮನೋಭಾವವನ್ನು ಬೆಳೆಸಿಕೊಂಡು ಬಂದಿದ್ದ. ಅವನಿಗೂ ಮೂರ್ತಿಗೂ ಗೆಳೆತನವಾದುದು ಕೆರೆಯ ಏರಿಯ ಮೇಲೆಯೇ—ಮುರುಕು ಮಂಟಪದ ಬಳಿ. ಮೂರ್ತಿ, ಸರುವಿನ ಚಿಂತೆಯಲ್ಲಿಯೇ ಕುಳಿತಿದ್ದಾಗ ಒಂದು ದಿನ ಇದ್ದಕ್ಕಿದ್ದಂತೆ ಅವನ ಪಕ್ಕದಲ್ಲಿ ಶಂಕರು ಬಂದು

ಕುಳಿತು ಅಲೆಗಳನ್ನೇ ದಿಟ್ಟಿಸುತ್ತಿದ್ದ. ಪ್ರತಿದಿನವೂ ಸಂಜೆ ಶಂಕರು ಬರಲಾರಂಭಿಸಿದ. ಒಬ್ಬರನ್ನೊಬ್ಬರು ನೋಡುತ್ತಾ ಹಾಗೆಯೇ ಪರಿಚಯವಾಯಿತು. ಮೂರ್ತಿಗೆ ತನ್ನ ನೋವಿನಲ್ಲಿ ಸಮಾಧಾನ ನೀಡುವವರು ಬೇಕಾಗಿತ್ತು. ಶಂಕರುವಿಗೆ ಏಕಾಕಿ ಬಾಳಿಗೊಬ್ಬ ಗೆಳೆಯಬೇಕಾಗಿತ್ತು. ಇಬ್ಬರಿಗೂ ಗಾಢ ಸ್ನೇಹ ಬೆಳೆಯಿತು. ಮೂರ್ತಿಗೆ ಶಂಕರುವಿನಲ್ಲಿ ಅಪಾರ ಸ್ನೇಹ, ವಿಶ್ವಾಸ. ಶಂಕರುವಿಗೂ ಮೂರ್ತಿಯಲ್ಲಿ ಆಸಕ್ತಿ, ಮಮತೆ, ವಿಶ್ವಾಸ. ಮೂರ್ತಿಯನ್ನು ಪುಸ್ತಕಗಳಿಗೆ ಗಂಟುಹಾಕಿದವನೇ ಶಂಕರು ಎನ್ನಬಹುದು.

"ಜೀವನ ಬಹಳ ಕೆಟ್ಟುದು. ಈ ಜಗತ್ತಿನಲ್ಲಿ ವ್ಯಕ್ತಿಗೆ ಸ್ಥಾನವೇ ಇಲ್ಲ. ವ್ಯಕ್ತಿ ಒಂದು ಅಣು ಮಾತ್ರ. ಅವನನ್ನು ಕೇಳುವವರೇ ಇಲ್ಲ. ತನ್ನ ವ್ಯಕ್ತಿತ್ವ ಪ್ರಕಟಿಸಲು ಹೋದರೆ ಜಗತ್ತು ತನ್ನ ಕಬ್ಬಿಣದ ಕಾಲಿನಿಂದ ಮೊಗ್ಗನ್ನು ಹಿಸುಕುವಂತೆ ಹಿಸುಕಿಬಿಡುತ್ತದೆ. ಈ ನೋವನ್ನು ಮರೆಯಲು ಪುಸ್ತಕವೊಂದೇ ಹಾದಿ" ಇದು ಶಂಕರುವಿನ ಮಾತು. ಶಂಕರು ಒಂದಲ್ಲ ಒಂದು ಪುಸ್ತಕದ ವಿಷಯವಾಗಿ ಮಾತನಾಡುತ್ತಿದ್ದುದನ್ನು ಕೇಳುತ್ತಿದ್ದ ಮೂರ್ತಿ. ಶಂಕರ ಮೊದಮೊದಲು ಕೆಲವು ಕವಿಗಳ ವಿಚಾರ, ಕೆಲವು ಕಾದಂಬರಿಕಾರರ ವಿಚಾರ ತಿಳಿಸುತ್ತಿದ್ದ. ಈ ಕಾದಂಬರಿಕಾರರ, ಕವಿಗಳ ದೃಷ್ಟಿ ಹೇಗೆ, ಅವರು ಜೀವನ ಕಂಡ ಬಗೆಯೇನೆಂಬುದನ್ನು ವಿವರಿಸುತ್ತಿದ್ದ. ಮುಖ್ಯವಾಗಿ ನಮಗೆ ನೋವು ಕೊಡುವ ಕ್ರೂರೀಜಗತ್ತಿನ ಮೇಲೆ ಸೇಡು ತೀರಿಸಿಕೊಳ್ಳಲು ಅದಕ್ಕೇ ಅದರ ಕರಾಳ ಮುಖಕ್ಕೇ ಕನ್ನಡಿ ಹಿಡಿದ ಥಾಮಸ್ ಹಾರ್ಡಿ ಕಾದಂಬರಿಕಾರನ ಕಾದಂಬರಿಯ ವಿಷಯ, ತನ್ನ ಸಮಾಜದ ವಿರುದ್ಧ, ಸಮಾಜದ ಬಂಧನಗಳ ವಿರುದ್ಧ ಹೋರಾಡಿ ಅದರ ಬಿರುಗಣ್ಣಿಗೆ ಆಹುತಿಯಾದ ಕವಿ ಷೆಲ್ಲಿಯ ವಿಚಾರ, ಅವನ ಧ್ಯೇಯಸಾಧನೆಯ ಹಟ, ಅವನ ಕ್ರಾಂತಿತತ್ವ—ಎಲ್ಲವನ್ನೂ ಮೂರ್ತಿಗೆ ತಿಳಿಸಿದ. ಆಧುನಿಕ ಕನ್ನಡ ಕವಿಗಳ ಕಾದಂಬರಿಕಾರರ ವಿಚಾರವಾಗಿ ಮೂರ್ತಿಗೆ ಆಸಕ್ತಿ ಬರುವಂತೆ ಮಾಡಿ ಅವರ ಪುಸ್ತಕಗಳನ್ನು ತಂದುಕೊಟ್ಟ.

ಮೂರ್ತಿಗೆ ಬಹಳ ಮೆಚ್ಚುಗೆಯಾದುದೆಂದರೆ ಹಾರ್ಡಿಯ ಕಾದಂಬರಿಗಳು. ಬಾಳನ್ನು ಬಾಳಿನ ರೀತಿಯನ್ನು ಒಂದಲ್ಲ ಒಂದು ರೀತಿಯಲ್ಲಿ ಮೊಟಕುಗೊಳಿಸಿ, ಕತ್ತರಿಸಿ ಹಿಗ್ಗುವ ಪಾಶವೀಶಕ್ತಿ ದೈವದ ಕ್ರೂರತೆಯನ್ನೆಲ್ಲ

ಒಂದೊಂದು ಕಾದಂಬರಿಯಲ್ಲೂ ಛಟ್ಟಿ ಇಳಿಸಿ ತೋರಿಸಿದ್ದಾನೆ ಹಾರ್ಡಿ. ಅದೇ ರೀತಿಯ ಚಿತ್ರಣ ಕಂಡುದು ಶಿವರಾಮ ಕಾರಂತರ "ಚೋಮನ ದುಡಿ" ಯಲ್ಲಿ. ವ್ಯಕ್ತಿಗೆ ಸುಖವೆಂಬುದು ಮೂರ್ತಿಗೆ ಮನವರಿಕೆಯಾಗುತ್ತಾ ಬಂತು. ಅದರ ಜತೆಗೇ ಶಂಕರುವಿನ ಮತ್ತು ಅವನ ಮೆಚ್ಚಿನ ಕವಿ ಷೆಲ್ಲಿಯ ಬೋಧನೆಗಳಿಂದ ತತ್ವಗಳಿಂದ ಹೃದಯದಲ್ಲೊಂದು ಹಟವೂ ಮೂಡಿತು.

"I fall on the thorns of life
I bleed"
[ಜೀವನದ ಮುಳ್ಳ ಮೇಲ್ಬಿದ್ದು ಕಾರಿದೆ ರಕ್ತ]

ಎಂದ ಕವಿಯ ಕ್ರಾಂತಿಕಾರೀ ಆದರ್ಶಕ್ಕೆ ಅಲೆದಾಟ ಮೂರ್ತಿಯ ನಾಡಿ ನಾಡಿಯಲ್ಲಿ ಹೊಸ ರಕ್ತ ತಂದಿತು. ವ್ಯಕ್ತಿಗೊಂದು ಹಿರಿಯ ಧ್ಯೇಯ ಬೇಕು. ಅದನ್ನು ಸಾಧಿಸಲು ಅವನು ತನ್ನ ಜೀವನವನ್ನೇ ಮುಡಿಪಾಗಿಡ ಬೇಕು. ಆ ಧ್ಯೇಯಸಾಧನೆಯಲ್ಲಿ ಅವನಿಗೆ ಹೆಜ್ಜೆಹೆಜ್ಜೆಗೂ ಕಷ್ಟ, ತೊಂದರೆ, ಅಡ್ಡಿ, ಆತಂಕಗಳು ತೊಡರಿಕೊಳ್ಳುತ್ತವೆ. ಆದರೆ ವ್ಯಕ್ತಿ ಧ್ಯೇಯವನ್ನು ಮರೆ ಯದೆ ಮುನ್ನಡೆಯಬೇಕು. ಸೋತರೂ ಪರವಾಗಿಲ್ಲ.

"Low aim, and not failure, is crime."
[ಸೋಲಲ್ಲ ಅಪರಾಧ—ಕೀಳು ಧ್ಯೇಯವೇ ಅಪರಾಧ]

ಎಂಬ ಮಾತನ್ನು ಹಿಡಿದು ಮುನ್ನಡೆಯಬೇಕೆಂದು ಶಂಕರು ಒಂದೇ ಸಮನೆ ಹೇಳುತ್ತಿದ್ದ. ಒಂದು ದಿನ ಮೂರ್ತಿ ಕೇಳಿದ ಶಂಕರನನ್ನು: "ಶಂಕರು ನೀವೇಕೆ ಕೆಲಸಬಿಟ್ಟು ಹೀಗಿದ್ದೀರಿ?" ಶಂಕರು ಮಂಟಪದ ಮುಂದಿನ ಮೆಟ್ಟಲ ಮೇಲೆ ಮಲಗಿ ಆಕಾಶವನ್ನೇ ದಿಟ್ಟಿಸಿ ನೋಡುತ್ತಿದ್ದವನು ಹಾಗೆಯೇ "ಹೇಗಿ ದ್ದೀನಿ?" ಎಂದ. ಕೂದಲೆಲ್ಲಾ ಅಸ್ತವ್ಯಸ್ತ. ಬೆಳೆದ ಗಡ್ಡ, ಗುಳಿಬಿದ್ದ ಕಣ್ಣು ಗಳು. ಆದರೂ ಮುಖದಲ್ಲೊಂದು ತೇಜ, ವರ್ಚಸ್ಸು.

"ಹೇಗಿದ್ದೀರಿ ಅಂದರೆ–ಅಂದರೆ—" ಮೂರ್ತಿಗೆ ಮುಂದೆ ಹೇಳಲು ತೋಚಲಿಲ್ಲ.

"ಅಂದರೆ—ಬೇವಾರ್ಸಿಯ ಹಾಗೆ ಬೀದಿಬೀದಿ ಅಲೆದುಕೊಂಡು. ಜನ ರೆಲ್ಲರೂ ಅನ್ನುವ ಮಾತು ಅದೇ. ಆದರೆ ಒಬ್ಬರಾದರೂ ನನ್ನ ಆಂತರಿಕ ಜೀವನ ತಿಳಿದಿರುವರೇನು?"

ಶಂಕರು ಮಾತು ನಿಲ್ಲಿಸಿದ. ಮುಳುಗುತ್ತಿದ್ದ ಸೂರ್ಯನ ಕಿರಣ ಕಣ್ಣಿನ ಮೇಲೆ ಬಿದ್ದು ಹೊಳೆಯಿತು. ಮೂರ್ತಿಗೆ ಆ ಕಣ್ಣಿನಲ್ಲೊಂದು ಅಪೂರ್ವ ಕಾಂತಿ ಕಂಡಿತು. ಶಂಕರು ಹಾಗೆಯೇ ಎದ್ದು ಕುಳಿತವನೇ ನಿಟ್ಟುಸಿರಿಟ್ಟು ಮಾತನಾಡಲಾರಂಭಿಸಿದ.

"ಮೂರ್ತಿ, ನೀನಿನ್ನೂ ಚಿಕ್ಕವನು. ಅನುಭವ ಸಾಲದು, ಆದರೆ ನಾ ಹೇಳುವುದು ನಿನಗೆ ಅರ್ಥವಾಗಬಹುದು. ಪ್ರಪಂಚವೆಲ್ಲಾ ನನ್ನನ್ನು ಅಪಾರ್ಥ ಮಾಡಿಕೊಂಡಿದೆ. ನನ್ನ ಅಂತರ್ವಾಣಿಯ ಇಚ್ಛೆಯಂತೆ, ಆಣತಿಯಂತೆ ನಾನು ನಡೆಯಕೂಡದಂತೆ. ನನಗೆ ಹಿತ ಬಯಸುವವರು ಲಕ್ಷವಂದಿ. ಆದರೆ ಆ ಲಕ್ಷವುಂದಿ ಹೇಳಿದಂತೆ ನಾನು ನಡೆಯಲಾದೀತೇ? ನನ್ನ ವಿಚಾರವಾಗಿ ನನ್ನ ನಾಳಿನ ಬಾಳಿನ ವಿಷಯವಾಗಿ ನನಗೆ ಗೊತ್ತಿರುವಷ್ಟು ಅವರಿಗೆ ಗೊತ್ತೇನು? ನನ್ನ ಶಾಂತಿಗೆ ನನ್ನ ಸುಖಕ್ಕೇನು ಅವಶ್ಯವೆನ್ನುವುದನ್ನು ನಿರ್ಧರಿಸುವವರು ನಾನೋ, ಅವರೋ? ಒಂದು ಹೆಜ್ಜೆ ಹಿಂದಿಡಬೇಕೋ, ಮುಂದಿಡಬೇಕೋ ಎಂದರೆ ಹೆಜ್ಜೆ ಹೀಗಿಡು, ಹಾಗಿಡು ಎಂದು ಹೇಳಲು ಬರುತ್ತದೆ ಸಮಾಜ. ಆದರೆ ಹೀಗಿಟ್ಟರೆ ನಾನು ನಿಲ್ಲಲು ಸಾಧ್ಯ. ಇಲ್ಲದಿದ್ದರೆ ಆಯ ತಪ್ಪಿ ಬಿದ್ದೇನೆಂಬುದು ನನಗೆ ಗೊತ್ತು. ಆದ್ದರಿಂದ ನಾನು ಜೀವನದಲ್ಲಿ ನಡೆಯುವ ಹಾದಿ ನಾನು ನನಗಾಗಿ ಮಾಡಿಕೊಂಡ ಹಾದಿ. ಉಳಿದವರು ತೋರಿದ ಹಾದಿಯಲ್ಲ. ಹೆನ್ಲಿ ಎಂಬ ಆಂಗ್ಲ ಕವಿ ಹೇಳಿದ್ದಾನೆ.

"I am the master of my fate
I am the captain of my soul"

"ನನ್ನ ಜೀವನಾವೆಯ ಪ್ರಯಾಣದಲ್ಲಿ ಹುಟ್ಟುಹಾಕುವವನೂ ನಾನೇ. ಕೆಟ್ಟರೆ ಕೆಡುವವನೂ ನಾನೇ. ಅದಕ್ಕೆ ಉಳಿದವರ ಸಹಾಯ ನಿರುಪಯುಕ್ತ. ಎಷ್ಟಿದ್ದರೂ ನಮ್ಮ ಬಾಳನ್ನುಳಿಸುವವರೂ ನಾವೇ, ಅಳಿಸುವವರೂ ನಾವೇ! ಇಷ್ಟೆಲ್ಲ ಏಕೆ ಹೇಳಿದೆನೆಂದರೆ ಜನರು ನನ್ನ ವಿಚಾರವಾಗಿ ನೂರು ಮಾತು ಹೇಳಿಕೊಳ್ಳುತ್ತಾರೆ. ನನ್ನನ್ನು ಹುಚ್ಚನೆಂದು ಕರೆಯುವವರೂ ಇದ್ದಾರೆ. ಹೊರಗಿನ ಜನರೇ ಏಕೆ—ನಮ್ಮ ಮನೆಯಲ್ಲಿ ನಮ್ಮ ಅಣ್ಣ, ಅತ್ತಿಗೆ ಕೂಡ ನನಗೆ ಹುಚ್ಚು ಹಿಡಿದಿದೆಯೆಂದು ಮಾತಾಡಿಕೊಳ್ಳುತ್ತಿದ್ದರು.

"ನಮ್ಮ ಮನೆತನವೇನೋ ದೊಡ್ಡದೇ. ಸಾಕಾದಷ್ಟು ತಿನ್ನಲು ಉಡಲು ಇತ್ತು. ಈಗಲೂ ಬೇಕಾದಷ್ಟು ಆಸ್ತಿ ಇದೆ. ನಾನೂ ಎಳೆತನವನ್ನೆಲ್ಲಾ ಏನೂ ದುಃಖ ತಿಳಿಯದೆಯೇ ಕಳೆದೆ. ಆದರೆ ನಾನು ಕಾಲೇಜು ಸೇರಿದಾಗ, ಕೊಂಚ ಕೊಂಚವಾಗಿ ಮನಸ್ಸು ಬದಲಾಗುತ್ತಾ ಬಂತು. ನನ್ನ ಉಪಾಧ್ಯಾಯರೊಬ್ಬರು ಒಂದು ತತ್ವಕ್ಕಾಗಿ, ತಾವು ಸಾಧಿಸಬೇಕೆಂದಿದ್ದ ಸತ್ಯಕ್ಕಾಗಿ ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟುದನ್ನು ನಾನೇ ನೋಡಿದೆ. ನನಗವರು ಅತ್ಯಂತ ಮೆಚ್ಚಿನ ಅಧ್ಯಾಪಕರಾಗಿದ್ದರು. ಅವರೇ ನನಗೆ ಕವಿ ಷೆಲ್ಲಿಯನ್ನೋದೆಂದು ಹೇಳಿದರು. ನಾನು ಷೆಲ್ಲಿಯ ಜೀವನ ಚರಿತ್ರೆ, ಅವನ ಗೀತಗಳನ್ನೆಲ್ಲಾ ಓದಿದೆ. ಅವನನ್ನು ಜನ ಅಪಾರ್ಥಮಾಡಿಕೊಂಡಿರುವ ಬಗೆ, ಅವನು ತಾನು ಸತ್ಯವೆಂದು ಬಗೆದುದಕ್ಕಾಗಿ ತನ್ನ ಸುಖವನ್ನು ತ್ಯಾಗಮಾಡಿ, ಜೀವವನ್ನೇ ಮುಡಿಪಾಗಿಟ್ಟು ಸಮಾಜದ ಶಕ್ತಿಗಳ ವಿರುದ್ಧ ಹೋರಾಡಿದುದು. ಅದಕ್ಕಾಗಿ ಅವನು ಪಟ್ಟಪಾಡು, ಇವೆಲ್ಲಾ ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮವನ್ನುಂಟುಮಾಡಿದುವು. ಅದೇ ಕಾಲದಲ್ಲಿ ಮೈಸೂರಿನಲ್ಲೊಂದು ಮುಷ್ಕರವಾಯಿತು. ರೈಲ್ವೆ ಕೆಲಸಗಾರರು ತಾವು ಸಂಘ ಕಟ್ಟಿಕೊಳ್ಳಲು ಅನುಮತಿ ಕೇಳಲು ಸರ್ಕಾರ ಕೊಡದಿರಲು ಮುಷ್ಕರ ಹೂಡಿದರು. ಅದರ ನಾಯಕ ನನ್ನ ಸಹಪಾಠಿಯೊಬ್ಬ. ಅವನೂ ಸಾಮ್ಯವಾದಿ; ನನಗೆ ಗೊತ್ತೇ ಇರಲಿಲ್ಲ. ಆ ಮುಷ್ಕರ ಆರಂಭವಾದೊಡನೆ ಕಾಲೇಜಿಗೆ ಬರುವುದು ನಿಲ್ಲಿಸಿಬಿಟ್ಟ. ಒಂದು ದಿನ ಮೆರವಣಿಗೆ ನಡೆಸಿ ಸಭೆ ಮಾಡಿದಾಗ, ಅವನು ಮಾತಾಡಿದಾಗಲೇ ನಮಗೆ ಅವನು ಅದರ ನಾಯಕನೆಂದು ತಿಳಿದುದು. ಸರ್ಕಾರ ಅವರ ಮೇಲೆ ಗುಂಡು ಹಾರಿಸಿತು. ನನ್ನ ಸಹಪಾಠಿಗೆ ಏಟು ಬಿದ್ದು ಒಂದು ವಾರ ಆಸ್ಪತ್ರೆಯಲ್ಲಿ ನರಳಿದ. ಇನ್ನೂ ಅವನಿಗೆ ಆಗ ಚಿಕ್ಕ ವಯಸ್ಸು. ಆದರೆ ಅವನ ದೃಢತೆ ಕಂಡು ನನಗೆ ಬಹು ಆಶ್ಚರ್ಯವಾಯಿತು. ಆಸ್ಪತ್ರೆಯಲ್ಲಿ ಅವನನ್ನು ನೋಡಲು ಹೋದಾಗ ಅವನೆಂದುದೇನು ಗೊತ್ತೇ. ನನ್ನ ಧ್ಯೇಯಸಾಧನೆಯಾದರೆ ನಾನು ಸತ್ತರೂ ಪರವಾಗಿಲ್ಲ, ಎಂದ. ಅಂದಿನಿಂದ ನಾನೂ ಒಬ್ಬ ಧ್ಯೇಯವಾದಿ. ಯಾರೇನಾದರೂ ಅನ್ನಲಿ, ಏನಾದರೂ ಮಾಡಲಿ, ನಾನು ಯಾವುದು ಸರಿಯೆಂದು ತಿಳಿದಿರುತ್ತೇನೋ, ನನಗೆ ಯಾವುದು ಸತ್ಯವೆಂದು ತೋರುತ್ತದೋ ಅದನ್ನೇ ನಾನು ಅನುಸರಿಸುವುದು."

ಮಾತಾಡುತ್ತಾ ಆಡುತ್ತಾ ಶಂಕರು ಮೂರ್ತಿಯನ್ನು ಭದ್ರವಾಗಿ ಹಿಡಿದುಕೊಂಡ. ಮೂರ್ತಿ ಅಲುಗಾಡದೆ ಒಂದೇ ನೆಟ್ಟದೃಷ್ಟಿಯಿಂದ ಶಂಕರುವಿನ ಕಡೆಗೇ ನೋಡುತ್ತಿದ್ದ. ಶಂಕರು ಆವೇಗದಲ್ಲಿ ಒಂದು ನಿಮಿಷ ಹಾಗೆಯೇ ಇದ್ದವನು ಕೈ ಸಡಿಲಮಾಡಿದ.

"ಕಾಲೇಜು ಬಿಟ್ಟೆ. ಮನೆಯಲ್ಲಿ ಬಲವಂತಮಾಡಿದರು ಕೆಲಸಕ್ಕೆ ಸೇರಿಕೋ ಎಂದು. ನನಗಿಷ್ಟವಿರಲಿಲ್ಲ. ಆದರೆ ಮನೆಯವರೆಲ್ಲಾ ಗೋಳು ಗುಟ್ಟಿದರು. ಪೋಲಿ ಅಲೆದರೆ ನಮಗೆ ಕೆಟ್ಟ ಹೆಸರೆಂದು! ಯಾವುದೋ ಒಂದು ದುರ್ಬಲ ನಿಮಿಷದಲ್ಲಿ ಕೆಲಸಕ್ಕೆ ಸೇರಿದೆ. ಇಷ್ಟವಿಲ್ಲದ ಕೆಲಸ ಎಷ್ಟು ದಿನ ತಾನೇ ಆದೀತು. ನಾನು ಯಾವಾಗಲೂ ಖಾದಿಯನ್ನೇ ಹಾಕುತ್ತಿದ್ದೆ. ತಲೆಗೆ ಟೋಪಿ ಕೂಡ ಹಾಕಿಕೊಳ್ಳುತ್ತಿದ್ದೆ. ನಮ್ಮ ಮೇಲಧಿಕಾರಿ ಅದನ್ನು ಹಾಕಕೂಡದೆಂದ. ನಾನವನ ಮಾತು ಕೇಳಲು ಸಿದ್ಧನಾಗಿರಲಿಲ್ಲ. ಸರಿ, ಹಾಗೆ ಹೀಗೆ ಎಂದು ಗರ್ಜಿಸಿದ. ಈ ಅಧಿಕಾರಿಗಳಿಗೆ ತಮ್ಮಂತೆಯೇ ಉಳಿದವರಿಗೂ ಆತ್ಮಗೌರವ ಸೊನ್ನೆಯೆಂಬ ಒಂದು ತಪ್ಪು ಅಭಿಪ್ರಾಯವಿದೆ. ನಾನು ಅವನಿಗೆ ದಬಾಯಿಸಿದೆ. ಅದಕ್ಕೆ ಆತ ಹೀನವಾಗಿ ಪೋಲೀಸ್ ಅಧಿಕಾರಿಗಳಿಗೆ ತಿಳಿಸಿ ನನ್ನನ್ನು ದಸ್ತಗಿರಿ ಮಾಡಿಸಿದ. ಅವನನ್ನು ನಾನು ಹೊಡೆಯಲು ಯತ್ನಿಸಿದೆನೆಂದು ಆಪಾದನೆ! ಎಷ್ಟಿದ್ದರೂ ಅವನು ಅಧಿಕಾರಿ. ನನಗೆ ಶಿಕ್ಷೆಯಾಯಿತು.

"ಜೈಲಿನಿಂದ ಹೊರಬಂದ ಮೇಲೆ ಒಬ್ಬ ಶೆಟ್ಟಿಯ ಅಂಗಡಿಯಲ್ಲಿ ಲೆಕ್ಕ ಬರೆಯುವ ಕೆಲಸಕ್ಕಿದ್ದೆ. ಆದರೆ ಅವನ ಮೋಸಗಾರಿಕೆ ನನಗೆ ಸಹಿಸಲಾಗಲಿಲ್ಲ. ಅದನ್ನು ಬಿಟ್ಟುಬಂದೆ. ನಮ್ಮಣ್ಣ ಬಹು ಕಷ್ಟದಿಂದ ರೈಲ್ವೆಯಲ್ಲೊಂದು ಕೆಲಸ ಕೊಡಿಸಿದರು. ಅದೇನೋ ನನಗೆ ಅದೂ ಸರಿಹೋಗಲಿಲ್ಲ. ಕೆಲವೇ ದಿನಗಳಲ್ಲಿ ಒಂದು ವಿಚಾರ ತಿಳಿಯಿತು. ಅಲ್ಲಿ ಲಂಚದ ಇಲಾಖೆಯೇ ಒಂದಿದೆ. ಅಲ್ಲಿ ಲಂಚ ಸಿಕ್ಕಿದುದರ ಲೆಕ್ಕವನ್ನಿಡಲು ಇಬ್ಬರು ಗುಮಾಸ್ತೆಯರೂ ಇದ್ದಾರೆ. ಅಧಿಕಾರಿಗಳಿಂದ ಹಿಡಿದು ನೌಕರರೆಲ್ಲ ಆ ಲಂಚವನ್ನು ಹಂಚಿಕೊಳ್ಳಬೇಕು. ಇದು ನನಗೆ ತಿಳಿದೊಡನೆಯೇ ಬಹಳ ಬೇಸರವಾಗಿ ಟ್ರಾಫಿಕ್ ಮ್ಯಾನೇಜರರಿಗೊಂದು ಪತ್ರ ಬರೆದೆ. ಅದಕ್ಕೆ ಅವರು ನನ್ನನ್ನು ಕರೆಸಿ 'ನೀನಿನ್ನೂ ಚಿಕ್ಕವನು, ನಿನಗೇನೂ ತಿಳಿಯದು, ತೆಪ್ಪಗಿರು' ಎಂದು ಬೋಧಿಸಿದರು. ಇವರ ಮಧ್ಯೆ

ಇರಲಾಗದೆಂದು ಆ ಕೆಲಸವನ್ನು ಬಿಟ್ಟುಬಂದೆ. ಈಗ ಬೇವಾರ್ಸಿಯಾಗಿದ್ದೇನೆ· ಯಾರ ಹಂಗೂ ಇಲ್ಲ. ನನ್ನ ಇಚ್ಛೆಯ ವಿರುದ್ಧ ನಾನೇನೂ ಮಾಡಬೇಕಾಗಿಲ್ಲ. ಪ್ರಪಂಚವೇನೋ ನನ್ನನ್ನು ಅಪ್ರಯೋಜಕ, ಕೆಟ್ಟುಹೋದೆನೆನ್ನಬಹುದು. ಒಂದಾದಮೇಲೊಂದು ಕೆಲಸ ಬಿಟ್ಟಾಗ, ಪತಂಗದ ಮನಸ್ಸು, ಸ್ಥಿರವಾಗಿ ನಿಲ್ಲ ಲಾರನೆಂದರು ಜನ. ಆದರೆ ಹಾಗಾಗಲು ನನ್ನ ಮನಸ್ಸಿನ ಸ್ಥೈರ್ಯವೇ ಕಾರಣವೆಂದು ಅವರಿಗೆ ತಿಳಿಯದು. ಹೋಗಲಿ, ಬಿಡು."

ಮೂರ್ತಿಗೆ ಶಂಕರುವಿನಲ್ಲಿ ಅಪಾರ ಗೌರವ ಮೂಡಿತು. ತಾನೂ ಹಾಗೆಯೇ ಧ್ಯೇಯಕ್ಕಾಗಿ ದುಡಿಯಬೇಕು. ಮಡಿದರೂ ಪರವಾಗಿಲ್ಲವೆನಿಸಿತು. ಮನಸ್ಸಿನಲ್ಲಿ ಸಂಕಲ್ಪಮಾಡಿಕೊಂಡ. ಹಾಗೆಯೇ ಸರೋಜೆಯ ನೆನಪು ಬಂದು ಅವಳಿಗಾಗಿ ಅತ್ತಾಗ ಶಂಕರು ಸಮಾಧಾನ ಮಾಡಿದ. ಕಾರಂತರ ಕಿಸಾ ಗೋತಮಿ ಗೀತನಾಟಕದ ಕತೆ ಹೇಳಿ,

"ಯಾರೊ ಕೊಟ್ಟರು ಅದನು, ಯಾರೊ ಕೊಂಡರು ಅದನು.
ಅದಕೇಕೆ ಆ ಹಿಗ್ಗು, ಈಗೇಕೆ ಈ ಕುಗ್ಗು!"

ಎಂದು ಹೇಳಿ ಸಮಾಧಾನಗೊಳಿಸಿದ. ಅದೂ ಮೂರ್ತಿಗೆ ನೆನಪಾಯಿತು. ಇಂತಹ ವ್ಯಕ್ತಿಯನ್ನು ಜಗತ್ತು ಹುಚ್ಚ, ಅಪ್ರಯೋಜಕನೆನ್ನುವುದಲ್ಲಾ ಎಂದು ಮನಸ್ಸು ಕುದಿಯಹತ್ತಿತು. ಮನಸ್ಸಿನಲ್ಲಿಯೇ ಮೂರ್ತಿ ಶಂಕರು ವನ್ನೂ ತನ್ನ ಚಿಕ್ಕಪ್ಪನನ್ನೂ ತೂಗಿ ಹೋಲಿಸಲಾರಂಭಿಸಿದ. ಶಂಕರುವೂ ಜೀವನದಲ್ಲಿ ಕಷ್ಟ ಅನುಭವಿಸಿದವನೇ. ಸೂಕ್ಷ್ಮ ಹೃದಯಿ (Sensitive Soul)- ಮನಸ್ಸು ಬೆಳ್ಳಿಯಂತಹುದು. ಜೀವನದಲ್ಲಿ ಎಷ್ಟೇ ಕಷ್ಟ ಅನುಭವಿ ಸಿದರೂ ಧ್ಯೇಯಸಾಧಿಸುವ ಹಟ, ಸ್ಥೈರ್ಯವಿದೆ. ಜನ ಅವನನ್ನು ಅಪ್ರ ಯೋಜಕನೆನ್ನುತ್ತಾರೆ. ತನ್ನ ಚಿಕ್ಕಪ್ಪ, ನಾಣಿ ಚಿಕ್ಕಪ್ಪ, ಒಂದೇ ಒಂದು ನಿರಾಸೆಯಾಗಿ ಎಲ್ಲವನ್ನೂ ಗಾಳಿಗೆಸೆದು ಧ್ಯೇಯರಹಿತ ಮರವೆಯ ಜೀವನ, ಪಶು ಜೀವನ ನಡೆಸುತ್ತಿರುವರೆನ್ನಿಸಿತು. ಮತ್ತೆ ಅವನಿಗೆ ಚಿಕ್ಕಪ್ಪನಲ್ಲಿದ್ದ ವಿಶ್ವಾಸ, ಒಲವು ತಗ್ಗುತ್ತ ಬಂದಿತು.

ಮೂರ್ತಿಗೀಗ ೧೮ ವರ್ಷ. ಹೈಸ್ಕೂಲಿನ ಕೊನೆಯ ತರಗತಿ. ಚೆನ್ನಾಗಿ ಓದುತ್ತಿದ್ದ, ಚೆನ್ನಾಗಿ ಕಸರತ್ತೂ ನಡೆಸುತ್ತಿದ್ದ. ದೇಹ ಒಳ್ಳೆಯ

ಪಠಾಣನಂತೆ ಬೆಳೆದಿತ್ತು. ಬುದ್ಧಿಯ ಬೆಳೆವಣಿಗೆಯೂ ಏನೂ ಕಡಿಮೆಯಾಗಿರಲಿಲ್ಲ. ಶಂಕರುವಿನ ಸಹವಾಸದಿಂದ ಇನ್ನೂ ಹೈಸ್ಕೂಲಿನಲ್ಲಿಯೇ ಇದ್ದರೂ ಕೂಡ, ಹೈಸ್ಕೂಲು ಹುಡುಗರು ಕೇಳರಿಯದ ಸಾಹಿತಿಗಳ ಪುಸ್ತಕಗಳನ್ನು ಓದುವುದನ್ನು ಕಲಿತಿದ್ದ, ಓದುತ್ತಿದ್ದ. ಯಾವಾಗಲೂ ಶಂಕರುವಿನ ಧ್ಯೇಯವನ್ನೇ ಮನಸ್ಸಿನಲ್ಲಿಟ್ಟು ಕಾರ್ಯ ನಡೆಸುತ್ತಿದ್ದ. ತನಗೆ ಯಾವುದಾದರೂ ವಿಷಯ ಸರಿಯಲ್ಲವೆಂದು ತೋರಿದರೆ ಅದನ್ನೇನೇ ಆಗಲಿ ನಡೆಸುತ್ತಿರಲಿಲ್ಲ. ಅಂತಹುದೊಂದು ವಿಷಯ ನಡೆದು ಅವನಿಗೂ ಅವನ ಶಾಲೆಯ ಮುಖ್ಯೋಪಾಧ್ಯಾಯರಿಗೂ ಮನಸ್ತಾಪವೊದಗಿತು.

ಅದೊಂದು ದಿನ ಬೆಳಗಿನ ಶಾಲೆಯಿತ್ತು. ಮೂರ್ತಿ ಶಾಲೆಗೆ ಹೋದ. ತರಗತಿಯಲ್ಲಿ ಇನ್ನು ಯಾರೂ ಬಂದಿರಲಿಲ್ಲ. ತನ್ನಷ್ಟಕ್ಕೆ ತಾನು ಎರಡನೆಯ ಬೆಂಚಿನಲ್ಲಿ ಕುಳಿತ. ಅವನ ಕ್ಲಾಸಿನಲ್ಲಿ ಮೂವರು ಹುಡುಗಿಯರೂ ಇದ್ದರು. ಅವರಲ್ಲೊಬ್ಬಳು ಹುಡುಗಿ ದಿನವೂ ತನ್ನ ಕಡೆಗೇ ನೋಡುತ್ತಿದ್ದುದು ಮೂರ್ತಿಯ ಕಣ್ಣಿಗೆ ಬಿದ್ದಿತು. ಹಾಗೆ ನೋಡದಿರಲಿ ಎಂದು ಅವರ ಬೆಂಚಿನ ಹಿಂದೆಯೇ ಕುಳಿತುಕೊಳ್ಳುತ್ತಿದ್ದ. ಇವನು ಕುಳಿತ ಕೊಂಚ ಹೊತ್ತಿಗೇ ಆ ಹುಡುಗಿಯರೂ ಬಂದರು. ಮುಂದಿನ ಬೆಂಚಿನಲ್ಲಿ ಕುಳಿತ ಹುಡುಗಿ ಇವನ ಕಡೆಗೇ ನೋಡಲು ಯತ್ನಿಸಿದಳು. ಮೂರ್ತಿಗೆ ರೇಗಿತು. ಅಲ್ಲಿಂದೆದ್ದು ಹೊರಡಬೇಕೆಂದುಕೊಂಡ. ಆದರೆ ಅವರಿಗಾಗಿ ತಾನೇಕೆ ಏಳಬೇಕೆಂದುಕೊಂಡು ಹಾಗೆಯೇ ಕುಳಿತ. ಆ ಹುಡುಗಿ ಚೆಲ್ಲಾಟದಲ್ಲಿ ಜಡೆಯನ್ನು ಇವನ ಮೇಲೆಸೆದಳು. ಮೂರ್ತಿ ಅದನ್ನು ಆ ಕಡೆ ಒಗೆದ ರಭಸಕ್ಕೆ ಅವಳಿಗೆ ನೋವಾಯಿತು. ಜಡೆಗೆ ಕಟ್ಟಿದ್ದ ಟೇಪು ಕಿತ್ತು ಜಡೆ ಬಿಚ್ಚಿಹೋಯಿತು. ಹುಡುಗರಲ್ಲಿ ಗುಲ್ಲೋಗುಲ್ಲು! ಇದು ಮುಖ್ಯಾಧಿಕಾರಿಗಳವರೆಗೂ ಹೋಗಲು ಅವರು ಮೂರ್ತಿಯನ್ನೂ ಆ ಹುಡುಗಿಯನ್ನೂ ಕರೆಸಿದರು. ಮೂರ್ತಿ ಕ್ಷಮೆಬೇಡಬೇಕೆಂದು ಅವರ ಕಟ್ಟಾಜ್ಞೆ. ಅವನು ತಾನೇನೂ ತಪ್ಪುಮಾಡದುದರಿಂದ ಕ್ಷಮೆಬೇಡುವುದಿಲ್ಲವೆಂದು ಹಟ ಹಿಡಿದ. ಹಿಡಿದ ಪಟ್ಟು ಬಿಡಲೇ ಇಲ್ಲ. ಕೊನೆಗೆ ಮುಖ್ಯಾಧಿಕಾರಿಗಳು ಇನ್ನು ಮುಂದೆ ಹೀಗೆಮಾಡಿದರೆ ಸ್ಕೂಲಿನಿಂದ ಓಡಿಸಿಬಿಡುವುದಾಗಿ ಬೆದರಿಕೆ ಹಾಕಿ ಕಳುಹಿಸಿಕೊಟ್ಟರು. ಇದರ ಫಲವಾಗಿ ಮೂರ್ತಿಯ ಮನಸ್ಸು ಮತ್ತೂ ಕೆಟ್ಟಿತು. ಸರೋಜೆ ತನಗೆ ಮೋಸಮಾಡಿದುದು,

ಈ ಹುಡುಗಿ ತನ್ನ ಒಂದು ನಿಮಿಷದ ಚೆಲ್ಲಾಟಕ್ಕಾಗಿ ತನ್ನ ಗೌರವಕ್ಕೇ ಕೊಡಲಿಯಿಕ್ಕಿದುದು, ಇದರಿಂದ ಅವನಿಗೆ ಹೆಂಗಸರಲ್ಲಿದ್ದ ಗೌರವ ಕುಂದಿತು. ತನ್ನ ಆದರ್ಶದ ಜಗತ್ತಿನಲ್ಲಿ ಸೃಜಿಸಿಕೊಂಡು ಪೂಜಿಸುತ್ತಿದ್ದ ತಾಯಿಗೂ ಈ ಜಗತ್ತಿನ ಮಾಯೆಯ ಮೋಹಿನಿಯರಿಗೂ ಹೋಲಿಸಿ ಇವರೆಲ್ಲರನ್ನೂ ತಾತ್ಸಾರದಿಂದ ಕಾಣಲಾರಂಭಿಸಿದ.

ದೊಡ್ಡ ಪರೀಕ್ಷೆ ಇನ್ನು ಕೆಲವೇ ದಿನವಿತ್ತು. ಮೂರ್ತಿ ಎಂದಿನಂತೆ ಸಂಜೆ ಗರಡಿಯಿಂದ ಶಂಕರುವನ್ನು ಕಾಣಲು ಕೆರೆಯ ಬಳಿಗೆ ಬಂದ. ಆದರೆ ಶಂಕರು ದಿನವೂ ಕುಳಿತುಕೊಳ್ಳುವ ಜಾಗ ಖಾಲಿ! ಕಾದು ಕಾದು ಬೇಸರ ವಾಯಿತು. ಎಷ್ಟು ಹೊತ್ತಾದರೂ ಶಂಕರು ಕಾಣಲೇ ಇಲ್ಲ, ಬರಲೇ ಇಲ್ಲ. ಮೂರ್ತಿಗೆ ಮನಸ್ಸು ಕುಗ್ಗಿತು. ಹಿಂದೊಮ್ಮೆ ಸರುವಿಗಾಗಿ ಹೀಗೆಯೇ ಕಾದು ಕುಳಿತು ಕುಗ್ಗಿದ ಮನಸ್ಸಿನಿಂದ ಮನೆಗೆ ಕಾಲೆಳೆದುಕೊಂಡು ನಡೆದಿದ್ದ. ಇಂದು ಶಂಕರುಗಾಗಿಯೂ ಹಾಗೆಯೇ ದುಗುಡ ಮೂಡಿತು. ಮನೆಗೆ ಹಿಂದಿರುಗಿ ಹೊಸಲಿನಿಂದೊಳಕ್ಕೆ ಕಾಲಿಟ್ಟಂತೆ ಅಂದಿನಂತೆಯೇ ಚಿಕ್ಕಪ್ಪ ಕೂತಿರುವುದು ಕಾಣಿಸಿತು.

" ಮೂರ್ತಿ, ನಿನಗೊಂದು ಕಾಗದ ಬಂದಿದೆ, ತೆಗೆದುಕೊ "

ಮೂರ್ತಿ ನಡುಗುವ ಕೈಗಳಿಂದ ಕಾಗದವನ್ನೆತ್ತಿಕೊಂಡು ಒಡೆದು ಓದಿದ

" ಮೂರ್ತಿ,

ನಿನ್ನನ್ನು ಬಿಟ್ಟು ಹೊರಡಬೇಕಾಗಿ ಬಂದಿದೆ ಹೋಗುತ್ತಿದೇನೆ. ನಾನು ನಿನಗೆ ಹೇಳುತ್ತಿದ್ದೆ. ನನ್ನ ಆತ್ಮದ ಕರೆಯಂತೆ ನಾನು ನಡೆಯುವವನು ಎಂದು. ಈಗ ಹಾಗೆಯೇ ಹೋಗುತ್ತಿದ್ದೇನೆ. ನಿನ್ನಲ್ಲಿ ನನ್ನ ವಿಶ್ವಾಸವಿತ್ತು. ನನ್ನನ್ನು ನಿಜವಾಗಿ ತಿಳಿದುಕೊಂಡ ವ್ಯಕ್ತಿ ಎಷ್ಟು ಎಳೆಯನಾದರೂ ಒಬ್ಬನಾದರೂ ಇರುವನಲ್ಲಾ, ಅದೇ ನನಗೆ ತೃಪ್ತಿ. ಈ ದಿನ ಸಂಜೆ ನಿನ್ನನ್ನು ಕೆರೆಯಂಚಿನಲ್ಲಿ ನೋಡಬೇಕಾಗಿತ್ತು. ಆದರೆ ಬೆಳಗ್ಗೆ ಏನೋ ಅನ್ನಿಸಿ, ವೈಯಕ್ತಿಕ ಸತ್ಯಾಗ್ರಹ ನಡೆಯುತ್ತಿರುವಲ್ಲಿಗೆ ಹೋಗಿ ನಾನೂ ಸೇರಬೇಕು, ನಡೆಸಬೇಕು ಎನಿಸಿ ಈಗ ಹೊರಡುತ್ತಿದೇನೆ. ನಾನು ಹೋದೆನೆಂದು ನೀನು ದುಃಖಿಸಬೇಡ. ನಿನಗೆ ನಾನು ಹೇಳಿದುದನ್ನು ಮಾತ್ರ ಮರೆಯಬೇಡ. ನಿನಗೆ ನೀನೇ ಗುರು, ನಿನಗೆ ನೀನೇ ಗೆಳೆಯ, ನಿನಗೆ ನೀನೇ ಮಿತ್ರ, ನೀನೇ ಶತ್ರು. ನಿನ್ನ ಬಾಳು

ನಿನ್ನ ಕೈಯಲ್ಲಿದೆ. ನಿನಗೆ ಯಾವುದು ಸರಿಯೆನ್ನಿಸುವುದೋ, ಸತ್ಯವೆಂದು ತೋರುವುದೋ ಅದನ್ನೇ ಮಾಡು, ಅದನ್ನೇ ನಡೆಸು. ಮತ್ತೊಬ್ಬರ ಮಾತಿಗೆ ಕಿವಿಗೊಟ್ಟರೂ ನಿನ್ನ ಮನಸ್ಸಿನ ಒರೆಗಲ್ಲಿನ ಮೇಲೆ ತಿಕ್ಕಿ ಅನಂತರ ಅದರ ಬೆಲೆ ಕಂಡುಹಿಡಿ; ಎಂದಿಗೂ ನಿನ್ನನ್ನು ನಾನು ಮರೆಯಲಾರೆ. ಎಲ್ಲರೂ ನನ್ನನ್ನು "ಹುಚ್ಚ, ಅಪ್ರಯೋಜಕ"ನೆಂದು ದೂರಿದಾಗ ನೀನೊಬ್ಬ ನನ್ನನ್ನರಿತು ವಿಶ್ವಾಸ ತೋರಿದೆ. ಆ ವಿಶ್ವಾಸ ನನ್ನ ಹೃದಯದಲ್ಲಿ ಯಾವಾಗಲೂ ಮೂಡಿರುತ್ತದೆ. ನಾವು ನಿನಗಾವ ಸಹಾಯವನ್ನೂ ಮಾಡಿಲ್ಲದಿರಬಹುದು. ನನ್ನಿಂದ ನಿನಗೇನೂ ಒಳ್ಳೆಯದಾಗಿಲ್ಲದಿರಬಹುದು; ಆದರೆ ಸಾಧ್ಯವಾದರೆ ನನ್ನನ್ನು ನೆನಪಿನಲ್ಲಿಟ್ಟುಕೊ. ನನ್ನ ಮಾತುಗಳನ್ನು ಮರೆಯಬೇಡ. ಧ್ಯೇಯ! ಆದರ್ಶ! ಸಾಧನೆ! ಈ ಆದರ್ಶ ಸಾಧನೆಯಲ್ಲಿ ಯಾವುದೇ ಆತಂಕಬಂದರೂ ತೊಡೆದು ಮುಂದೆ ನುಗ್ಗು. ಜೀವ ಕೊಟ್ಟರೂ ಪರವಾಗಿಲ್ಲ, ಚಿಂತಿಸಬೇಡ. ಜೀವಕೊಟ್ಟು ಆದರ್ಶವನ್ನುಳಿಸಿಕೊಂಡರೆ ಆಗ ಆ ಆದರ್ಶವೇ ಜೀವವಾಗುತ್ತದೆ. ಬ್ರೌನಿಂಗ್ (Browning) ಹೇಳಿದ ಮಾತನ್ನು ಯಾವಾಗಲೂ ಮರೆಯಲಾಗದು. "Low Aim and not Failure is Crime" ನಿನ್ನ ಬಾಳನ್ನು ಹದಗೊಳಿಸುವವನೂ ನೀನೇ, ಹಾಳುಮಾಡುವವನೂ ನೀನೇ, ನೀನೇ ನಿನ್ನ ಒಡೆಯ.

ನಿನ್ನವ

ಶಂಕರು"

ಮೂರ್ತಿ ರಾತ್ರಿಯೆಲ್ಲಾ ಒಂದೇ ಸಮನಾಗಿ ಯೋಚಿಸುತ್ತಿದ್ದ. ಶಂಕರು ಹೊರಟುಹೋದ. ತಾನು ಇನ್ನು ಏಕಾಕಿಯಾಗಬೇಕು. ತನಗೆ ಸಮಯದಲ್ಲಿ ಬುದ್ಧಿ ಹೇಳಿ, ಧ್ಯೇಯ ತೋರಿಕೊಟ್ಟ ಗುರುವೇ ಹೊರಟು ಹೋದನಲ್ಲಾ ಎಂದು ಬಹಳ ದುಃಖವಾಯಿತು. ರಾತ್ರಿಯೆಲ್ಲಾ ನಿದ್ರೆಯಿಲ್ಲ. ಒಂದೇ ಸಮನಾಗಿ ಕಣ್ಣಿನಿಂದ ನೀರು ಸುರಿಯುತ್ತಿತ್ತು. ಆದರೆ ಮನಸ್ಸಿನಲ್ಲಿ ಪೂರ್ಣ ದುಃಖವೇ ಇರಲಿಲ್ಲ. ಯಾವುದೋ ಒಂದು ಬಗೆಯ ಕೊರತೆ, ಆದರೆ ತುಂಬುಕೊರತೆ ಅದು; ಬರಿಯ ಅಪೂರ್ಣವೇ ಅಲ್ಲ. ಅದೂ

ಪೂರ್ಣವಾದ ಅಪೂರ್ಣತೆ. ಮುಂದೆ ತಾನೂ ಅವನಂತೆಯೇ ಧ್ಯೇಯಸಾಧನೆಗಾಗಿ ದುಡಿಯಬೇಕೆನ್ನುವ ಹಟವೂ ಹೃದಯದಲ್ಲಿ ಮನೆಮಾಡಿತು. ಆ ಹಟಕ್ಕೆ ತಾಯಿಯ ನೆನಪು ಇಂಬುಗೊಟ್ಟಿತ್ತು. ಮೂರ್ತಿಯ ಮನಸ್ಸಿನಲ್ಲಿ ಆ ಹುಚ್ಚನ ಮಾತುಗಳು, "ಪ್ರಪಂಚದಲ್ಲಿ ಯಾವುದೂ ಸರಿಯಿಲ್ಲ" ಧಿಗ್ಗನೆದ್ದುವು. ಒಡನೆಯೇ ನಾಣಿ ಚಿಕ್ಕಪ್ಪನ ಮಾತು, "ನಾನು ಪ್ರಪಂಚವನ್ನು ತಾತ್ಸಾರದಿಂದ ಕಾಣುತ್ತೇನೆ"! ಆದರೆ ಎಂತಹ ಮುತ್ತಿನಂತಹ ಮಾತು ಶಂಕರುವಿನದು.—

"ಸಮಾಜ ಎಡರು ತೊಡರು ಒಡ್ಡಿದರೂ ನಿನ್ನ ಧ್ಯೇಯ ಮರೆಯಬೇಡ. ಜೀವತೆತ್ತರೂ ಸರಿ, ಆ ಜೀವವೇ ಆದರ್ಶಜೀವವಾದೀತು".

ರಾತ್ರಿಯೆಲ್ಲಾ ಶಂಕುರುವಿನ ಮಾತೇ ಧ್ವನಿತವಾಗುತ್ತಿತ್ತು.

ಬೆಳಗಿನ ಜಾವದ ವೇಳೆಗೆ ಮೂರ್ತಿಗೆ ಕೊಂಚ ನಿದ್ರೆಬಂದಂತಾಯಿತು. ಆಗಲೂ ಕನಸಿನಲ್ಲಿ ಶಂಕರು ಬಂದು "ನಿನ್ನ ಬಾಳಿಗೆ ನೀನೇ ನಾಯಕ; ನಿನ್ನ ಜೀವಕ್ಕೆ ನೀನೇ ಒಡೆಯ; ನಿನಗೆ ನೀನೇ ಗುರು; ನೀನೇ ಗೆಳೆಯ; ಧ್ಯೇಯ! ಆದರ್ಶ! ಸಾಧನೆ!" ಎಂದಂತಾಯಿತು. ಮೂರ್ತಿ ಧಿಗ್ಗನೆದ್ದು "ಶಂಕರು, ಶಂಕರು" ಎಂದು ಕೂಗುತ್ತಾ ಎದ್ದ. ಎದುರಿನ ಗಡಿಯಾರ 'ಟಿಕ್, ಟಿಕ್, ಟಿಕ್' ಎಂದು ಸದ್ದುಮಾಡುತ್ತಿತ್ತು. ಹೊರಗೊಂದು ನಾಯಿ ಕುಯ್ಯೋ ಮರ್ರ್ರೋ ಎಂದರಚುತ್ತಿತ್ತು. ಗಾಳಿ ಯಾವುದೋ ದುಃಖ ಹೊತ್ತಂತೆ ಮರಗಳೆಲೆಗಳಿಗೆ 'ಸುಂಯ್ಯೋ' ಎಂದು ದುಃಖವನ್ನುಸುರುತ್ತಿತ್ತು. ಮೂರ್ತಿಯ ಮನಸ್ಸು ಮುದುರಿಕೊಂಡಿತು. ಗಡಿಯಾರದ ಕಾಲದ ಕಾಗುಣಿತ ಮಾತ್ರ ಯಾವುದನ್ನೂ ಲೆಕ್ಕಿಸದೆ ತನ್ನಂತೆ ತಾನು ಮುಂದೆ ಸಾಗುತ್ತಿತ್ತು.

೬

ಮೂರ್ತಿ ಪರೀಕ್ಷೆಯಲ್ಲಿ ಚೆನ್ನಾಗಿಯೇ ಬರೆದಿದ್ದ. ತೇರ್ಗಡೆಯಾಗುವ ಧೈರ್ಯವಿತ್ತು. ಆದರೆ ಮುಂದೆ? ಮುಂದೆ ಓದಲು ಮೈಸೂರಿಗೇ ಹಿಂತಿರುಗಬೇಕು; ಮತ್ತೆ ತಂದೆಯ ಮನೆಗೇ; ಅದೇ ಹಳೆಯ ಜೀವನಕ್ಕೇ. ಅದೂ ಒಂದು ಯೋಚನೆಗಿಟ್ಟುಕೊಂಡಿತು ಮೂರ್ತಿಗೆ. ಇಷ್ಟು ದಿನವೂ ತಂದೆಯ ವಿಚಾರವಾಗಿ ಯೋಚನೆಯೇ ಇರಲಿಲ್ಲ. ಆದರೆ, ಈಗ ಯೋಚಿಸದೆ

ಮಾರ್ಗವೇ ಇಲ್ಲ. ತಂದೆಯನ್ನು ಬಿಟ್ಟು ಬಂದಾಗಲೇ ನಾಲ್ಕು ವರ್ಷವಾಗಿತ್ತು. ಈ ನಾಲ್ಕು ವರ್ಷದಲ್ಲಿ ನಾಲ್ಕು ಯುಗಗಳಲ್ಲಾಗುವಷ್ಟು ವ್ಯತ್ಯಾಸ. ತನ್ನಲ್ಲಿಯೇ ಎಷ್ಟು ಬದಲಾವಣೆಯಾಗಿಹೋಗಿದೆ. ಅಂದಿನ, ಆ ತುಂಟಾಟದ ಹಟವೆಲ್ಲಿ? ಈ ಅನುಭವಿಕ ಧ್ಯೇಯವಾದೀ ಹಟವೆಲ್ಲಿ? ಹಾಗೆಯೇ ತಂದೆಯಲ್ಲಿ. ಅದೂ ಮೂರು ವರ್ಷದ ಮಲತಮ್ಮನೊಬ್ಬ ಮನೆಯಲ್ಲಿರುವಾಗ! ಎಷ್ಟಿದ್ದರೂ ತಂದೆಗೆ ಚಿಕ್ಕ ಮಗನ ಮೇಲೆಯೇ ಪ್ರೇಮ. ಮಲತಾಯಿ ಮೊದಲಿನಿಂದಲೂ ತನ್ನನ್ನು ದ್ವೇಷಿಸುತ್ತಿದ್ದಳು. ಇನ್ನು ಈಗ ಸುಮ್ಮನಿದ್ದಾಳೆಯೇ? ಮಗ ಬೇರೆ ಈಗ! ಮನೆಗೆ ಸೇರಿಸಕೂಡದೆಂದು ಹಟಮಾಡಿ, ತನ್ನನ್ನು ಮನೆಯಿಂದ ಓಡಿಸಿದಾಕೆ ನಾಲ್ಕು ವರ್ಷಗಳಾದಮೇಲೆ ಇದ್ದಕ್ಕಿದ್ದಂತೆ ವಿಶ್ವಾಸ ತೋರುವಳೆಂಬ ಭರವಸೆಯೆಲ್ಲಿ? ಅದೂ ಅವಳಿಗೆ ಒಬ್ಬ ಮಗನಿರಬೇಕಾದರೆ! ಮೂರ್ತಿ ಒಂದೇ ಸಮನೆ ಯೋಚಿಸಿದ. ಮುಂದಕ್ಕೇನು ಮಾಡುವುದು? ಹೇಗಿರುವುದು? ಯಾವ ರೀತಿಯಲ್ಲಾದರೂ ಓದುವುದನ್ನು ನಿಲ್ಲಿಸಲಾಗದು; ಅದು ಮಾತ್ರ ದೃಢ. ಖಂಡಿತ, ನಿಶ್ಚಯ, ಏನೇ ಆಗಲಿ ಓದುವುದನ್ನು ಮಾತ್ರ ಮುಂದುವರಿಸಲೇಬೇಕು. ಮುಂದೆ ಓದಲೇಬೇಕು; ವಿದ್ಯಾರ್ಜನೆ ನಿಲ್ಲಿಸಬಾರದು! ಅದು ಅವನ ನಿರ್ಧಾರ. ಹಾಗಾಗಬೇಕಾದರೆ ಮಾಡುವುದಾದರೂ ಏನು? ಇದೊಂದು ಬಗೆಹರಿಯದ ಸಮಸ್ಯೆ ಮೂರ್ತಿಗೆ; ನಾಣಿ ಚಿಕ್ಕಪ್ಪನಿಂದ ಹಣ ಸಹಾಯ ತೆಗೆದುಕೊಳ್ಳುವುದೇ ಎಂದುಕೊಂಡ. ಆದರೆ ತನಗೇನೂ ಅಂತಹ ತೊಂದರೆಯಿಲ್ಲ; ದುಡಿಯುವ ತಂದೆಯಿರುವಾಗ ಬೇರೊಬ್ಬರಿಂದ, ಅದು ಯಾರೇ ಆಗಲಿ ಸಹಾಯವನ್ನೇಕೆ ಬಯಸಬೇಕು? ಇದೂ ಅಲ್ಲದೆ ಮೂರ್ತಿಗೆ ನಾಣಿ ಚಿಕ್ಕಪ್ಪನಲ್ಲಿ ಮೊದಲಿಂದಲೂ ಗೌರವವಿಲ್ಲ. ಅದೂ ಒಂದು ಮರವೆಯ ಜೀವನ. ಇರುವುದು, ಹೋಗುವುದು ಎಂದುಕೊಂಡ. ಕೇಳಿದರೂ ಚಿಕ್ಕಪ್ಪ ಕೊಡುವ ಭರವಸೆಯೂ ಇಲ್ಲ! ಶಂಕರುವಾದರೂ ಇದ್ದಿದ್ದರೆ ಏನಾದರೂ ಪರಿಹಾರ, ಸಮಸ್ಯೆ ಬಗೆ ಹರಿಸುವ ರೀತಿ ತಿಳಿಯುತ್ತಿತ್ತೋ ಏನೋ? ಆದರೆ ಶಂಕರು ಅವನ ಜೀವನದಲ್ಲಿ ಒಂದು ಧೂಮಕೇತುವಿನಂತೆ ಬಂದು ಹಾರಿಹೋದ. ಈಗ ಅವನ ನೆನಪು ಮಾತ್ರ ಉಳಿದಿತ್ತು. ಯಾವುದು ಏನೇ ಆಗಲಿ, ಶಂಕರು ಅಂದಂತೆ, ಸಾಧನೆ ಮಾತ್ರ ಬಿಡಲಾಗದು. ಅದಕ್ಕೆಷ್ಟೇ ಅಡ್ಡಿ ಬಂದರೂ ಸರಿಯೆಂದುಕೊಂಡ. ಹಾಗೆಯೇ ದಾರಿಯನ್ನು ಪರೀಕ್ಷೆಯ ಫಲಿತಾಂಶ ಬಂದ ದಿನ ಯೋಚಿಸುವುದೆಂದು ಸುಮ್ಮನಾದ.

ಫಲಿತಾಂಶ ಹೊರಬಿದ್ದ ದಿನ ಮೂರ್ತಿ ತನ್ನಷ್ಟಕ್ಕೆ ತಾನು ಏನೋ ಓದುತ್ತಾ ಕುಳಿತಿದ್ದಾಗ ಅಂಗಳದಿಂದ ಚಿಕ್ಕಪ್ಪ ಕೂಗಿದರು.

"ಲೋ ಮೂರ್ತಿ, ಫಲಿತಾಂಶ ಬಂದಿದೆ; ನಿನ್ನ ರಿಜಿಸ್ಟರ್ ನಂಬರೆಷ್ಟೊ?"

"೧೦೧೮"

"ಪಾಸಾಗಿಬಿಟ್ಟಿದೀಯಾ ಕಣೋ ಪರವಾಗಿಲ್ಲ".

ಮೂರ್ತಿಯ ಮುಖ ಗಂಭೀರವಾಯಿತು. ಮನಸ್ಸಿನ ಮುಂದೆ ಮಹಾಭೂತ ನಿಂತಿತು. ಮುಂದೇನು? ಚಿಕ್ಕಪ್ಪ ಒಂದೇ ಸಮನಾಗಿ ಏನೇನೋ ಮಾತನಾಡುತ್ತಿದ್ದರು. ನಾಣಿ ಚಿಕ್ಕಪ್ಪನ ಯಾವ ಮಾತೂ ಮೂರ್ತಿಯ ಮನಸ್ಸಿಗೆ ತಾಗಲೇ ಇಲ್ಲ. ಅವನ ಮನಸ್ಸಿದ್ದುದು ಬೇರೆ ಜಗತ್ತಿನಲ್ಲಿ. ಮೈಸೂರಿಗೆ ಓದಲು ಹೋಗಲೇಬೇಕು; ತಂದೆಯೊಂದಿಗೆ ಇದ್ದೇ ತೀರಬೇಕು, ಕಷ್ಟಕ್ಕೆ ಮೈ ಒಡ್ಡಲೇಬೇಕು.

"ನಾಣಿ, ನಾನಿನ್ನು ಮೈಸೂರಿಗೆ ಹೋಗಬೇಕು" ಮೂರ್ತಿ ಅಂದ.

"ಹೋಗಲೇಬೇಕೇನೋ? ಇನ್ನು ಮುಂದೆ ಓದಿಯಾದರೂ ಏನೋ ಉಪಯೋಗ? ಈಗ ಓದಿರುವುದೇ ಸಾಲದೇನೋ?"

"ಇಲ್ಲ ನಾಣಿ, ಮುಂದೆ ಓದಲೇಬೇಕು".

"ಅಲ್ಲವೋ ಮೂರ್ತಿ, ನಿನಗೇನು ಕಡಿಮೆ ಹೇಳು. ಈಗ ಓದಿದವರೇನು ಚೆನ್ನಾಗಿದ್ದಾರೆಯೇ? ಅವರ ಓದಿಗೆ ತಕ್ಕ ಫಲ ಅವರಿಗೊದಗಿದೆಯೇ? ನಾನು ನಿನಗೆಷ್ಟೋಬಾರಿ ಹೇಳಿದೆ, ಜಗತ್ತು ಕೆಟ್ಟದು ಎಂದು; ಜಗತ್ತು ಯಾರ ಗುಣವನ್ನೂ ಒಪ್ಪುವುದಿಲ್ಲ".

"ಹೌದು, ಜಗತ್ತು ಕೆಟ್ಟದು ಆದರೆ ಅದನ್ನು ಬದಲಾಯಿಸುವುದು ನಮ್ಮ ಕರ್ತವ್ಯ."

"ಹೂಂ! ಹುಚ್ಚುಕನಸು! ಒಂದೇ ರೀತಿಯಲ್ಲಿ ನಡೆದ ಪ್ರಪಂಚದ ರೀತಿಯನ್ನು ಇದ್ದಕ್ಕಿದ್ದಂತೆ ಬದಲಾಯಿಸುವುದು ಸಾಧ್ಯವೇನೋ?"

"ಇದ್ದಕ್ಕಿದ್ದಂತಿಲ್ಲದಿದ್ದರೆ ಕೊಂಚಕೊಂಚವಾಗಿ, ಅಂತೂ ಬದಲಾಯಿಸುವುದು ಖಂಡಿತ. ಅದೊಂದು ಧ್ಯೇಯವನ್ನಿಟ್ಟುಕೊಂಡು ಹೊರಟರೆ ಖಂಡಿತ ಬದಲಿಸುವುದೂ, ಹೊಸ ಜಗತ್ತನ್ನು ರೂಪಿಸುವುದೂ ಸಾಧ್ಯ".

"ಹೂಂ! ನಿನ್ನದಿನ್ನೂ ಎಳೆಯ ಬಿಸಿ ರಕ್ತ; ನಿನಗೇನೂ ತಿಳಿಯದು. ಉತ್ಸಾಹವಿದೆ, ಉದ್ರೇಕವಿದೆ, ಆದರೆ ಅನುಭವವೇ ಇಲ್ಲ. ಜಗತ್ತು ಬಹು ಕೆಟ್ಟದು; ನಿನಗೆ ಬೇಕಾದುದು ಯಾವುದೂ ನಡೆಯದು".

ಮೂರ್ತಿಗೆ ತಕ್ಷಣ ಶಂಕರುವಿನ ನೆನಪಾಯಿತು. ಅದೇ ನಿಮಿಷವೇ ಹುಚ್ಚನ ಮಾತೂ ನೆನಪಾಯಿತು. ಮೂವರೂ ಬಾಳಿನಲ್ಲಿ ನೊಂದವರು. ಹುಚ್ಚ ನೋವು ಸಹಿಸಲಾರದ ದುರ್ಬಲ ಹೃದಯಿ, ನೋವಿಗೆ ಪೂರ್ಣ ಆಹುತಿಯಾದ! ಚಿಕ್ಕಪ್ಪ ನೋವು ಸಹಿಸಿದ, ಅನುಭವಿಸಿದ, ಆದರೆ ಅದರ ನೆರಳನ್ನು ಅಳಿಸಲು ನಿರಸನೀಜೀವಿಯಾದ. ಮರೆವಿನಲ್ಲಿ ಅದನ್ನು ಮರೆಸಲು ಯತ್ನಿಸಿದ! ಶಂಕರುವೂ ನೊಂದವನೇ! ಆದರೆ ಆ ನೋವನ್ನೇ ಒಂದು ರೀತಿಯ ಪ್ರೇರೇಪಣೆಮಾಡಿಕೊಂಡ. ಬಾಳಿನಲ್ಲಿ ಅವನಿಗೂ ನಿರಾಸೆಯ ಗಂಟೇ ಸಿಕ್ಕಿದ್ದುದು. ಹೂವಿನ ಹಾರವಲ್ಲ, ಹಾವಿನ ಹೆಡೆಯೇ ಅವನಿಗೂ ಬಳುವಳಿಯಾಗಿ ಸಿಕ್ಕಿದ್ದುದು. ಆದರೆ ಅದರಿಂದಲೇ ಅವನೆದೆಗುಂದಲಿಲ್ಲ. ತನ್ನೆದೆಯಸ್ಥೈರ್ಯದಲ್ಲಿ, ತನ್ನ ಕಾರ್ಯದಲ್ಲಿ, ತನ್ನ ಬಲದಲ್ಲಿ ನಂಬುಗೆಯಿಟ್ಟು ಮುನ್ನಡೆದು ಧ್ಯೇಯವಾದಿಯಾದ. ಯಾವುದೇ ಸಂಕಟ ಅಡ್ಡಿಯಾದರೂ ಸಾಧನೆಯಲ್ಲಿ ಹಿಂದೆಗೆಯದ ಕ್ರಾಂತಿಜೀವಿ ಶಂಕರು. ಶಂಕರುವಿನ ಮಾತು ಗಳೆಲ್ಲ ಮುತ್ತಿನಂತಹುದು. ಅದು ಬರಿಯ ನೊಂದ ಜೀವಕ್ಕೆ ಸಮಾಧಾನ ನೀಡುವುದು ಮಾತ್ರವೇ ಅಲ್ಲ; ಬಾಳಿಗೇ ಒಂದು ಸ್ಫೂರ್ತಿ! "ನಿರಾಸೆ ಮನುಷ್ಯನ ಮೇಲೆ ತನ್ನ ನೆರಳನ್ನು ಯಾವಾಗಲೂ ಹಾಸಿರುತ್ತದೆ. ನಿರಾಸೆ ಹೃದಯವನ್ನು ಹಿಂಡುತ್ತದೆ. ನೋವು ಜೀವನದ ಜತೆಗಾರ್ತಿ; ನೋವಿನಿಂದ ಜೀವನ ಸವಿಯಾದರೂ ಆಗಬಹುದು. ನಿರಾಸೆ ಬಾಳಿಗೆ ಬಾಳನ್ನೇ ಕ್ರಾಂತಿಯ ಮಡಿಲಿಗೆಸೆದುಬಿಡುತ್ತದೆ!"

ಅಷ್ಟರಲ್ಲಿ ಚಿಕ್ಕಪ್ಪನ ಮಾತು ಈ ಯೋಚನೆಗೆ ತಡೆ ತಂದಿತು.

"ಅದೆಲ್ಲಾ ಸರಿ ಮೂರ್ತಿ, ಹಾಗಾದರೆ ನೀನು ಮೈಸೂರಿಗೆ ಹೋಗಲೇ ಬೇಕೇನು?"

"ಹೂಂ"

"ನೀನೂ ನನ್ನ ಜತೆಗೆ ನಾಲ್ಕುವರ್ಷ ಇದ್ದೆ. ನಾನೇನೋ ನಿನಗೆ ವಿಚಿತ್ರ ವಾಗಿ ಕಂಡಿರಬಹುದು. ಲೋಲುಪ್ತನಾಗಿ ತೋರಬಹುದು. ಆದರೆ, ಮೂರ್ತಿ,

ನಿಜವಾಗಿ ನನಗೂ ಒಂದು ಹೃದಯವಿದೆ. ನನಗೂ ವಿಶ್ವಾಸ ಸಾಧ್ಯ, ಪ್ರೇಮ ಸಾಧ್ಯ. ಮಮತೆ ಸಾಧ್ಯ, ನನ್ನ ಜೀವನದ ಒಂದೇ ಒಂದು ಆಸೆ ಜೆಸ್ಸಿ ತೀರಿದ ಮೇಲೆ ನನಗೆ ಮೊದಲಲ್ಲಿ ಯಾವುದೂ ಬೇಡವೆನಿಸಿತು. ನಾನೀಗಲೂ ನಿರಸನಿ ಜೀವನವನ್ನೇ ನಡೆಸುತ್ತಿದ್ದೇನೆ. ಆದರೆ ಈ ಹೊರಗಿನ ನಿರಾದರದಲ್ಲಿ ಅಗ್ನಿ ಪರ್ವತದಷ್ಟು ಕುದಿಯಿದೆ, ಕಾವಿದೆ, ನೋವಿದೆ! ನಿಜವಾಗಿ ನಿನ್ನಲ್ಲಿ ನನಗೆ ಪ್ರೇಮವಿತ್ತು. ಮೂರ್ತಿ, ಆದರೇನು? ನೀ ಹೋಗಲೇಬೇಕು, ನಾನು ಇಲ್ಲಿಯೇ ಉಳಿಯಬೇಕು. ಮುಂದೆ ಎಂದಾದರೂ ಒಂದು ದಿನ ನೀನು ಯಾವಾಗಲಾದರೂ ನನ್ನ ಜೀವನವನ್ನು ನೆನೆದು, ಅನುಭವದ ಹಣ್ಣಾದ ದೃಷ್ಟಿಯಿಂದ ನೋಡು, ಆಗ ತಿಳಿದುಕೊಳ್ಳುತ್ತೀ, ನನ್ನ ಬಾಳಿನ ಅರ್ಥವನ್ನು! ಈಗ–ಈಗಿನ ಮಾತೇಕೆ!"

ಮೂರ್ತಿ ಗಂಭೀರನಾಗಿದ್ದ. ನಾರಣಪ್ಪನ ಕೊರಳು ಬಿಗಿದು ಬಂತು. ಕಣ್ಣಿನಲ್ಲಿ ನೀರು ತುಂಬಿತು. ಮೂರ್ತಿಗೆ ತನ್ನ ಚಿಕ್ಕಪ್ಪನಿಗಾಗಿ ಹೃದಯ ಕರಗಿತು. ಆದರೆ—

* * *

ಮೂರ್ತಿ ರೈಲಿನಲ್ಲಿ ಕುಳಿತು ಮೈಸೂರಿಗೆ ಬಂದ. ರೈಲು ಒಂದೇ ಸಮನಾಗಿ ಮುನ್ನಡೆದಂತೆ, ಕಿಟಕಿಯಿಂದ ಹೊರಗೆ ನೋಡುತ್ತಾ ಕುಳಿತಿದ್ದ ಮೂರ್ತಿ ಒಂದೊಂದಾಗಿ ಹೊಲಗಳು, ಬೇಲಿಗಳು, ಕಾಡುಗಳು, ನದಿ ಸೇತುವೆಗಳೆಲ್ಲಾ ಬಂದು ಮಾಯವಾಗುತ್ತಿದ್ದುವು. ಬಾಳಿನ ಪಯಣದ ಹಾದಿಯಲ್ಲಿ ಹೀಗೆಯೇ ವಿವಿಧ ವ್ಯಕ್ತಿಗಳೂ ವಿವಿಧ ಅನುಭವಗಳೂ ಬಂದೇ ತೀರುವುವು. ಬಂದು ಮಾಯವಾಗುವುವು. ಆದರೆ ನಿಲ್ದಾಣ ಮುಟ್ಟುವ ಕಸುವು ಮಾತ್ರ ಇರಬೇಕು ಎಂದುಕೊಂಡ ಮೂರ್ತಿ!

ಮೈಸೂರು ಹತ್ತಿರವಾದಂತೆ ಮನಸ್ಸಿನ ಯೋಚನೆಯೂ ಹೆಚ್ಚಾಯಿತು. ತಂದೆಯೇನೆಂದಾರೆಂಬುದು ಮೊದಲ ಪ್ರಶ್ನೆ, ದೊಡ್ಡ ಪ್ರಶ್ನೆ. ಇನ್ನು ಮಲತಾಯಿ, ಜತೆಗೆ ಮಲತಮ್ಮ! ಮೂರ್ತಿ ಒಂದೇ ಸಮನೆ ಚಿಂತಿಸಲಾರಂಭಿಸಿದ. ಆದರೆ ಚಿಂತಿಸಿದಷ್ಟೂ ಮನಸ್ಸಿನ ಚಿಟ್ಟು ಹೆಚ್ಚಿತೇ ಹೊರತು ಏನೂ ಉಪಯೋಗವಾಗಲಿಲ್ಲ. ರೈಲು ಮಾತ್ರ ಇವನು ಯೋಚಿಸಿದರೆಷ್ಟು, ಬಿಟ್ಟರೆಷ್ಟು ಎನ್ನುವಂತೆ ತನ್ನಷ್ಟಕ್ಕೆ ತಾನು ಮುಂದುರುಳುತ್ತಿತ್ತು. ಅದರ ಕೂಗಿನ ದನಿ ಸುತ್ತಲಿನ ವಾತಾವರಣದಲ್ಲಿ ಮಾರ್ದನಿ ಪಡೆಯುತ್ತಿತ್ತು!

ಮೂರ್ತಿ ಮನೆಗೆ ಬಂದಾಗ ರಾತ್ರಿ ಸುಮಾರು ಎಂಟು ಗಂಟೆಯಿರ ಬಹುದು. ನೇರವಾಗಿಬಂದವನೇ "ಅಣ್ಣಾ" ಎಂದು ಕೂಗಿದ. ರಾಮಣ್ಣ ನವರು ಊಟಕ್ಕೆ ಕುಳಿತುಕೊಳ್ಳಲೆಂದು ಆಗತಾನೇ ಅಡಿಗೆಮನೆಗೆ ಹೋಗಿದ್ದ ವರು, ಮಗನನ್ನು ಎತ್ತಿಕೊಂಡು ಮುದ್ದಿಸುತ್ತಾ ಬಾಗಿಲ ಬಳಿ ಬಂದು "ಯಾರು ?" ಎಂದರು.

"ನಾನು" ಕೊಂಚ ಜೋರಾಗಿಯೇ ಅಂದ ಮೂರ್ತಿ.

ಬಾಗಿಲು ತೆರೆದೊಡನೆ ಒಳಗಿನಿಂದ ದೀಪದ ಬೆಳಕು ಮೂರ್ತಿಯ ಮುಖದಮೇಲೆ ಬಿತ್ತು. ರಾಮಣ್ಣ ಅವನ ಮುಖ ನೋಡಿ ಬೆಚ್ಚಿದರು. ಹಿಮ್ಮೆಟ್ಟಿದರು. ಮರುನಿಮಿಷವೇ ಬಾರದ ನಗೆ ತಂದುಕೊಂಡು "ಓಹೋ ಮೂರ್ತಿಯೇ, ಬಾ, ಬಾ, ಯಾವಾಗ ಬಂದೆ ?" ಎನ್ನುತ್ತಾ ತುಸು ಹಿಂದೆ ಸರಿದರು. ಮೂರ್ತಿ ತನ್ನ ತಂದೆ ತನ್ನನ್ನು ಮರೆತಿದ್ದರೂ ಹೀಗೆ ಹೊರಗಿನವರಂತಾಡುವರೆಂದೆಣಿಸಿರಲಿಲ್ಲ. ನಾಲ್ಕು ವರ್ಷಗಳಾದಮೇಲೆ ಮನೆಗೆ ಹಿಂದಿರುಗಿದ ಮಗನನ್ನು ಕಾಣುವ ರೀತಿ ಇದೇನೇ? ಮೂರ್ತಿ ಮೆಲ್ಲನೆ ಒಳಕ್ಕೆ ಬಂದ. ತಂದೆಯ ಕಂಕುಳಲ್ಲಿದ್ದ ಮಗುವನ್ನು ನೋಡಿದ; ಮೂರು ವರ್ಷದ ಮಗು. ಮೂರು ವರ್ಷಕ್ಕೆ ಎಷ್ಟು ಚೆನ್ನಾಗಿರಬೇಕು; ಬಡಕಲುಬಡಕಲಾಗಿ ಮೈಕೈಯೆಲ್ಲಾ ಒಣಗಿ ಬರಿಯ ಎಲುಬಿನ ತುಂಡಿನಂತಿತ್ತು ಮಗು. ಈಗಲೋ ಆಗಲೋ ಪರಲೋಕದ ಪ್ರಯಾಣಕ್ಕೆ ಸಿದ್ಧವಾದಂತಿತ್ತು! ಮೂರ್ತಿ ಅದರ ಕಡೆಗೇ ನೋಡುತ್ತಿರುವುದನ್ನು ಕಂಡು, ರಾಮಣ್ಣ ನಗುತ್ತಾ—

"ಹಾಂ, ಹಾಂ, ಅವಳದ್ದೇ; ಕೃಷ್ಣಮೂರ್ತಿ ಅಂತ ಹೆಸರು. ಕೃಷ್ಣ ಮೂರ್ತಿಯೆಂದು ಹೆಸರಿಡಬೇಕೆಂದು ಹಟಹಿಡಿದಳು ಅವಳು. ಎಲ್ಲಿ? ಕಿಟ್ಟಣ್ಣ ನೋಡು, ನಿಮ್ಮಣ್ಣ ಬಂದಿದಾನೆ. ಎಲ್ಲೀಪ್ಪ ? ಬೆನಕಬೆನಕಮಾಡಿ ತೋರಿಸು ಎಲ್ಲಾ ಆಟಗಳನ್ನೂ ಚೆನ್ನಾಗಿ ಆಡುತ್ತಾನೆ. ತುಂಟಮರಿ ಈಗ ಕೊಂಚ ದಿನದಿಂದ ಮೈ ಚೆನ್ನಾಗಿಲ್ಲ ಅಷ್ಟೇ! ಆದ್ದರಿಂದ ಏ—ನೂ ಮಾಡುವುದಿಲ್ಲ!" ಎನ್ನುತ್ತಾ ತಮ್ಮ ಮುದ್ದುಮಗುವಿಗೊಂದು ಮುತ್ತು ಕೊಟ್ಟರು. ಎರಡೂ ಕೈಗಳಲ್ಲೆತ್ತಿಕೊಂಡು ಕುಣಿಸಲು ಯತ್ನಿಸಿ ವಿಫಲರಾಗಿ ಕಂಕುಳಲ್ಲೇ ಕೂರಿಸಿ ಕೊಂಡು, "ಎಲ್ಲಿ ಚಿನ್ನ, ನಿನ್ನ ಅಣ್ಣ ನೋಡಬೇಕಂತೆ. ನವಿಲೆನವಿಲೇ ಮಾಡು

ನೋಡೋಣ" ಎಂದು ಹೇಳಿ ತಾವೇ ಅದರ ಕೈಯನ್ನಾಡಿಸಲು ಯತ್ನಿಸಿದರು. ಮಗು ತೆಪ್ಪಗಿತ್ತು. ಕೈ ವೈ ಅಲ್ಲಾಡಿಸಲು ಅದರೊಪ್ಪಿಗೆಯಿರಲಿಲ್ಲವೋ ಏನೋ!

"ಹೋಗಲಿ ಚಟ್ಲಮಟ್ಲ ಮಾಡು" ಎಂದು ನೆಲದ ಮೇಲೆ ಕೂರಿಸಿದರು. ಅವರ ವಂಶೋದ್ಧಾರಕ ಕೂಡಲೇ ಕೀರಲು ದನಿಯಲ್ಲಿ ಕಿರಿಚಲಾರಂಭಿಸಿದ. ಏನೇನೋ ಮಾಡಿದರೂ ಅಬ್ಬರ ಅಡಗಲೇ ಒಲ್ಲದು. ರಾಮಣ್ಣ ಬಹಳ ಕಷ್ಟ ಪಟ್ಟರು ಕಿಟ್ಟನನ್ನು ಸಮಾಧಾನಗೊಳಿಸಲು. ಆದರೆ ಅವನ ಪ್ರತಾಪಕ್ಕೆ ಅವರು ಸಾಟಿಯೇ? ಅವನ ಆರ್ಭಟ ನಿಲ್ಲಲೇ ಇಲ್ಲ!

ಮಗನ ಅಳುವಿನ ದನಿ ಕೇಳಿದೊಡನೆಯೇ ಲಕ್ಷಮ್ಮ ಹೊರಕ್ಕೋಡಿ ಬಂದರು. ಮೊದಲಿನ ಲಕ್ಷಮ್ಮ ಈಗ ಕೊಂಚ ಕೊಂಚವೇ ಬದಲಾಗಿದ್ದರು. ಸಿಡುಕು ಹೆಚ್ಚಿತ್ತು. ಗೊಣಗಾಟ ಮುಮ್ಮಡಿಸಿತ್ತು. ಬರುತ್ತಲೇ ಆರಂಭ. "ಒಂದರ್ಧಕ್ಷಣ ಮಗುವನ್ನು ಕೈಯಲ್ಲಿ ಕೊಟ್ಟರೂ ನೋಡಿಕೊಳ್ಳುವ ಯೋಗ್ಯತೆಯಿಲ್ಲ. ಹೇಗೆ ದುಡಿಯುವುದೋ ಕಾಣೆ ಈ ಮನೆಯಲ್ಲಿ. ಅಲ್ಲಿ ಅಡಿಗೆಯ ಮನೆಯ ಕೆಲಸ ಮಾಡಲೇ? ಇಲ್ಲಿ ಮಗು ನೋಡಿಕೊಳ್ಳಲೇ? ಸಾಕಪ್ಪಾ ಸಾಕು ಈ ಸಂಸಾರ!" ಎನ್ನುತ್ತಾ ಧಡಧಡನೆ ನಡೆದು ಧುಮು ಗುಟ್ಟುತ್ತಾ ರಾಮಣ್ಣನ ಕೈಯಿಂದ ಮಗುವನ್ನು ಕಿತ್ತುಕೊಂಡು ಸಮಾಧಾನ ಗೊಳಿಸಲು ತಬ್ಬಿಕೊಂಡರು.

"ಬೇಡ ನನ್ನ ಚಿನ್ನಾ–ಭಂಗಾರ–ಅಳಬೇಡಪ್ಪಾ ಅವರು ಹೊಡೆದರೇ? ಅವರಿಗೇ 'ಹತ್ತ, ಹತ್ತ' ಮಾಡಿಬಿಡೋವೆಯಂತೆ. ಹೂಂ! ಯಾವಾಗ್ಲೂ ಇದೇ ಕೆಲಸ. ಮಕ್ಕಳನ್ನ ಹೊಡೆಯೋದೇ, ಸುಮ್ಮನಿರು ನನ್ನ ರತ್ನ; ಸಕ್ಕರೆ ಕೊಡ್ತೀನಿ ಅಳಬೇಡ. ಇನ್ನು ಬೇ............" ಅರ್ಧಕ್ಕೆ ಮಾತು ನಿಂತಿತು. ಮುಕ್ತಾಯಗೊಂಡಿತು.

ಇದುವರೆಗೂ ತಮ್ಮ ಮಾತೃ ಪ್ರೇಮದ ಆವೇಗದಲ್ಲಿ ಕಣ್ಣಿಗೆ ಬೀಳದಿದ್ದ ಮೂರ್ತಿ ಕಣ್ಣಿಗೆ ಬಿದ್ದ. ಅವನ ಆಕೃತಿ ನೋಡಿ ಮೊದಲು ಗೊತ್ತೇ ಆಗಲಿಲ್ಲ. ಗುರುತು ಹಿಡಿಯುವುದೇ ಕಷ್ಟವಾಯಿತು. ಆದರೆ ಮರುನಿಮಿಷವೇ ಮುಖ ಸಿಂಡರಿಸಿಕೊಂಡು ಹುಬ್ಬು, ಗಂಟಿಕ್ಕಿ, ಅಲ್ಲಿ ನಿಲ್ಲದೆ, ಧಡಧಡನೆ ಮಗುವನ್ನಿನ್ನೂ ಗಾಢವಾಗಿ ತಬ್ಬಿಕೊಂಡು ಒಳಕ್ಕೆ ಹೊರಟುಹೋದರು.

ಮೂರ್ತಿ ಮೌನವಾಗಿ ನಿಂತಿದ್ದ. ಮಾತೊಂದನ್ನೂ ಆಡಲಿಲ್ಲ. ರಾಮಣ್ಣನವರು ಅಸಹಾಯರಂತೆ ತೆಪ್ಪಗೆ ನಿಂತಿದ್ದರು. ಅವರ ಮುಖದಲ್ಲಿ ಅವರ ನಿರ್ಬಲತೆ, ಕುರಿಯ ಮನೋಭಾವ ಒಡೆದು ಕಾಣುತ್ತಿತ್ತು. ತಾನೇನೂ ಮಾಡಲಾರೆನೆನ್ನುವ ದೈನ್ಯ; ತನಗೆ ಸಹಾನುಭೂತಿಬೇಕೆನ್ನುವ ನಿಸ್ಸಹಾಯತೆ; ಅವರ ಮೈ ಕೈ ಇಳಿದು ಹೋಗಿ ಕ್ಷಯ ಬಂದವರಂತೆ ಕಾಣುತ್ತಿದ್ದರು. ಅವರನ್ನು ನೋಡಿದರೆ 'ಅಯ್ಯೋ' ಎನಿಸುವಂತಿತ್ತು. ಈಗಂತೂ ಮೂರ್ತಿಗೆ ಅವರಲ್ಲೊಂದು ರೀತಿಯ ತಿರಸ್ಕಾರ, ಸಹಾನುಭೂತಿ ಎರಡೂ ಉಂಟಾಯಿತು. ಆದರೆ ಈಗ ನೋಡಿದರೆ ಕಳೆದುಳಿದ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಕೊಲೆ ಮಾಡಿ ಹೆಂಡತಿಗೆ ಬಲಿ ಸಮರ್ಪಿಸಿದ್ದಾರೆಂದು ಸ್ಪಷ್ಟವಾಯಿತು.

ರಾಮಣ್ಣ ಮೆಲ್ಲಗೆ ಹೆಂಡತಿಯನ್ನು ಹಿಂಬಾಲಿಸಿ ಅಡಿಗೆ ಮನೆಯೊಳಕ್ಕೆ ಹೋದರು. ಅಂಗಳದಲ್ಲಿ ನಿಂತಿದ್ದ ಮೂರ್ತಿಗೆ ಮಾತುಕತೆಯೆಲ್ಲ ಸ್ಪಷ್ಟವಾಗಿ ಕೇಳುತ್ತಿತ್ತು.

"ನೋಡೇ—ಮೂರ್ತಿ ಬಂದಿದಾನೆ ಕಣೇ"

ಮಲತಾಯಿಯ ಉತ್ತರವೇ ಬರಲಿಲ್ಲ. ಕೋಪಗೊಂಡಿರಬೇಕೆನಿಸಿತು ಮೂರ್ತಿಗೆ.

"ಅಲ್ಲವೇ ನಾಲ್ಕುವರ್ಷವಾಯಿತು ಹೋಗಿ ಈವತ್ತು ಬಂದಿದಾನೆ."

"ಅದಕ್ಕೇನು ಮಾಡಬೇಕೂಂತೀರಿ? ಹೋಗಿ ಪಾದಪೂಜೆ ಮಾಡಲೇನು?"

ಅಬ್ಬಾ! ದನಿಯೆಷ್ಟು ಕರ್ಕಶ! ಗಡುಸು!

"ಅಲ್ಲ ಕಣೇ!"

"ಏನು ಅಲ್ಲ ಕಣೇ! ಇನ್ನು ಆ ಪಿಶಾಚಿ ಬೇರೆ ಬಂತು. ಇನ್ನು ಅದಕ್ಕೂ ಬೇಯಿಸಿ ಹಾಕಬೇಕು. ಕಂಡವರ ಮಕ್ಕಳಿಗೆಲ್ಲಾ ಪಿಂಡ ಬೇಯಿಸಿ ಹಾಕಲು ನಾನೇನು ಅಡಿಗೆಯವಳೆಂದುಕೊಂಡಿದ್ದೀರೇನು? ನನ್ನಿಂದ ಸಾಧ್ಯವಿಲ್ಲ"

"ಸುಮ್ಮನೆ ಹೀಗೆ ರೇಗಿಬಿಟ್ಟರಾಯಿತೇನೇ; ಕೊಂಚ ಯೋಚನೆ ಮಾಡೇ? ಹೋಗಲಿ ಮುಂದಿನದು ನಾಳೆ ಯೋಚಿಸೋಣ. ಈಗ ಇಬ್ಬರಿಗೂ ಅನ್ನ ಹಾಕು. —ಅವನೂ ರೈಲಿನಿಂದ ಬಂದಿದಾನೆ ಹಸಿದಿರಬೇಕು ಪಾಪ!"

"ಪಾಪ! ಆ ರಾಕ್ಷಸ ಹಸಿದಿದಾನೆ, ಅವನ ಹೊಟ್ಟೆಗೆ ತುಂಬಿಬಿಟ್ಟ ರಾಯಿತು. ಇನ್ನು ಉಳಿದವರ ಪಾಡೇನೋ? ಇನ್ನು ಮತ್ತೆ ಅನ್ನಕ್ಕಿಡಬೇಕು."

"ಕೊಂಚ ಒಂದು ದಿನ ಕಷ್ಟ ಸಹಿಸಿಕೊಳ್ಳೇ" ಎನ್ನುತ್ತಾ ರಾಮಣ್ಣ ಹೊರ ಬಂದರು. ಒಳಗಿನಿಂದ ಲಕ್ಷ್ಮಮ್ಮನ ಗೊಣಗಾಟ ಒಂದೇ ಸಮನಾಗಿ ಕೇಳುತ್ತಿತ್ತು.

"ಮೂರ್ತಿ, ಬಟ್ಟೆ ಬಿಚ್ಚಿ ಕೈಕಾಲು ತೊಳೆದುಕೊಂಡು ಊಟಕ್ಕೇಳು" ಎಂದರು ರಾಮಣ್ಣ.

"ನನಗೆ ಹಸಿವೆಯಿಲ್ಲಣ್ಣಾ, ಊಟ ಮಾಡುವುದಿಲ್ಲ" ಎಂದ ಮೂರ್ತಿ.

ಅವನು ಹಾಗೆಂದಾನೇ ಎಂದು ಕಾದಿದ್ದರೋ ಎಂಬಂತೆ ರಾಮಣ್ಣ ಮರು ಮಾತಿಲ್ಲದೆ ಸರಸರನೆ ಒಳಕ್ಕೆ ಹೋದರು. ಹೆಂಡತಿಗೆ ಮನಸ್ಸು ತೃಪ್ತಿಯಾಯಿತಲ್ಲಾ ಎನ್ನುವ ತೃಪ್ತಿಯಿಂದ,

"ಲೇ ನಿನಗೆ ಮತ್ತೆ ಅನ್ನಕ್ಕಿಡುವ ಕಷ್ಟ ತಪ್ಪಿತು. ಅವನು ಊಟ ಮಾಡುವುದಿಲ್ಲವಂತೆ" ಎಂದುದು ಮೂರ್ತಿಯ ಕಿವಿಗೆ ಬಿತ್ತು. ಆದರೆ ಮೂರ್ತಿ ಬಿಟ್ಟ ನಿಟ್ಟುಸಿರು ಅವರಾರಿಗೂ ಕೇಳಲಿಲ್ಲ!

ಮೂರ್ತಿ ರಾತ್ರಿಯೆಲ್ಲಾ ಹಾಗೂ ಹೀಗೂ ನಿದ್ರೆಯಿಲ್ಲದೆ ಯೋಚನೆಯಲ್ಲಿಯೇ ಕಳೆದ. ಬೆಳಗ್ಗೆಯಾದಮೇಲೇನು? ಇಲ್ಲಿಯೇ ಇರುವುದಾದೀತೇ? ಈಗಂತೂ ತಂದೆ ಸಂಪೂರ್ಣವಾಗಿ ಮಲತಾಯಿಯ ಕೈಯಲ್ಲಿ ಮೇಣದ ಮೂರ್ತಿಯಾಗಿದ್ದಾರೆ. ಏನು ಮಾಡುವರೋ? ಓದೆನ್ನುವರೋ ಇಲ್ಲವೋ? ಮನೆಯಲ್ಲಿರಲು ಸಾಧ್ಯವಾದೀತೋ ಇಲ್ಲವೋ? ಇದೇ ಚಿಂತೆಯಲ್ಲಿಯೇ ರಾತ್ರಿ ನಿದ್ರೆಯಿಲ್ಲದೆ ಕಳೆದ. ಬೆಳಗ್ಗೆ ಎದ್ದೊಡನೆ ಸ್ನಾನಕ್ಕಾಗಿ ಕೆರೆಗೆ ಹೋಗಿ ಹಿಂತಿರುಗಿ ಹೊಸಲಲ್ಲಿ ಕಾಲಿಡುತ್ತಿದ್ದಂತೆಯೇ ಒಳಗೆ ತನ್ನ ಮಲತಾಯಿ ಯಾರೊಂದಿಗೋ ಮಾತನಾಡುತ್ತಿರುವುದು ಕೇಳಿತು.

"ಹಾಗೇನು?"

"ಹೊಂ, ಅಂದರೆ, ಏನೂಂತ ಹೇಳಲಿ ನನ್ನ ಕರ್ಮ! ಅವನೂ ಬಂದಿದಾನೆ ರಾಕ್ಷಸ. ನಿನ್ನೆ ರಾತ್ರಿ ಅದು ಯಾವ ಹೊತ್ತಿನಲ್ಲಿ ಕಾಲಿಟ್ಟನೋ, ಶನಿ ಬಂದ ಹಾಗೆ. ಬೆಳಗ್ಗೆ ನನ್ನ ಹಣೆಗೆ ಮಂಚದ ಕಟ್ಟು ತಗುಲಿ ಬೋರೆ ಬಂತು.

ನಮ್ಮ ಕಿಟ್ಟಣ್ಣನಿಗೆ ಜ್ವರ ಬೇರೆ ಬಂದು ಬಿಟ್ಟಿದೆ. ನಿನ್ನೆ ಅವನನ್ನು ಕಂಡೊಡನೆಯೇ ಕಿಟಾರಂತ ಕಿರಿಚಿದ. ನನಗಾಗಲೇ ಗೊತ್ತಿತ್ತು ಹೀಗಾಗುತ್ತೆ ಅಂತ."

"ಒಬ್ಬೊಬ್ಬರು ಹಾಗೇನೆ ಅಂದರೆ."

"ಅಯ್ಯೋ, ಏನೂಂತೀರಿ ಕಾವೇರಮ್ಮನೋರೇ, ಅವನು ಮನೆಗೆ ವಕ್ರಿಸಿದ. ನಮ್ಮವರು ಹೋಗಿ ಬಾಗಿಲು ತೆರೆದರು, ಕಿಟ್ಟಣ್ಣನನ್ನು ಕೈಯಲ್ಲೆತ್ತಿಕೊಂಡು. ಬಾಗಿಲು ತೆರೆದುದೇ ತಡ ಆ ರಾಕ್ಷಸಾಕೃತಿ ಕಂಡು ಕಿಟ್ಟಣ್ಣ ಕಿಟಾರನೆ ಕಿರಿಚಿ ಮೂರ್ಛೆ ಹೋದ. ನಾನು ಬಂದು ಎತ್ತಿಕೊಳ್ಳದೇ ಹೋಗಿದ್ದರೆ ನಿನ್ನೆ ಅವನ ಗತಿ ಈಗಲೋ ಆಗಲೋ. ಏನೂಂತ ಹೇಳೋದು ಹೇಳಿ! ಮೊದಲ ಹೆಂಡತಿ ಮಗಾಂತ ಅವರಿಗಾದ್ರೆ ನನಗೇನು ಹೇಳಿ ?"

"ಅಷ್ಟೇಂದ್ರೆ, ನೀವು ಯಾಕೇಂತ ಮಾಡ್ಬೇಕು ?"

"ಇನ್ನು ಅವನಿಗೆ ಹೊತ್ತಿಗೆ ಗೊತ್ತಿಗೆ ಪಿಂಡ ಬೇರೆ, ನಾನೇ ಎಲ್ಲ ಸೇವೆ ಮಾಡಬೇಕು. ಮನೆಗೆ ರಾಜಕುಮಾರ ಬಂದಿದಾನೆ. ನಾನೇನು ಅವನ ದಾಸಿ ಕೆಟ್ಟುಹೋದೆನೇ ? ನನ್ನ ಜನ್ಮಕ್ಕೆ ಇನ್ನು ಏನೇನು ಬರೆದಿದೆಯೋ ?"

"ಅಯ್ಯೋ ಲಕ್ಷಮ್ಮನೋರೇ, ನೀವು ಹೀಗೆ ಹೇಳ್ತೀರಾ! ನಮ್ಮ ಮನೇಲಿ ಏನು ಅಂತೀರಿ ? ಆ ಚಂಡಾಲ ಇದಾನೆ ನೋಡಿ, ಆ ಶೇಷು, ಅವನ ಸೇವೆಗೆ ಯಾವಾಗಲೂ ಸಿದ್ಧವಾಗಿರಬೇಕು. ಥೂ ! ಥೂ ! ಬೇಜಾರಾಗಿ ಹೋಗಿದೆ. ನನಗೆ ಈಗೀಗಂತೂ ಅನ್ನಿಸ್ತಾ ಇದೆ. ಮೊಮ್ಮಗಾಂತ ಅವರು ಆಸೆಪಟ್ಟು ದತ್ತು ಮಾಡಿಕೊಂಡರು. ಈಗ ಸಂಕಟಪಡೋದು ನನ್ನ ಕರ್ಮ. ಅಗ್ಲೇ ಹೇಳಿದೇಂದರೆ ಅವಗೆ ಶೇಷುನ ದತ್ತು ಮಾಡ್ಕೋಬೇಡಿ, ಹುಡುಗ ಹೇಳಿದ್ದು ಕೇಳೊಲ್ಲ ಅಂತ. ನನ್ನ ಮಾತನ್ನು ಅವರು ಕೇಳಲೇ ಇಲ್ಲ, ಈಗ ಒದ್ದಾಡ್ತಾರೆ."

"ಏನೂಂದ್ರೆ, ಸಮಾಚಾರ, ಅದೇನೋ".

"ಹೂಮ್ಮ! ನಿಜ! ಏನುತಾನೇ ಮಾಡೋದು ಹೇಳಿ. ಬೆಳೆದ ಹುಡುಗ ಹುಡುಗಿ ಮಾತಾಡೋದೂಂದ್ರೇನು ಹೇಳಿ. ನಾನೂ ನೂರು ಸಾರಿ ಹೇಳಿದೆ "ಬೇಡವೋ ಬೇಡವೋ, ಆವಳ ಜತೆಗೆ ಮಾತಾಡಬೇಡವೋ" ಅಂತ ಗಿಣೀಗೆ ಹೇಳೋಹಾಗೆ ಹೇಳಿದೆ. ಆದರೆ ನನ್ನ ಮಾತು ಕೇಳಿದರೆ ತಾನೇ! ಈಗಿನ ಕಾಲದ ಹುಡುಗರೇ ಹೀಗೆ ನೋಡಿ! ಜತೆಗೆ ಅವಳೂ ಕಾಲೇಜು ಮೆಟ್ಟಲಿಗೆ

ಮಣ್ಣು ಹಾಕಿದವಳು, ನಾಚಿಕೆ ಹೇಸಿಕೆಯಿಲ್ಲ ಬಿಟ್ಟವಳು! ನಮ್ಮ ಕಾಲದಲ್ಲಿ ಹೀಗಿರಲಿಲ್ಲಮ್ಮ; ಈಗಿನವರೆಲ್ಲ ಶುದ್ಧ ಬಜಾರಿಗಳು. ಹುಂ, ಏನು ತಾನೇ ಮಾಡೋದು ಹೇಳಿ? ಹೊತ್ತಾಯಿತು, ಇನ್ನು ಅವನಿಗೆ ಹತ್ತು ಗಂಟೆಗೇ ಅಡಿಗೆ ಮಾಡಿ ತೊಲಗಿಸಬೇಕು. ಕುಂಕುಮ ಕೊಡಿ ".

ಕುಂಕುಮದ ಬಟ್ಟಲು ತರುತ್ತಾ ಲಕ್ಷ್ಮಮ್ಮ ತಮ್ಮ ಮಲಮಗನ ಮೇಲಿನ ವಿಷವನ್ನು ಸಂಪೂರ್ಣವಾಗಿ ಕಾರಿದರು.

" ನಾನೂ ನೋಡ್ತೀನಿ ಸ್ವಲ್ಪ ದಿವಸ. ನಾನು ಹೇಳಿದ ಹಾಗೆ ಕೇಳಿ ಕೊಂಡು ಬಿದ್ದಿತ್ತೋ ಬಿದ್ದಿರಲಿ. ಇಲ್ಲದೇ ಹೋದರೆ ಒದ್ದು ಓಡಿಸಿ ಬಿಡೋದೇ. ನಾಯಿ ಹಾಗೆ ಅಲೆದುಕೊಂಡು ಭಿಕ್ಷೆ ಬೇಡಿ ತಿನ್ನಲಿ. ನನ್ನ ಕೈಯಲ್ಲಿ ಮಾಡಿ ಹಾಕೋದಂತೂ ಅಸಾಧ್ಯ. ಹೊರಟುಬಿಟ್ಟಿರಾ? ಹಾಗೇ ಪುರುಸತ್ತಾದಾಗ ಈ ಕಡೆ ಬನ್ನಿ ".

" ಅಯ್ಯೋ ಏನು ಪುರುಸತ್ತೋ, ಈ ದುಡಿತದಲ್ಲಿ ಸಂಜೆ ಪುರಾಣಕ್ಕೆ ಹೋಗೋದೇ ಅತಿ ಕಷ್ಟ "

" ಅಂದ ಹಾಗೇ, ನಿನ್ನೆ ಏನು ಕತೆ? "

" ನಿನ್ನೆ, ರಾಮ ಕಾಡಿಗೆ ಹೊರಟಾಗ ಕೌಸಲ್ಯೆ ಬಂದು ಕೈಕೇನ ಬೇಡಿ ಕೊಳ್ಳೋ ಭಾಗ ಹೇಳಿದರು ದಾಸರು. ಅಯ್ಯೋ, ಎಷ್ಟು ಚೆನ್ನಾಗಿತ್ತು ಅಂತೀರಿ! ರಾಮ ಹೇಗೆ ತನ್ನ ಮಗನೋ ಭರತನೂ ಹಾಗೆಯೇ. ಭರತನೇ ರಾಜ ನಾಗಲಿ; ಅವನು ರಾಜನಾದರೂ ನನಗೆ ಆನಂದವೇ, ಆದರೆ ರಾಮನನ್ನು ಕಾಡಿಗೆ ಕಳಿಸೋದು ಬೇಡಾಂತ ಬೇಡಿಕೊಂಡಳು. ಆದರೆ ಆ ಕಿರಾತಕಿ ಕೈಕೆ ಕೇಳ ಬೇಕಲ್ಲಾ? ಎಷ್ಟಿದ್ದರೂ ಸವತಿ ಮತ್ಸರ. ಮಹಾ ತಾಯಿ ಕೌಸಲ್ಯೆ, ಮಲ ತಾಯಿಯ ದ್ವೇಷ ಕೊಂಚವೂ ಇಲ್ಲದೆ ಭರತನಿಗೆ ಪಟ್ಟ ಕಟ್ಲೊಂತ ಹೇಳಿದಳು "

" ಮಹಾ ತಾಯಿ! ಎಲ್ಲಾ ದೇವರ ಮಹಿಮೇಂದ್ರೆ, ದೇವರ ಮಹಿಮೆ! "

" ಬರ್ತೀನೀಂದ್ರೆ "

ಪಕ್ಕದ ಮನೆಯವರು ಹೊರಟರು. ಹಾಗೆಯೇ ಹೋಗುತ್ತಾ ಹೋಗುತ್ತಾ ಅವರ ಮಾತು ಕೇಳದವನಂತೆ ನಿಂತಿದ್ದ ಮೂರ್ತಿಯ ಮುಖ ವನ್ನೇ ಅವನನ್ನು ತಿಂದುಬಿಡುವವರಂತೆ ದೃಷ್ಟಿಸುತ್ತಾ ಹೋದರು. ಮೂರ್ತಿ

ಮನೆಯೊಳ ಹೊಕ್ಕಂತೆ ಲಕ್ಷಮ್ಮನವರು ಮೂರ್ತಿ ತಿರುವಿ ಸೊಟ್ಟ ಮೋರೆಯ ಬಿನ್ನಾಣದಿಂದ ಅಡಿಗೆ ಮನೆಯೊಳಕ್ಕೆ ಹೊರಟು ಹೋದರು.

ಬಟ್ಟೆಗಳನ್ನೆಲ್ಲಾ ಒಣ ಹಾಕಿ ಮಡಿ ಬಟ್ಟೆ ಹಾಕಿಕೊಳ್ಳುವ ವೇಳೆಗೆ ರಾಮಣ್ಣನವರು ಎದ್ದು ಮುಖ ತೊಳೆದು ಒಳಕ್ಕೆ ಹೋಗಿ ಕಾಫಿ ಕುಡಿದು ಬಂದರು. ರಾತ್ರಿ ಲಕ್ಷಮ್ಮನವರೊಂದಿಗೆ ಬಹಳ ಚರ್ಚೆ ಮಾಡಿ, ಬೇಡಿ ಕಾಡಿ ಮಗನನ್ನು ಮನೆಯಲ್ಲಿಯೇ ಉಳಿಸಿಕೊಂಡು ಅನ್ನ ಹಾಕುವುದು, ಅವನು ಕಾಲೇಜಿಗೆ ಸೇರಲಿ, ಆದರೆ ಫೀಸು ಮಾತ್ರ ಕೊಡಕೂಡದೆಂದು ತೀರ್ಮಾನಿಸಿದ್ದರು. ಅದನ್ನೇ ಹೇಳಿದರು ಮೂರ್ತಿಗೆ.

"ನಾನೇನುಮಾಡಲಿ ಮೂರ್ತಿ, ಇದ್ದುದನ್ನು ಹಾಗೆಯೇ ಹೇಳಿಬಿಡುತ್ತೇನೆ. ಎಷ್ಟು ಬಂದರೂ ಸಾಕೇ ಆಗುವುದಿಲ್ಲ. ಈಗಂತೂ ಯುದ್ಧ ; ಸಾಮಾನುಗಳ ಬೆಲೆ ದುಬಾರಿಯಾಗಿ ಹೋಗಿದೆ ನನಗೋ ಮೊದಲಿನಷ್ಟೇ ವರಮಾನ! ಹೀಗಾಗಿ ಏಳುವುದೇ ಕಷ್ಟವಾಗಿದೆ ; ಫೀಸು ಮಾತ್ರ ನನ್ನಿಂದ ಕೊಡಲಾಗುವುದಿಲ್ಲ. ಊಟಮಾಡಿಕೊ, ನಾನು ಬೇಡವೆನ್ನುವುದಿಲ್ಲ ; ಈ ಹಜಾರದಲ್ಲೇ ಒಂದು ಕಡೆ ಮಲಗಿಕೊ ; ಇಲ್ಲ, ನಿನ್ನ ಸ್ನೇಹಿತರು ಯಾರಾದರೂ ಇದ್ದರೆ ಅವರ ಮನೆಯಲ್ಲಿಯೇ ರೂಮಿನಲ್ಲಿಯೇ ಮಲಗಿಕೊ ; ನಾವು ತಿನ್ನುವ ಅಂಬಲಿಯೋ ತುಂಬೆಸೊಪ್ಪೋ ನಿನಗೂ ಹಾಕುತ್ತೇವೆ".

"ಆದರೆ, ಮೊದಲು ಸೇರುವಾಗ ಫೀಸು ಕೊಡಬೇಕಲ್ಲಾ ಅಣ್ಣಾ" ಮೆಲ್ಲನೆ ಕೇಳಿಯೂ ಕೇಳಿಸದಂತೆ ಹೇಳಿದ ಮೂರ್ತಿ.

ರಾಮಣ್ಣ ಸುಮ್ಮನೆ ನಿಂತಿದ್ದರು ; ಅವರ ಮಾತನ್ನು ಕೇಳುತ್ತ ನಿಂತಿದ್ದ ಲಕ್ಷಮ್ಮ ಅಡಿಗೆಮನೆಯಿಂದ ಹೊರಬಂದವರೇ ಗಡುಸು ದನಿಯಲ್ಲಿ ಗಂಡನನ್ನು ಗದರಿಸಿಕೊಂಡರು.

"ಯಾಕೆ? ಮೂದೇವಿ ಹಾಗೆ ನಿಂತಿದ್ದೀರಿ, ಬಾಯಿಲ್ಲವೆ? ಹೇಳಿಬಿಡಿ ; ಒಂದು ಕಾಸೂ ಕೊಡೋದಕ್ಕಾಗೋಲ್ಲ. ಮುಂದಿನ ತಿಂಗಳು ಕಿಟ್ಟಣ್ಣನಿಗೆ ಬೆಳ್ಳಿಯ ಚೈನು ತರಬೇಕು. ಸೇಲರ್‌ಸೂಟು ಹೊಲಿಸಬೇಕು. ಸುಮ್ಮನೆ ದಂಡ ತೆರೋದಕ್ಕೆ ಹಣವಿಲ್ಲ".

ಮೂರ್ತಿ ಮರುಮಾತಾಡಲಿಲ್ಲ. ರಾಮಣ್ಣನೂ ಏನೂ ಹೇಳದೆ ಬಾಲ ಮುದುರಿಕೊಂಡು ಒಳಕ್ಕೆ ಹೊರಟು ಹೋದರು. ಎಲ್ಲಿ ಮಗ ತಮ್ಮ

ದೌರ್ಬಲ್ಯವನ್ನು ಖಂಡಿಸಿಬಿಡುವನೋ ಎಂಬ ಹೆದರಿಕೆಯಿಂದ ಅವನನ್ನು ಒಬ್ಬನನ್ನೇ ನೋಡಲು ಅವರಿಗೆ ಧೈರ್ಯ ಸಾಲದಾಯಿತು.

"ಆ ಚಂಡಾಲ ಮುಂಡೇದಕ್ಕೆ ಕಾಲೇಜು ಬೇರೆ ಕೇಡು; ಫೀಸು ಕೊಡಬೇಕಂತೆ ಫೀಸು!" ಎಂದು ಗೊಣಗುತ್ತಾ ಒಳಕ್ಕೆ ನಡೆದರು ಲಕ್ಷ್ಮಮ್ಮ.

ಮೂರ್ತಿ ಬಹಳ ಯೋಚನೆಮಾಡಿದ. ಮೊದಲ ತಿಂಗಳು ಏನೇ ಆಗಲಿ ಫೀಸು ಕೊಟ್ಟೇ ತೀರಬೇಕು. ಫೀಸು ಕೊಡದಿದ್ದರೆ ಕಾಲೇಜು ಹೊಸಲು ಮೆಟ್ಟುವಂತೆಯೇ ಇಲ್ಲ. ತಂದೆ ಇಷ್ಟೊಂದು ಕಲ್ಲಾಗಿ ಇಲ್ಲವೆನ್ನುವರೆಂದು ತಿಳಿದಿರಲಿಲ್ಲ ಅವನು. ಇನ್ನು ಉಳಿದ ಹಾದಿಯೆಂದರೆ ಚಿಕ್ಕಪ್ಪನಿಗೆ ಕಾಗದ ಬರೆಯುವುದು. ಮೂರ್ತಿಗೆ ಅದು ಸರಿದೋರಲಿಲ್ಲ. ತಂದೆಯ ಬಳಿ ಇದ್ದುಕೊಂಡು ಚಿಕ್ಕಪ್ಪನಿಂದ ಹಣ ಕೇಳುವುದು ಹೇಗೆ? ಇದೂ ಅಲ್ಲದೆ ಚಿಕ್ಕಪ್ಪನ ಸ್ವಭಾವ—ತನ್ನನ್ನೀವೇಳೆಗಾಗಲೇ ಮರೆತೇ ಹೋಗಿರಬಹುದು; ಆದರೆ ಹೇಗಾದರೂ ಮಾಡಿ ಕಾಲೇಜು ಸೇರಲೇಬೇಕು; ಫೀಸು ಕೊಡಬೇಕು; ಪುಸ್ತಕಗಳನ್ನು ಕೊಂಡುಕೊಳ್ಳಲೇಬೇಕು. ಕಡಿಮೆಯೆಂದರೆ ಮೂವತ್ತು ರೂಪಾಯಿ ಬೇಕೇಬೇಕು. ಎಲ್ಲಿಂದ ತರುವುದು ಅಷ್ಟು ರೂಪಾಯಿ? ಹುಂ, ಕಾಲೇಜಿಗೆ ಅಪ್ಲಿಕೇಷನ್ನಂತೂ ಕೊಡುವುದು. ಫೀಸು ಕೊಡಲಿನ್ನೂ ಒಂದು ತಿಂಗಳಿದೆಯಲ್ಲವೇ? ಅಷ್ಟರಲ್ಲಿ ಏನಾದರೂ ಮಾಡಿದರಾಯಿತು ಎಂದುಕೊಂಡ.

ಎಷ್ಟು ಹಿಂಸೆಕೊಡಲು ಸಾಧ್ಯವೋ ಅಷ್ಟು ಕೊಡಲಾರಂಭಿಸಿದರು ಲಕ್ಷ್ಮಮ್ಮ; ಅದು ಆ ದಿನವೇ ಆರಂಭವಾಯಿತು. ಮೂರ್ತಿ ಕಕ್ಕಸಿಗೆ ಹೋಗಿ ಹಿಂತಿರುಗುವ ವೇಳೆಗೆ, ಒಣಹಾಕಿದ್ದ ಅವನ ಒಗೆದ ಬಟ್ಟೆಗಳನ್ನೆಲ್ಲಾ ಮೂಲೆಯಲ್ಲಿ ಕಸದ ಗುಡ್ಡೆಯ ಮೇಲೊಗೆದು, ಅಲ್ಲಿ ಮಗುವಿನ ಹಾಸಿಗೆಯ ಬಟ್ಟೆಯನ್ನೆಲ್ಲಾ ಹರಹಿದ್ದರು. ಅವುಗಳನ್ನೆಲ್ಲಾ ಮತ್ತೆ ನೀರಿನಲ್ಲಿ ನೆನಸಿ ಒಣಗಿಸೋಣವೆಂದು ನಲ್ಲಿಯ ಹತ್ತಿರ ಹೋಗುವ ವೇಳೆಗೆ ನಲ್ಲಿಯ ಕೆಳಗೆ ಮಡಿಪಾತ್ರೆಯನ್ನಿಟ್ಟಿರು. ಅದೆಷ್ಟೊಂದು ನೀರು ಹಿಡಿಯುತ್ತಿತ್ತೋ ಅಡಿಗೆ ಮನೆಯ ಕೊಳದಪ್ಪಲೆ, ಒಂದೇಸಮನಾಗಿ ನೀರು ತೆಗೆದುಕೊಂಡು ಹೋಗುತ್ತಲೇ ಇದ್ದರು. ಅಡಿಗೆಮನೆಯ ಬಚ್ಚಲಿಂದ ಧಾರೆಧಾರೆಯಾಗಿ ನೀರು ಬರುವುದನ್ನು ಕಂಡು ಮೂರ್ತಿ ಒಂದು ಒಣನಗೆ ನಕ್ಕು, ಒಳಕ್ಕೆ ಹೊರಟು ಹೋದ. ಊಟಕ್ಕೆ ಕರೆಯುವರು, ಕರೆಯುವರು ಎಂದು ಕಾದುದೇ ಹೊರತು

ಅವನನ್ನು ಯಾರೂ ಕರೆಯಲೇ ಇಲ್ಲ. ಹಿಂದಿನ ರಾತ್ರಿ ಊಟವಿಲ್ಲದೆ ಬಹಳ ಸೊರಗಿದ್ದ. ಬಹಳ ಹಸಿವೆಯಾಗಿತ್ತು; ರಾಮಣ್ಣ ಆಗಲೇ ಆಫೀಸಿಗೆ ಹೊರಟು ಹೋಗಿದ್ದರು. ಲಕ್ಷಮ್ಮ ಊಟ ಮುಗಿಸಿ ಪಾತ್ರೆಯನ್ನೆಲ್ಲಾ ಮುಚ್ಚಿಟ್ಟು ಎಲೆಹಾಕಿಕೊಳ್ಳುತ್ತಾ ಅಂಗಳಕ್ಕೆ ಬಂದು ಕುಳಿತರು. ಅವರ ಮುದ್ದು ಮಗು ಮೂರು ವರ್ಷದ ಕೃಷ್ಣಮೂರ್ತಿ ತೊಡೆಯೇರಿದ. ಮೂರ್ತಿಗೆ ಅಲ್ಲಿ ಕುಳಿತಿರುವುದು ಅಸಾಧ್ಯವಾಯಿತು. ಬಿಸಿನೀರಿನೊಳಕ್ಕೆ ಹಾಕಿ ಬೇಯಿಸುವಂತಾಯಿತು ಅವನಿಗೆ. ಆ ವೇಳೆಗೆ ಸರಿಯಾಗಿ ಬೆಳಗ್ಗೆ ಬಂದಿದ್ದ ಮಹರಾಯಿತಿ ಕಾವೇರಮ್ಮನ ಪುನರಾಗಮನವಾಯಿತು. ಮೂರ್ತಿ ಹೊರಗಿನ ಜಗಲಿಯ ಮೇಲೆ ಕುಳಿತು ಒಳಗೆ ನಡೆಯುವುದನ್ನೆಲ್ಲ ನೋಡುತ್ತಿದ್ದ ಕೇಳುತ್ತಿದ್ದ.

"ನೋಡಿ ಅಂದರೆ, ನಮ್ಮ ಕಿಟ್ಟಣ್ಣ ಎಷ್ಟು ಒಳ್ಳೆಯವನು ಅಂತೀರಿ; ಎಷ್ಟು ಬುದ್ಧಿ, ಚಾಲೂಕು! ಇನ್ನೂ ಎಷ್ಟೊಂದರೆ ವಯಸ್ಸು, ಮೂರು ಕೂಡ ತುಂಬಿದೆಯೋ ಇಲ್ಲವೋ? ಈಗ ಯಾವ ತಿಂಗಳು ಹೇಳಿ, ಜ್ಯೇಷ್ಠ ಅಲ್ಲವೇ? ಇವನು ಹುಟ್ಟಿದ್ದು ಜ್ಯೇಷ್ಠ, ಆಷಾಢ, ಶ್ರಾವಣ, ಶ್ರಾವಣದಲ್ಲಿ. ಅಂದರೆ ಇನ್ನೂ ಮೂರು ವರ್ಷ ತುಂಬಲು ಮೂರು ತಿಂಗಳು".

"ಶ್ರಾವಣದಲ್ಲೇ, ನಮ್ಮ ಸೋದರತ್ತೆ ಮೊಮ್ಮಗಳೂ ಶ್ರಾವಣ ಮಾಸದಲ್ಲೇ ಹಡೆದದ್ದು".

"ಆದರೂ ಎಷ್ಟು ಬುದ್ಧಿ ಅಂತೀರಿ; ಎಷ್ಟು ಚೇಷ್ಟೆ! ಎಷ್ಟು ತುಂಟ ತನ! ಎಲ್ಲಿ ನನ್ನ ಭಂಗಾರ, ಅಜ್ಜಿ ನೋಡಬೇಕಂತೆ! ಮೊಸರಿನವಳನ್ನು ತೋರಿಸೋ, ಎಷ್ಟು ಚೆನ್ನಾಗಿ ಮಾಡ್ತಾನೆ ಅಂತೀರಿ". ಮೂರ್ತಿ ಹೊರಗಿನಿಂದ ನೋಡುತ್ತಲೇ ಇದ್ದ. ಮಗು ಮುದುರಿಕೊಂಡು ಚಾಪೆಯಂತಿದ್ದುದು ಹಾಗೆಯೇ ಇತ್ತು. ತಾಯಿಯ ಮಾತಿಗೆ ತಾಯಿಯನ್ನಿನ್ನೂ ಜೋರಾಗಿ ತಟ್ಟಿಕೊಂಡು 'ಬ್ಯಾ-ಬ್ಯಾ!' ಎಂದುದಷ್ಟೇ! "ಅಯ್ಯೋ ಪಾಪ, ಈವತ್ತು ಮಗೂಗೆ ಮೈಗೆ ಚೆನ್ನಾಗಿಲ್ಲ; ನೆನ್ನೆ ರಾತ್ರಿ ಬಂತಲ್ಲಾ ಆ ಶನಿ ಅದರ ವಕ್ರ-ದೃಷ್ಟಿ, ಗೃಧ್ರಮುಂಡೇದು; ರಾತ್ರಿಯೇ ಮಗು ಕಿಟ್ಟನೆ ಕಿರಿಚಿತು. ರಾತ್ರಿಯೆಲ್ಲಾ ಜ್ವರ, ಅದಕ್ಕೆ ಮಂಕಾಗಿದೆ. ಈವತ್ತು ಉಪ್ಪು ಮೆಣಸಿನಕಾಯಿ ನಿವಾಳಿಸಿದೆ; ಅದೇನು ಸಿಡಿತ ಅಂತೀರಿ!"

"ಅಲ್ಲಾಂದರೆ ಅದೇನೋ ಹೇಳ್ತಾ ಇದ್ದರಲ್ಲಾ, ಅದೇನಾಯ್ತು? ಕೊನೆಗೆ ಏನು ತೀರ್ಮಾನ ಮಾಡಿದಿರಿ? ಅವನಿಲ್ಲೇ ಇರಬೇಕೂಂತಲೋ."

"ಹೂಂ! ಇನ್ನೆಲ್ಲಿ ತಾನೇ ಹೋದೀತು ಮೂದೇವಿ! ಯಾರಿದಾರೆ ಬಾ ಅನ್ನುವವರು. ನಮಗೆಂದರೆ ಕಟ್ಟಿದ್ದು ಅನುಭವಿಸಬೇಕು. ಬೆಳಗಿನಿಂದ ಅನ್ನ ತಿನ್ನೋಕೂ ಬಂದಿಲ್ಲ ಎಲ್ಲಿ ಹೋಗಿದಾನೋ ಕಾಣೆ, ಅದೇ ಉಳೀತು."

ಮೂರ್ತಿಗೆ ಕಣ್ಣಿನಲ್ಲಿ ನೀರು ತುಂಬಿ ಬಂತು. ಅನ್ನ ನೀರಿಲ್ಲ. ನಿನ್ನೆ ರಾತ್ರಿಯೂ ಊಟವಿಲ್ಲ. ಈ ದಿನವೂ ಇಲ್ಲ. ಆದರೆ ಊಟ ಮಾಡು ಎನ್ನುವವರೂ ಇಲ್ಲ ಚಿಕ್ಕಪ್ಪನ ಮನೆಯಲ್ಲಿ ಕಾಲಕಾಲಕ್ಕೆ ಹಾಯಾಗಿ ತಿಂದುಕೊಂಡಿದ್ದುದು ಇದ್ದಕ್ಕಿದ್ದಂತೆ ಪೂರ್ಣ ಅದಲು ಬದಲು! ಮೂರ್ತಿ ಕಿಟಕಿಯಿಂದ ಒಳಗೊಮ್ಮೆ ನೋಡಿದ. ಅಂಗಳದ ಗೋಡೆಯ ಮೇಲೆ ಇನ್ನೂ ಅನ್ನಪೂರ್ಣೆಯ ಚಿತ್ರ ಹಾಗೆಯೇ ಇತ್ತು. ಮೇಲೆಲ್ಲಾ ಧೂಳು, ಸುತ್ತೆಲ್ಲಾ ಜೇಡನ ಬಲೆ. ಆದರೂ ಚಿತ್ರ ಮಾತ್ರ ಹಾಗೆಯೇ ಇತ್ತು. ಮೂರ್ತಿಗೆ ಒಮ್ಮೆಗೇ ತಾಯಿಯ ನೆನಪು ಬಂತು. ಎದೆ ದುಃಖದಿಂದ ಭಾರವಾಯಿತು. ಕಣ್ಣಿನಲ್ಲಿ ಹನಿ ಪಟಪಟ ಉದುರಲಾರಂಭವಾಯಿತು. ದುಃಖ, ಅಸಹಾಯ ಕೋಪಗಳಿಂದ ಮನ ಕುಗ್ಗಿತು. ಮೈ ಕಾವೇರಿತು. ತಾಯಿ ಇದ್ದಿದ್ದರೆ? ತನ್ನ ತಾಯಿ ಇದ್ದಿದ್ದರೆ? ಖಂಡಿತವಾಗಿಯೂ ಹೀಗಾಗುತ್ತಿರಲಿಲ್ಲ. ತನ್ನನ್ನು ಬಿಟ್ಟು ಹೀಗೆ ಊಟಮಾಡುತ್ತಿದ್ದಳೆ? ತಾಯಿಯ ಕರುಳಿನ ಬಂಧನ ಅಷ್ಟು ಸಡಿಲವೇ? ಸಂಜೆ ಕರು ಬಂದು ಹಾಲು ಕುಡಿಯುವುದು ಹೊತ್ತಾದರೆ ಮೇವು ಕೂಡ ಬಿಟ್ಟು ಹಸು ಕರುವಿಗಾಗಿ ಕಾತರ ಪಡುತ್ತಿದ್ದುದನ್ನು ಅವನೇ ಕಂಡಿದ್ದ. ಬೀದಿಯ ಭಿಕ್ಷುಕಿ ಕೂಡ, ತನಗಿಲ್ಲದಿದ್ದರೂ ಕೂಡ ತನ್ನ ಕೂಸಿಗೊಂದಿಷ್ಟು ಹಾಲು ಹಾಕುತ್ತಿರಲಿಲ್ಲವೇ? ತನ್ನ ತಾಯಿ ಉಳಿದಿದ್ದರೆ ತನ್ನ ಪಾಡು ಹಾಗಾಗುತ್ತಿತ್ತೇ! ಮೂರ್ತಿಯ ರಕ್ತ ಕುದಿಯುತ್ತಿತ್ತು. ಅಲ್ಲಿ ಕೂತುಕೊಳ್ಳಲು ಮನಸ್ಸು ಬರಲಿಲ್ಲ. ಕಣ್ಣೊರಸಿಕೊಳ್ಳುತ್ತಾ ಅಲ್ಲಿಂದೆದ್ದು ಬಾಗಿಲಿನಾಚೆಗೆ ಹೊರಟ. ಹಿಂತಿರುಗಿ ಒಮ್ಮೆ ನೋಡಿದಾಗ ಲಕ್ಷಮ್ಮ ಮತ್ತು ಕಾವೇರಮ್ಮ ಕುಳಿತು ಹರಟೆ ಹೊಡೆಯುತ್ತಿದ್ದುದು ಕಾಣಿಸಿತು. ಮೇಲುಗಡೆಯಿದ್ದ ಅನ್ನಪೂರ್ಣೆಯ ಚಿತ್ರದಲ್ಲಿ ನಗೆ ಮಾಸಿಹೋಗಿತ್ತು.

ಅಂದೆಲ್ಲಾ ಸುಮ್ಮನೆ ಕೆರೆಯ ಏರಿಯ ಮೇಲೆ ಬಿದ್ದುಕೊಂಡಿದ್ದ. ಹೊಟ್ಟೆ ಚುರುಗುಟ್ಟಿದಾಗ ಹತ್ತಿರದ ಕಾಲೇಜಿನ ಬಳಿ ಹೋಗಿ ನಲ್ಲಿಯಿಂದ ಬೇಕಾದಷ್ಟು ನೀರು ಕುಡಿದು ಬಂದ. ಈಗ ಕೆರೆಯ ಏರಿಯ ಮೇಲೆ ಆ ಹುಚ್ಚನಿರಲಿಲ್ಲ. ಮೂರ್ತಿಗೆ ಅವನ ಮಾತು ಮರಮರದೆಲೆಗಳಿಂದಲೂ ಕೇಳಲಾರಂಭವಾಯಿತು.

"ಪ್ರಪಂಚದಲ್ಲಿ ಯಾವುದೂ ಸರಿಯಿಲ್ಲ. ಪ್ರಪಂಚ ಕೆಟ್ಟಿದೆ. ಬರುವವರು ಬರುತ್ತಾರೆ, ಹೋಗುವವರು ಹೋಗುತ್ತಾರೆ. ನಮಗೆ ಬೇಕಾದವರು ಮಾತ್ರ ಇಲ್ಲ. ನಮಗೆ ಬೇಕಾದುದೂ ಇಲ್ಲ. ಹುಚ್ಚು ಜಗತ್ತಿನಲ್ಲಿ ಯಾವುದೂ ಸರಿಯಿಲ್ಲ!"

ಈ ಮಾತಿನ ಸತ್ವ ಮೂರ್ತಿಗೆ ಈಗಾಗಲೇ ಮನವರಿಕೆಯಾಗಿತ್ತು, ಆದರೆ ಎದೆಯಲ್ಲಿನ್ನೂ ಶಂಕರು ಕೊಟ್ಟ ಕಾವಿತ್ತು. ಹುಚ್ಚನೆಲ್ಲಿರಬಹುದೆಂದು ಹುಡುಕಿದ. ಅವನೇನಾದನೋ ಏನೋ! ನಾಲ್ಕುವರ್ಷದ ಮೇಲೆಯೇ ಆಯಿತು. ಎಲ್ಲಾದರೂ ಓಡಿಹೋಗಿರಬಹುದು ಅಥವಾ ಸತ್ತಿರಬಹುದು. ಅಂತೂ ಇಲ್ಲ. ಹಾಗೆಯೇ ಮೂರ್ತಿಗೆ ತನ್ನ ಸಂಕಟದಲ್ಲಿಯೂ ನಗು ಬಂತು. ಈಗತಾನೇ ಆ ಹುಚ್ಚನ ಬದಲಿಗೆ ಹುಚ್ಚನಾಗಿರುವೆನೆಂದು ಅನ್ನಿಸಿತು.

ಸಂಜೆಯಾಗುವವರೆಗೂ ಅಲ್ಲಿಯೇ ಮರದ ನೆರಳಿನಲ್ಲಿ ಬಿದ್ದುಕೊಂಡಿದ್ದ. ಮೇಲೆ ಅಳಿಲೊಂದು ಕಾಯಿ ಕಿತ್ತು "ಹಸಿದಿದ್ದೀಯಾ? ನಿನಗೆ ಬೇಕೇ?" ಎಂದು ಕೇಳುವಂತೆ ಮುಂಗಾಲಿನಲ್ಲಿ ಕಾಯನ್ನಿಟ್ಟುಕೊಂಡು ಕುಳಿತಿತ್ತು. ಕಾಯಿ ಕೆಳಕ್ಕೆ ಬಿತ್ತು. ಮೂರ್ತಿ ಅಳಿಲನ್ನೇ ದೃಷ್ಟಿಸುತ್ತಿದ್ದ.

"ನಿನ್ನ ಹೃದಯದ ನೋವು ನನಗೆ ಗೊತ್ತು. ನಿನ್ನ ಜೀವನದ ಕಷ್ಟ ನನಗೆ ತಿಳಿದಿದೆ. ಆದರೆ ಧ್ಯೇಯಸಾಧನೆ ಮರೆತೀಯೆ, ಜೋಕೆ. ಕಷ್ಟದಲ್ಲಿ ಎದೆಗಾರಿಕೆ ಬೇಕು. ಇತರರ ಕಷ್ಟದಲ್ಲಿ ಸಹಾನುಭೂತಿ, ನಮ್ಮ ಕಷ್ಟದಲ್ಲಿ ಸಹನಾಶಕ್ತಿ ಇವೇ ಮನುಷ್ಯನ ಲಕ್ಷಣ. ಎದೆಗುಂದೀಯೆ ಜೋಕೆ, ಜೋಕೆ!" ಎನ್ನುವಂತೆ ಅವನ ಕಡೆಗೇ ನೋಡುತ್ತಾ ಕಣ್ಣು ಮಿಟುಕಿಸಿ ಅಳಿಲು ಆ ಕಡೆ ನೆಗೆದು ಚಂಗನೆ ಹಾರಿ ಹೋಯಿತು.

"ಶೇಷು, ಶೇಷು"

"ಓ ಬಂದೆ"

ಶೇಷಗಿರಿ ಬಾಗಿಲು ತೆಗೆದೊಡನೆ ಮೂರ್ತಿ ಒಳಹೊಕ್ಕ. ಕೂಡಲೇ ಕೆಮ್ಮು ಬಂದಿತು.

"ಇದೇನೋ ಇದು! ಕಾಲೇಜು ವಿದ್ಯಾರ್ಥಿ ನೀನು. ರೂಮನ್ನಿಟ್ಟುಕೊಳ್ಳುವುದು ಹೀಗೇ ಏನು? ಈ ಧೂಳು ಈ ಕಸ ಗುಡಿಸಿ ಎಷ್ಟು ವರ್ಷವಾಯಿತೋ ಅಲ್ಲಿ ನೋಡು ಪುಸ್ತಕಗಳನ್ನೆಲ್ಲ ಒಟ್ಟಬಿಟ್ಟಿದ್ದೀಯಲ್ಲಾ, ಗೆದ್ದಲು ಹಿಡಿದರೆ? ಚೆನ್ನಾಗಿದೆ! ಅಲ್ಲವೋ ಕಾಲೇಜಿನಲ್ಲಿ ಓದುವವನೇ ಹೀಗಿದ್ದರೆ! ನಿನ್ನ ಬಟ್ಟೆಯೋ! ಆ ಮೇಜಿನ ಮೇಲಿನ ಜೇಡನ ಬಲೆ ಮನುಷ್ಯನನ್ನು ಬಲೆ ಹಿಡಿಯುವಷ್ಟು ದೊಡ್ಡದಾಗಿದೆಯಲ್ಲೋ"

"ಹೋಗಲಿ ಬಿಡು, ಮೂರ್ತಿ, ಹೇಗಿದ್ದರೇನು? ಕಾಫಿ ಕುಡಿದು ಬರೋಣ ನಡಿ"

ಇಬ್ಬರೂ ಹೊರ ಹೊರಟು ಹೋಟಲಿನ ಕಡೆ ನಡೆದರು. ಹೋಗುತ್ತಾ ದಾರಿಯಲ್ಲಿ ಅದೂ ಇದೂ ಮಾತನಾಡುತ್ತಾ ಮೂರ್ತಿ ಕೇಳಿದ.

"ಲೋ ಶೇಷು, ನಿಮ್ಮಜ್ಜನಿಗೆ ಇನ್ನೂ ಕೋಪ ತಗ್ಗಿಲ್ಲವೇನೋ?"

"ಅದೆಲ್ಲಿ ತಗ್ಗುತ್ತೆ? ನಿನ್ನೆ ರಾತ್ರಿಯೂ ಮತ್ತೆ ಜಗಳ. ಊಟಕ್ಕೆ ಹೋದೆ. ಆರಂಭವಾಯಿತು. ಒಂದು ಕಡೆ ಅಜ್ಜನ ಕೊರೆತ, ಮತ್ತೊಂದು ಕಡೆ ಅಜ್ಜಿಯದು. ಅವಳ ಜತೆಗೆ ಮಾತಾಡಬೇಡ, ಅವಳ ಕಡೆ ನೋಡಬೇಡ, ಅವಳನ್ನು ಕಾಣಲೇಬೇಡ, ಇದೇ. ಕೊರೆತಕ್ಕೂ ಕೊನೆಮೊದಲಿಲ್ಲವೇನೋ? ನಾನು ಸುಮ್ಮನಿದ್ದಷ್ಟೂ ಹೆಚ್ಚಿತು. ನನ್ನಷ್ಟಕ್ಕೆ ನಾನು ಊಟಮಾಡಿಕೊಂಡು ಎದ್ದು ಬಂದೆ. ಜತೆಗೆ ಈಗ ಇದೊಂದು ಗುಲ್ಲುಬೇರೆ ಎದ್ದಿದೆಯಲ್ಲಾ! ಸಾಕಪ್ಪಾ ಸಾಕು! ಅವರಿಗೆ ಕುದುರೆ ಕೊಟ್ಟಂತಾಗಿದೆ. ಇನ್ನೇನು ಮನಸ್ಸನ್ನು ಇಷ್ಟಬಂದಂತೆ ಓಡಿಸಬಹುದು. ಬೇಕಾದಂತೆ ಆಡಳಿತ ನಡಸಬಹುದು!"

ಮೂರ್ತಿಯ ಮುಖ ಗಂಭೀರವಾಯಿತು. ಶೇಷಗಿರಿಯ ವಿಷಯವೆಲ್ಲ ಅವನಿಗೆ ಪೂರ್ಣವಾಗಿ ತಿಳಿದಿತ್ತು. ಶೇಷುವಿನ ತಾತ ಬಹು ದೊಡ್ಡ ಐಶ್ವರ್ಯ

ವಂತರು. ಅವರಿಗೆಷ್ಟು ಆಸ್ತಿಯಿದೆಯೆಂಬುದು ಅವರಿಗೇ ತಿಳಿಯದೆಂದು ಜನ ಅನ್ನುತ್ತಿದ್ದರು. ಆದರೆ ಪ್ರಾಣಿ ಕೊಂಚ ಹಳೆಯ ತರಹವೆ. ಕೊಂಚವೇನು ಪೂರ್ಣವಾಗಿಯೇ ಹಳೆಯ ತರಹ. ಜತೆಗೆ ತಾನಂದುದು ನಡೆದೇ ತೀರ ಬೇಕೆನ್ನುವ ಹಟ. ಮೊಮ್ಮಗನನ್ನು ತಮ್ಮ ಹೆಂಡತಿಯ ಇಚ್ಛೆಯ ವಿರುದ್ಧ ವಾಗಿ ದತ್ತು ತೆಗೆದುಕೊಂಡರು, ಸಾಕಿದರು, ಬೆಳೆಸಿದರು. ತಮ್ಮಂತೆಯೇ ತಮ್ಮ ಪ್ರತಿಬಿಂಬವನ್ನಾಗಿಸಲು ಯತ್ನಿಸಿದರು. ಆದರೆ ಶೇಷು ತನ್ನದೇ ಸ್ವತಂತ್ರ ಮನೋಭಾವ ಬೆಳೆಸಿಕೊಂಡು ಬಂದಿದ್ದ. ಇದರಿಂದ ಅವರು ತಿದ್ದು ತ್ತಿದ್ದುದು ಯಾವ ಉಪಯೋಗಕ್ಕೂ ಬರುತ್ತಿರಲಿಲ್ಲ. ಏನೇ ಆಗಲಿ, ತನ್ನಿಚ್ಛೆ ಯಂತೆ, ತನ್ನ ಮನಸ್ಸಿಗೆ ತೋರಿದಂತೆ ನಡೆಯುವವನು ಶೇಷು. ಅವನ ಬಂಡಿ ಯನ್ನು ತಮ್ಮ ಗಾಡಿಗೆ ಸೆಕ್ಕಿಸಿ ಎಳೆದುಕೊಂಡು ಹೋಗುವ ಅಜ್ಜನ ಪ್ರಯತ್ನ ವಿಫಲವಾಯಿತು. ಎರಡು ಶಕ್ತಿಗಳಿಗೆ ಹೋರಾಟ! ಇದರಿಂದ ಅಜ್ಜನಿಗೆ ಅವನ ಮೇಲೆ ವಿಪರೀತ ಕೋಪ. ಘಟಿಂಗ, ಪೋಲಿ. ಕೆಟ್ಟುಹೋದ; ಕಾಲೇ ಜಿಗೆ ಹೋದುದೇ ತಪ್ಪೆಂದು ರೇಗಾಡಿದರು. ಏನೇ ಆಗಲಿ, ನನಗೆ ಬಾಗಿಸಿಯೇ ಬಾಗಿಸುತ್ತೇನೆಂದು ಹಟತೊಟ್ಟರು. ಅವನಿಗೆ ಕಾಸು ಸಿಗದಂತೆ ಮಾಡಿದರು. ಲಕ್ಷಾಧಿಕಾರಿಯ ಮೊಮ್ಮಗ, ದತ್ತಪುತ್ರ, ನೋಡುವವರಿಗೆ ಸುಖಜೀವಿ. ಆದರೆ ಮಧ್ಯಾಹ್ನದ ಕಾಫಿ ಕುಡಿಯಲು ಕಾಸಿಲ್ಲ, ಇದು ಶೇಷುವಿನ ಪಾಡು. ಹಣದ ಬೆದರಿಕೆಗೆ ಬಾಗಲಿಲ್ಲ ಶೇಷು! ಊಟ ಹಾಕಿದರೆ ತಿನ್ನುತ್ತಿದ್ದ, ಹೋಗುತ್ತಿದ್ದ. ಕಾಫಿಯೂ ಬೇಡ, ಏನೂ ಬೇಡ. ಕಾಸಿದ್ದರೆ ಉಂಟು, ಇಲ್ಲ ದಿದ್ದರೆ ಅದೇ ಇಲ್ಲ, ಇಷ್ಟಕ್ಕೆಲ್ಲಾ ಹೆದರಿ ಅಜ್ಜನ ಕೈಯಲ್ಲಿ ಚಕ್ಕಳದ ಗೊಂಬೆ ಯಾಗಲೇ? ಎಂದುಕೊಂಡು ಕಷ್ಟ ಅನುಭವಿಸಲು ಸಿದ್ಧನಾದ. ಅಜ್ಜನ ಮುಷ್ಟಿ ಕಪಿಮುಷ್ಟಿ. ಬಂಡವಲಿಗನ ನೆರಳು ಕಾರ್ಮಿಕನ ಬೆನ್ನು ಹತ್ತುವಂತೆ ಅಜ್ಜನ ಹಟದ ನೆರಳು ಶೇಷುವನ್ನು ಎಲ್ಲೆಲ್ಲಿಯೂ ಬೆನ್ನು ಹತ್ತಿತ್ತು. ಅವನ ಪ್ರತಿ ಇಚ್ಛೆಗೂ ಹೇಗಾದರೂ ಸರಿ ಅಡ್ಡತಂದೊದಗಿಸುತ್ತಿದ್ದರು. ಈಚೆಗೆ ಅವನ ಮೇಲೊಂದು ದೊಡ್ಡ ಅಪವಾದ ಬೇರೆ ಹರಡಿತ್ತು!

ಶೇಷುವಿನ ಮನೆಯ ಪಕ್ಕದಲ್ಲಿಯೇ ಅವನ ಸೋದರಮಾವನ ಮನೆ. ಸೋದರಮಾವನ ಮಗಳೂ ಕಾಲೇಜಿನಲ್ಲಿಯೇ ಓದುತ್ತಿದ್ದಳು. ಚಿಕ್ಕತನ ದಿಂದ ಜತೆಯಲ್ಲಿಯೇ ಬೆಳೆದವರು, ಸಹಜವಾಗಿಯೇ ಸಲಿಗೆಯಿಂದಿದ್ದರು.

ಒಂದೇ ತಾಯಿಯ ಮಕ್ಕಳಲ್ಲದಿದ್ದರೇನು? ಅಣ್ಣ ತಂಗಿ, ಅಕ್ಕ ತಮ್ಮನಾಗ ಲಾರರೇನು? ಅವರಿಬ್ಬರ ಈ ಸಾಮಾನ್ಯ ಅಕ್ಕ ತಮ್ಮನ ಸಲಿಗೆಯನ್ನೊಡೆದು ಅವರಿಬ್ಬರೂ ಒಬ್ಬರೊಡನೊಬ್ಬರು ಮಾತನಾಡದಂತೆ ನಡೆಸಲು ಶೇಷುವಿನ ಅಜ್ಜನ ಯತ್ನ. ಎಷ್ಟೆಷ್ಟೋ ಹೇಳಿ ನೋಡಿದರು. ಕೊನೆಗೆ ಹೆದರಿಕೆ ಹಾಕಿ ದರು. ಆದರೆ ಶೇಷು ಬಗ್ಗಲಿಲ್ಲ.

ಅದು ಹೇಗೋ ಏನೋ ಒಂದು ಅಪವಾದ ಹುಟ್ಟಿಕೊಂಡಿತು. ಆ ಹುಡುಗಿಗೆ ಇವನು ಲೈಂಗಿಕ ಶಿಕ್ಷಣ ಕೊಡುವಂತೆ, ಅದಕ್ಕೆ ಅವಳು ಸಂತೋಷ ದಿಂದ ಸಮ್ಮತಿಸಿದಂತೆ ಪತ್ರ ಸೃಷ್ಟಿಯಾಗಿ ಅಪಪ್ರಚಾರ ಆರಂಭವಾಯಿತು. ಇದರಿಂದ ಶೇಷುವಿಗೆಷ್ಟು ನೋವಾದೀತು? ಆ ಹುಡುಗಿಯ ನಾಳಿನ ಬಾಳೇನು? ಎನ್ನುವ ಚಿಂತೆ ಯಾರಿಗೂ ಇಲ್ಲ! ಶೇಷುವಿನ ಹೆಸರಿನ ಗೆಳೆಯರೆಲ್ಲ ಕೈಬಿಟ್ಟರು. ಆ ಹುಡುಗಿ ತಲೆಯೆತ್ತಿ ತಿರುಗುವುದೇ ಕಷ್ಟವಾಯಿತು. ಆದರೆ ಶೇಷು ಹಿಂಜರಿ ಯಲಿಲ್ಲ, ಎದೆಗುಂದಲಿಲ್ಲ. ತಾನು ನಿರಪರಾಧಿ, ತನ್ನಲ್ಲಿ ಯಾವ ತಪ್ಪೂ ಇಲ್ಲ ವೆನ್ನುವ ಸ್ಥೈರ್ಯದಿಂದ ಮೊದಲಿನಂತೆಯೇ ಇದ್ದ. ಆದರೆ ಇದರಿಂದ ಮನ ಸ್ಸಿಗೆ ಮಾತ್ರ ಅಪಾರ ನೋವಾಗಿತ್ತು. ಆ ನೋವೇ ಇರಬೇಕು, ಅವನಿಗೂ ಮೂರ್ತಿಗೂ ಗೆಳೆತನ ಕುದುರಿಸಿದ್ದು. ಎರಡು ನೊಂದ ಹೃದಯ ಕೂಡು ವಷ್ಟು ಬೇಗ ಮತ್ತೆ ಯಾವುದೂ ಕೂಡದು. ಮೂರ್ತಿಗೆ ಎಲ್ಲವನ್ನೂ ತಿಳಿ ಸಿದ ಶೇಷು. ಹಾಗೆಯೇ ಶೇಷುವಿಗೆ ತನ್ನ ಬಾಳಿನ ಪಯಣವನ್ನು ತಿಳಿಸಿದ ಮೂರ್ತಿ. ಶೇಷುವೇ ಮೂರ್ತಿ ಕಾಲೇಜಿಗೆ ಸೇರಲು ಸಹಾಯಮಾಡಿದವನು. ಮೂರ್ತಿಯ ಹತ್ತಿರವಿದ್ದ ಗಡಿಯಾರವನ್ನು ತನ್ನ ಗೆಳೆಯನೊಬ್ಬನಿಗೆ ಕೊಡಿಸಿ ನಾಲ್ವತ್ತೈದು ರೂಪಾಯಿ ಕೊಡಿಸಿದ. ಆ ಹಣದಲ್ಲಿಯೇ ಮೂರ್ತಿ ಕಾಲೇಜು ಫೀ ಕೊಟ್ಟು ಕೆಲವು ಪುಸ್ತಕಗಳನ್ನು ಕೊಂಡುಕೊಂಡಿದ್ದ. ಈಗಾ ಗಲೇ ಕಾಲೇಜಿಗೆ ಸೇರಿ ಎರಡು ತಿಂಗಳೂ ಆಗಿತ್ತು. ಅಷ್ಟರಲ್ಲೇ ಅವರಿಬ್ಬರ ಗೆಳೆತನವೂ ಗಾಢವಾಗಿತ್ತು. ಮೂರ್ತಿಗೆ ಶೇಷುವಿನಲ್ಲಿ ಕಂಡ ಹಿರಿಯ ಗುಣ ವೆಂದರೆ, ಅವನಿಗೆ ಶಂಕರು ಬೋಧಿಸಿದ್ದ ತತ್ವದ ಅನುಕರಣೆ! ಯಾರು ಏನೇ ಹೇಳಲಿ, ಯಾರು ಹೇಗೆ ಬೇಕಾದರೂ ಅಡ್ಡಿ ತರಲಿ, ನಿನಗೆ ಸತ್ಯವೆಂದು ತೋರಿ ದುದಕ್ಕಾಗಿ ಹೆಣಗು, ನಿನಗೆ ನೀನೇ ಗುರು, ನಿನಗೆ ನೀನೇ ಶತ್ರು; ನಿನ್ನ ಬಾಳನ್ನು ಉಳಿಸುವವನೂ ನೀನೇ, ಅಳಿಸುವವನೂ ನೀನೇ, ಎಂದು ಶಂಕರು

ಹೇಳಿದುದನ್ನು ಮೂರ್ತಿ ಒಪ್ಪಿ ಅನುಸರಿಸಿ ಆಚರಿಸುತ್ತಿದ್ದ. ಅದೇ ತತ್ವವನ್ನೇ ಶೇಷುವೂ ಅನುಸರಿಸಿದ್ದ! ಈ ಸಮಾನಭಾವನೆಯೂ ಅವರಿಬ್ಬರನ್ನೊಂದು ಗೂಡಿಸುವ ಅಂಟಾಯಿತು!

ಕಾಫಿ ಕುಡಿಯುತ್ತಾ ಮೂರ್ತಿಗೆ ಮತ್ತೊಂದು ಯೋಚನೆ ಬಂತು!

"ಶೇಷು, ಫ್ರೀಶಿಪ್ ಏನಾದೀತೋ ಗೊತ್ತಿಲ್ಲ ಫೀ ಮಾಫಾಗದಿದ್ದರೆ ಓದುವುದು ಅಸಾಧ್ಯ."

"ಆಗುತ್ತೆ ಬಿಡೋ, ನಿನಗೇನು ಆಗದೆ? ನಿಮ್ಮ ತಂದೆಯವರೇನೋ ಅದಾಗದಿದ್ದರೇ ಸಾಕು ಎಂದುಕೊಳ್ಳುತ್ತಿರಬಹುದು."

"ಅವರೇನುತಾನೇ ಮಾಡುವರೋ? ಎಲ್ಲಾ ಅವಳ ಕರಾಮತ್ತು. ಅದಿರಲಿ. ಆಗದೇ ಹೋದರೆ—" ಆಗದೇ ಹೋದರೆ! ಮುಂದೇನು? ಇಬ್ಬರಿಗೂ ತೋಚದು. ಶೇಷುವಿಗೆ ತನ್ನ ಫೀ ಕೊಡಲು ಹಣ ಕೇಳುವುದೇ ಪ್ರಯಾಸವಾಗಿತ್ತು. ಲಕ್ಷಾಧಿಕಾರಿಯ ದತ್ತಪುತ್ರ ಈಗ ಕೈಯಲ್ಲೊಂದು ಕಾಸೂ ಇಲ್ಲ! ಇನ್ನು ಮೂರ್ತಿಗೆ ಅವನೇನು ತಾನೇ ಹೇಳಬಲ್ಲ. ಏನು ತಾನೇ ಸಹಾಯ ನೀಡಬಲ್ಲ! ಇಬ್ಬರಿಗೂ ಏನೂ ತೋಚದು? ಒಬ್ಬರ ಮುಖವನ್ನೊಬ್ಬರು ಟಕಮಕ ನೋಡುತ್ತಾ ಕುಳಿತಿದ್ದರು. ಮೂರ್ತಿಯ ಮುಖದಲ್ಲಿ ಅಪಾರ ನೋವು ಕಾಣುತ್ತಿತ್ತು.

"ಶೇಷು, ನನ್ನ ಜನ್ಮದಲ್ಲಿ ಮುಂದೆ ಓದಲಾಗುವುದಿಲ್ಲವೋ ಏನೋ, ಹೋಗಲಿ—"

"ಇದೆಂತಹ ಮಾತು ಮೂರ್ತಿ! ನೀನೇ ಹೀಗೆಂದರೆ? ಸರಿಹೋಯ್ತು! ಇಷ್ಟೊಂದು ಅನುಭವ ಪಡೆದು, ಶಂಕರುವಿನಿಂದ ಕಲಿತ ಪಾಠ ಇಷ್ಟೇನೇ? ನಿನ್ನ ಧೈರ್ಯ ಸ್ಥೈರ್ಯ ಇಷ್ಟಕ್ಕೇ ಆಗಿಹೋಯಿತೇನು? ಇದೇನೇ, ನೀನು ನಡೆಸುವ ಧ್ಯೇಯಸಾಧನೆ?"

ಶಂಕರುವಿನ ಮೂರ್ತಿ, ಮೂರ್ತಿಯ ಮನಸ್ಸಿನ ಮುಂದೆ ಥಿಗ್ಗನೆದ್ದು ನಿಂತಿತು. ಅದೇ ವರ್ಚಸ್ಸು, ಕಳೆ. ಅದೇ ಖಾದಿವಸ್ತ್ರ, ಎಲ್ಲಾ ಅದೇ ರೂಪ; ಶಂಕರು ಏನಾದನೋ? ವೈಯಕ್ತಿಕ ಸತ್ಯಾಗ್ರಹದಲ್ಲಿ ಬಿಡುಗಡೆಯಾದ ಮೇಲೆ ಏನುಮಾಡಿದನೋ? ಅವನ ಮಾತು ಮತ್ತೆ ನೆನಪಾಯಿತು.

"ಇಲ್ಲ ಶೇಷು, ಹಾಗಲ್ಲ; ಒಂದೊಂದು ಬಾರಿ ಬಹಳ ಬೇಸರವಾಗುತ್ತೆ. ಎಲ್ಲಾ ಹೋಯಿತು! ಬರಿಯ ನಿರಾಸೆಯೇ ಜೀವನವೇ ಎನಿಸಿಬಿಡುತ್ತೆ".

"ಜೀವನ ನಿರಾಸೆಯಲ್ಲ; ಆ ನಿರಾಸೆಯನ್ನು ತೊಡೆದುಹಾಕುವ ಹಟ ವಿದೆಯಲ್ಲ ಅದು ನಿಜವಾದ ಜೀವನ! ನೀನೇ ಹೇಳುತ್ತಿದ್ದೆ ಶಂಕರು ಹೇಳಿದ ನೆಂದು. ನಿರಾಸೆಯಿಂದ ಬಾಳು ಕ್ರಾಂತಿಕಾರಿಯಾಗುತ್ತದೆಂದು. ನೋಡು, ಯೋಚನೆಮಾಡು, ನಿನ್ನ ಬಾಳಿನಲ್ಲಿ ನೀನು ಕ್ರಾಂತಿ ಹೃದಯಿಯಾಗಿಲ್ಲದಿದ್ದರೆ ಸ್ವತಂತ್ರಪ್ರಿಯನಾಗದಿದ್ದರೆ ನೀನಿದುವರೆಗೂ ಹೀಗಿರಲಾಗುತ್ತಿತ್ತೇನು? ನನ್ನಿಂದಲಂತೂ ಮೇಣದ ಮುದ್ದೆಯಾಗಿರಲು ಸಾಧ್ಯವೇ ಇಲ್ಲ. ಕಂಚಿನಂತೆ ಕೆಳಗುರುಳಿ ಬಾಳು ಚೂರುಚೂರಾದರೂ ಸರಿ. ಮೇಣದಂತೆ ಮಾಡುವವನ ಕೈ ತೋರಿದಂತೆ ರೂಪಿತವಾಗಲು ನಾನೊಪ್ಪಲಾರೆ. ಕಷ್ಟ ಬರುವುದು, ಅವನ್ನಿದುವರೆಗೂ ಎದುರಿಸಿದ್ದೀಯೆ! ಈಗ ಅದಕ್ಕೆ ತಲೆ ತಗ್ಗಿಸುವೆಯೇನು? ಚೀನದಲ್ಲೊಂದು ಗಾದೆಯಿದೆ ಗೊತ್ತೇ?"

ಮೂರ್ತಿ ಮೌನವಾಗಿದ್ದ. ಶೇಷು ಒಂದು ಬೊಟ್ಟು ಕಾಫಿ ಹೀರಿ ಮತ್ತೆ ಮುಂದುವರಿಸಿದ:

"ಪ್ರವಾಹದೊಂದಿಗೆ ಹೋಗಲೇನೂ ಕಷ್ಟವಿಲ್ಲ. ಸತ್ತ ಕತ್ತೆ ಕೂಡ ಪ್ರವಾಹದೊಂದಿಗೆ ತೇಲುತ್ತದೆ; ಆದರೆ ಪ್ರವಾಹದ ವಿರುದ್ಧ ನಡೆಯಲು, ಈಜಲು, ಧೈರ್ಯವಾದಿ ಮನುಷ್ಯನೇ ಆಗಬೇಕು ಎಂದಿದೆ ಗಾದೆ. ಕಷ್ಟಕ್ಕೆ ತಲೆ ತಗ್ಗಿಸಿ ಸಾಷ್ಟಾಂಗ ನಮಸ್ಕಾರ ಮಾಡುವುದು ಹೇಡಿತನ. ಕಷ್ಟ ಅಲೆಯಮೇಲೆ ಅಲೆಯಂತೆ ಬಂದು ಅಪ್ಪಳಿಸಿದರೂ ಅಲುಗದೆ ಎದೆಗಾರಿಕೆಯಿಂದ ನಡೆಯುವುದಿದೆಯಲ್ಲ, ಅದು ನಿಜವಾದ ಮನುಷ್ಯನ ಗುರುತು. ನೀನಿದು ವರೆಗೂ ಆ ರೀತಿ ಬಂದು, ಆ ಬಾಳು ನಡೆಸಿ ಈಗ ಮುಳುಗುವೆಯೇನು?"

ಮೂರ್ತಿ ಮನೆಗೆ ಬಂದಾಗ ಮಲತಾಯಿ ಮನಬಂದಂತೆ ರೇಗಿದರು. ಕಿಟ್ಟಣ್ಣನಿಗೆ ಮೈ ಬೆಚ್ಚಗಾಗಿತ್ತು. ತಕ್ಷಣವೇ ಡಾಕ್ಟರ ಬಳಿಗೆ ಹೋಗಿ ಔಷಧಿ ತರಹೇಳಿದರು. ಮೂರ್ತಿ ಬಟ್ಟೆ ಹಾಕಿಕೊಂಡು ಹೊರಡುತ್ತಿದ್ದಂತೆ ಅಡಿಗೆಮನೆಯಿಂದ ಗೊಣಗಿದರು ಲಕ್ಷ್ಮಮ್ಮ. "ನಮ್ಮ ದುರ್ದೈವದಂತೆ ಯಾವ ಹೊತ್ತಿನಲ್ಲಿ ಕಾಲಿಟ್ಟನೋ ಶನಿ, ಕಿಟ್ಟಣ್ಣನಿಗೆ ಬಂತು ಒಂದಲ್ಲ ಒಂದು; ಮೂರು ತಿಂಗಳಿಂವ ಒಂದು ದಿನವಾಗಲಿ, ಪಾಪ, ಮಗುವಿಗೆ ಮೈ ಚೆನ್ನಾಗಿಲ್ಲ. ಇಲ್ಲ ಜ್ವರ, ಇಲ್ಲ ಛಳಿ, ಇಲ್ಲ ಇದು ಅಥವಾ ಅದು; ಏನು ಮಾಡಿಕೊಂಡ. ಸಾಯಲಿ ನಾನು? ಸಾಕಪ್ಪಾ ಸಾಕು ಎಷ್ಟು ಹೆಣಗಾಡೋದು"

ಮೂರ್ತಿ ತೆಪ್ಪಗೆ ಆಸ್ಪತ್ರೆಗೆ ಹೋಗಿ ಔಷಧಿ ತಂದುಕೊಟ್ಟು ಕಾಲೇಜಿಗೆ ಹೊರಟು ಹೋದ ಶೇಷುವಿನ ಜತೆಯಲ್ಲಿ.

ಸಂಜೆ ಮೂರ್ತಿ ಕಾಲೇಜಿನಿಂದ ವಿಷಣ್ಣನಾಗಿ ಹಿಂತಿರುಗಿದ. ಮುಖ ಪೂರ್ಣವಾಗಿ ಬಾಡಿತ್ತು. ಕೊಂಚವಾದರೂ ಕಳೆಯಿರಲಿಲ್ಲ. ಶೇಷು ಮಧ್ಯಾಹ್ನ ಬೇಗ ಬಂದವನು ಅವನಿಗಾಗಿ ಕಾದಿದ್ದ.

"ಏನಾಯಿತೋ ಮೂರ್ತಿ?"

"ಏನಾಗುವುದು, ಗೊತ್ತೇ ಇದೆ; ಕಾಲೇಜು ಬಿಡಬೇಕು ಶೇಷು!"

"ಕಾಲೇಜು ಬಿಡಬೇಕು?"

"ಹೂಂ! ಫ್ರೀಶಿಪ್ ಪಟ್ಟಿ ಹಾಕಿದ್ದಾರೆ; ನನಗೆ ಅದರಲ್ಲಿ ಸ್ಥಾನವಿಲ್ಲ. ಅರ್ಥವಾಗಿದೆ".

"ನಿಮ್ಮ ಪ್ರಿನ್ಸಿಪಾಲರನ್ನು ನೋಡಿದ್ದೆಯೇನು?"

"ನೋಡಿದ್ದೆ, ಅವರೇನು ಹೇಳುತ್ತಾರೆ. ಮೊದಲು ಆ ವಿಷಯವಾಗಿ ಯಾರನ್ನೂ ನೋಡಲಾಗುವುದಿಲ್ಲವೆಂದರು. ಆಮೇಲೆ ಬಹಳ ಹೊತ್ತು ಕಾದು ಮತ್ತೆ ಚೀಟಿ ಕಳಿಸಿದಾಗ ನೋಡಿದುದೂ ಆಯಿತು. ಸಮಿತಿಯ ತೀರ್ಮಾನ ಅದು, ನಾನೇನುಮಾಡಲೂ ಸಾಧ್ಯವಿಲ್ಲ, ಎಂದರು. ನಾನು ನನ್ನೆಲ್ಲ ಕಷ್ಟವನ್ನು ತಿಳಿಸಿದೆ. ಆದರೆ ತಮ್ಮಿಂದೇನೂ ಸಾಧ್ಯವಿಲ್ಲವೆಂದು ಬಿಟ್ಟರು; ಇನ್ನು ಒಂದು ವಾರದಲ್ಲಿ ೩ ತಿಂಗಳ ಫೀ ಕಟ್ಟಬೇಕು; ಇಲ್ಲದಿದ್ದರೆ ಕಾಲೇಜು ಬಿಡಬೇಕು". ಮೂರ್ತಿಯ ಕಣ್ಣಿನಲ್ಲಿ ನೀರುತುಂಬಿ ತುಳುಕುತ್ತಿತ್ತು. ಶೇಷು ಯೋಚನೆಯಲ್ಲಿ ಮುಳುಗಿದ. ಆದರೆ ಏನುತಾನೇ ಮಾಡಲಾದೀತು?

"ನಿಮ್ಮ ತಂದೆಯನ್ನೊಮ್ಮೆ ಕೇಳಿನೋಡು ಮೂರ್ತಿ".

"ಏನು ಶೇಷು, ನಮ್ಮ ತಂದೆ ಆಗಲೇ ಹೇಳಿಬಿಟ್ಟಿದ್ದಾರೆ, ತಮ್ಮಿಂದೇನೂ ಆಗದೆಂದು. ಇನ್ನು ಈಗ ಸಹಾಯಮಾಡುವರೇ?"

"ತಾಳು, ನಾನು ನಾಳೆ ನಮ್ಮ ಉಪಾಧ್ಯಾಯರಿಂದ ಪ್ರಿನ್ಸಿಪಾಲರಿಗೆ ಹೇಳಿಸುತ್ತೇನೆ. ಅದರಿಂದೇನಾದರೂ ಆದೀತೋ ಏನೋ".

"ಏನೋಪ್ಪ, ಮನೆಗೆ ಹೋಗಿಬರುತ್ತೇನೆ".

"ಮಗು ಸಾಯುತ್ತಿದ್ದರೆ ನೋಡುತ್ತಾ ನಿಂತಿದಾನೆ. ಸಂತೋಷಪಡು ಸುಖಪಡು, ನಗು, ಹೋಗಿ ಹಾಲುಕುಡಿ ಮಗು ಹೋಯಿತೆಂದು—" ಎಂದರಚಿಕೊಳ್ಳಲಾರಂಭಿಸಿದರು ಲಕ್ಷಮ್ಮ. ರಾಮಣ್ಣ ಮಗುವಿಗೆ ಚಿಟಕೆ ಹಾಕಲು ಯತ್ನಿಸುತ್ತಿದ್ದರು, ಇದ್ದಕ್ಕಿದ್ದಂತೆ ಮಗುವಿನ ಸೆಳೆತ ನಿಂತಿತು. ಮೈಕೈ ತಣ್ಣಗಾಯಿತು. ಲಕ್ಷಮ್ಮ ಮಗುವನ್ನು ಭದ್ರವಾಗಿ ಅಪ್ಪಿಕೊಂಡರು. ರಾಮಣ್ಣ ದಿಗ್ಭ್ರಮೆಯಿಂದ ತಲೆಯ ಮೇಲೆ ಕೈಯಿಟ್ಟು ಕುಳಿತಿದ್ದರು. ಎದುರಿಗೇ ಮಗುವಿಗೆ ಚಿಟಕೆ ಹಾಕಲು ಹೊತ್ತಿಸಿದ್ದ ಹರಳೆಣ್ಣೆಯ ದೀಪದಿಂದ ಹೊಗೆ ಸುರುಳಿ ಸುರುಳಿಯಾಗಿ ಹೊರಡುತ್ತಿತ್ತು. ಪಕ್ಕದಲ್ಲೇ ಒಂದೆರಡು ಚೂರು ಬಳೆ ಬಿದ್ದಿದ್ದುವು. ಹಾಸಿಗೆಯ ಪಕ್ಕದಲ್ಲಿ ಔಷಧಿಯ ಸೀಸೆ ಕೆಳಗುರುಳಿತ್ತು. ಮೂರ್ತಿಗೆ ದುಃಖ ಉಮ್ಮಳಿಸಿ ಬಂತು, ತನ್ನ ದುಃಖ ಮರೆತು ಮಗುವಿಗಾಗಿ ಮನಸ್ಸು ಮಿಡುಕಿತು. ಮಲತಾಯಿ ಹೇಗಾದರೇನು? ಅವನೂ ತನ್ನ ತಮ್ಮನಲ್ಲವೇ, ಕರುಳು ಕಿತ್ತು ಕೈಗೆ ಕೊಟ್ಟಂತಾಯಿತು. ಅವಳೂ ತಾಯಿಯಲ್ಲವೇ? ಆದರೆ ತಾನು ಹೇಗೆ ಸಮಾಧಾನ ಹೇಳಲು ಸಾಧ್ಯ, ಸಮಾಧಾನ ಹೇಳಿದರೂ ಉಪಯೋಗವಾಗುವುದೂ ಸಾಧ್ಯವೇ? ಮೂರ್ತಿಗೇನೂಮಾಡಲು ತೋಚದೆ ಮೆಲ್ಲನೆ ಮನೆಯಿಂದ ಹೊರಬಿದ್ದ.

"ಶೇಷು, ಕಿಟ್ಟಣ್ಣನ ಜೀವ ಮುಗಿಯಿತು—"

"ಏನೆಂದೆ?"

"ಮಗು ತೀರಿಕೊಂಡಿತು."

"ಅಯ್ಯೋ ಪಾಪ!"

"ಅವಳಿಗೆಷ್ಟು ಕಷ್ಟವಾದೀತೋ. ಒಂದೇ ಮಗು, ಬಹಳ ಪ್ರೀತಿಸುತ್ತಿದ್ದರು. ಅದರಲ್ಲಿಯೇ ತಮ್ಮ ಪ್ರಾಣವನ್ನಿಟ್ಟಿದ್ದರು. ಈಗ ಅದೂ ಹೋಯಿತು. ನಮ್ಮ ತಂದೆಗೆ ಎಷ್ಟೊಂದು ದುಃಖವೋ, ನೋವೋ—"

"ಏನು ಮಾಡಲಾದೀತು ಮೂರ್ತಿ, ಎಲ್ಲರೂ ಒಂದಲ್ಲ ಒಂದು ದಿನ ಪ್ರೀತಿಯ ವಸ್ತುಗಳನ್ನು ಕಳೆದುಕೊಳ್ಳಲೇಬೇಕು. ಎರಡು ದಿನ ಒಂದಿಗಿದ್ದು ಮುಂದೆ ಪಯಣ ಹೊರಡುತ್ತೇವೆ. ನೀನಾಪದ್ಯ ಕೇಳಿಲ್ಲವೇ—

'ನಾಲ್ಕು ದಿನಗಳ ಜೀವ, ಒಂದಿರುಳ ಪ್ರೇಮ
ಮುಂದೆಲ್ಲಿಗೋ ಪಯಣ, ಎಂದೊ ವಿಲಸ!'

ಹಾಗೆಯೇ ಎರಡು ದಿನ ಜತೆಗಿರುವೆವು, ಮತ್ತೆ ಬೇರೆಯಾಗಲೇ ಬೇಕು."

"ಸರಿ, ಶೇಷು. ತಾಯಿಯ ಕರುಳಿಗೆ ಈ ಸಮಾಧಾನದ ಮಾತೆಲ್ಲ ಒಗ್ಗುವುದಿಲ್ಲ. ಅಗಲಿಕೆಯ ಕಾವಿನಲ್ಲಿ ಈ ತತ್ವದ ಮಂಜು ಕರಗಿ ನೀರಾಗುತ್ತದೆ. ನಾನು ಸರುವನ್ನು ನೆನೆದು ಎಷ್ಟು ಸಂಕಟಪಟ್ಟೆ ಆಗ ಗೊತ್ತೇ? ಈಗ ಹೇಳಿ ಏನೂ ಪ್ರಯೋಜನವಿಲ್ಲ"—ಮೂರ್ತಿ ಸಿಟ್ಟುಸಿರಿಟ್ಟ!

"ಹೋಗಲಿ, ಈಗೇನುಮಾಡೋಣ."

"ಮಾಡುವುದೇನು ಬಂತು? ಏನುತಾನೇ ಮಾಡಲು ಸಾಧ್ಯ. ಅಣ್ಣನನ್ನು ಕೇಳುವುದಂತೂ ಅಸಾಧ್ಯದ ಕೆಲಸ. ನೋಡು, ನಿಮ್ಮ ಅಧ್ಯಾಪಕರೇನಾದರೂ ಹೇಳಿ ಏನಾದರೂ ಆದರೆ ಆಗಲಿ, ಇಲ್ಲದಿದ್ದರೆ ಕಾಲೇಜಿಗೆ ಶರಣು—"

"ನೋಡೋಣ,"

ಮೂರ್ತಿ ಕೊಂಚ ಹೊತ್ತಾದ ಮೇಲೆ ಮನೆಗೆ ಹಿಂತಿರುಗಿದ. ಲಕ್ಷಮ್ಮನವರು ಹುಚ್ಚಿಯಂತೆ ತಲೆಕೆದರಿ ಕುಳಿತಿದ್ದರು. ಸುತ್ತಮುತ್ತಣ ಮನೆಗಳ ಹೆಂಗಸರೆಲ್ಲಾ ಅವರ ಬಳಿ ಕುಳಿತು ಸಮಾಧಾನ ನೀಡಲು ಯತ್ನಿಸುತ್ತಿದ್ದರು. ಆದರೆ ಅದರಿಂದೇನೂ ಉಪಯೋಗವಿರಲಿಲ್ಲ, ದೃಷ್ಟಿಯೆಲ್ಲೋ ನಟ್ಟಿರುತ್ತಿತ್ತು. ಮಾತು ಒಮ್ಮೆ ಝರಿಯಂತೆ, ಮತ್ತೆ ತುಂತುರುವಿನಂತೆ.

"ಅಯ್ಯೋ ನನ್ನ ಚಿನ್ನ, ಎಷ್ಟು ಚೆನ್ನಾಗಿ ಆಡುತ್ತಿದ್ದೆ, ಇನ್ನೂ ಮೂರು ವರ್ಷ ಅಂದರೆ....ಎಷ್ಟು ಚೆನ್ನಾಗಿತ್ತು, ಎಷ್ಟು ಬುದ್ಧಿ, ಹೋಗಿಬಿಟ್ಟತೇ—"

ಲಕ್ಷಮ್ಮ ತಲೆ ತಲೆ ಚಚ್ಚಿಕೊಂಡರು.

"ಏನು ಮಾಡೋದು ಲಕ್ಷಮ್ಮನವರೇ, ಸಹಿಸಿಕೊಳ್ಳಬೇಕು."

"ಎಲ್ಲಾ ದೈವಯತ್ನ, ನಮ್ಮ ಕೈಯಲ್ಲೇನಿದೆ ಹೇಳಿ, ಲಕ್ಷಮ್ಮನೋರೆ."

"ಏನುತಾನೇ ಹೇಳೋದು, ದೇವರು ಕೊಟ್ಟ, ಅವನೇ ತೆಗೆದುಕೊಂಡ.'

ಹೀಗೆಯೇ ಹೆಂಗಸರೆಲ್ಲ ಒಂದಲ್ಲ ಒಂದು ರೀತಿ ಮಾತನಾಡಿದರು. ಇದ್ದವರೆಲ್ಲ ಒಂದಲ್ಲ ಒಂದು ವಿಧದಲ್ಲಿ ಸಮಾಧಾನ ಮಾಡಲು ಪ್ರಯತ್ನ ನಡೆಸುತ್ತಿದ್ದರು. ಆದರೆ ಎಲ್ಲವೂ ವಿಫಲವಾಗಿತ್ತು. ಲಕ್ಷಮ್ಮನವರ ದುಃಖ ತಗ್ಗಲಿಲ್ಲ.

ಒಂದೇ ಸಮನಾಗಿ ಅಳುತ್ತಿದ್ದರು. ಇದ್ದಕ್ಕಿದ್ದಂತೆ ಮೂರ್ತಿಯ ಮುಖ ಕಂಡೊಡನೆ ಲಕ್ಷಮ್ಮನವರು ಉಗ್ರವಾದರು.

"ಚಂಡಾಲ, ರಾಕ್ಷಸ, ಪಿಶಾಚಿ, ಬಂದೆಯಾ, ಬಾ, ನನ್ನನ್ನು ತಿಂದು ಬಿಡು. ತಮ್ಮನನ್ನು ತಿಂದುಕೊಳ್ಳುವುದಕ್ಕಾಗಿಯೇ ಬಂದೆ, ಶನಿಯ ಹಾಗೆ ವಕ್ರಿಸಿದೆ. ಈಗ ನನ್ನನ್ನೂ ತಿಂದುಬಿಡು, ಹೂಂ, ತಿಂದುಬಿಡು."

ಮೂರ್ತಿ ತಲೆತಗ್ಗಿಸಿ ನಿಂತಿದ್ದ.

"ಯಾಕೆ ನಿಂತೆ, ಯೋಚನೆಯೇನು, ಇನ್ನೂ ಏನೇನು ನುಂಗಲಿ ಎಂದು. ನನ್ನನ್ನು ನುಂಗು, ಅವರನ್ನು ನುಂಗಿಬಿಡು. ಆಮೇಲೆ ನೀನೊಬ್ಬನೇ ಹಾಯಾಗಿರು. ಮಗು ಹೋದ, ಹಾಲು ಕುಡಿ, ನನ್ನನ್ನು ತಿಂದು ಮೊಸರು ಕುಡಿ, ಅವರನ್ನು ನುಂಗಿ ಜೇನುತುಪ್ಪ ತಿನ್ನು." ಲಕ್ಷಮ್ಮನವರ ಈ ಹುಚ್ಚು ಕೋಪದಿಂದ ಹೆಂಗಸರೆಲ್ಲಾ ಗಾಬರಿಯಾದರು. ಒಬ್ಬಿಬ್ಬರು ಹಿಮ್ಮೆಟ್ಟಿದರು. ಆದರೆ ಲಕ್ಷಮ್ಮನವರೇಳದಂತೆ ಅವರನ್ನು ಭದ್ರವಾಗಿ ಹಿಡಿದಿದ್ದರು. ಕಾವೇರಮ್ಮನವರು ಮೂರ್ತಿಯನ್ನು ದುರುಗುಟ್ಟಿಕೊಂಡು ನೋಡಿದರು. ಮೂರ್ತಿಗೆ ಅಲ್ಲಿರುವುದು ಸರಿಯಲ್ಲವೆನಿಸಿ ಹೊರಹೊರಟ. ಲಕ್ಷಮ್ಮನವರು ಮಾತು ಮಾತ್ರ ನಿಲ್ಲಿಸಲೇ ಇಲ್ಲ. ಒಂದೇ ಸಮನಾಗಿ ಶಪಿಸಿದರು. ಹೊಸಲು ದಾಟಿದಂತೆ ಮೂರ್ತಿಗೆ ಕೇಳಿದ ಮಾತು, "ತೊಲಗು! ಶನಿ! ಹಾಳಾಗಿ ಹೋಗು!"

ಮೂರ್ತಿಯ ಮುಖ ಗಡುಸಾಯಿತು, ಮಗ ಸತ್ತ ದುಃಖ ತನ್ನ ಮೇಲಿನ ಕೋಪವಾಗಿತ್ತು. ಆದರೆ ಅದಕ್ಕೂ ಮಿತಿಯಿದೆ ಎನಿಸಿತು. ಎದುರಿಗೆ ರಾಮಣ್ಣ ಸಿಕ್ಕಿದರು. ರಾಮಣ್ಣನವರೊಂದಿಗೇ ಮೂರ್ತಿಯೂ ಮನೆಗೆ ಹಿಂದಿರುಗಿದ, ಅವರಿಬ್ಬರೂ ಒಳಹೊಕ್ಕೊಡನೆಯೇ ಹೆಂಗಸರೆಲ್ಲ ಎದ್ದು ಹೊರಟುಹೋದರು.

೯

"ಶೇಷು, ಶೇಷು."

ಶೇಷು ಬಾಗಿಲು ತೆರೆದ. ರಾತ್ರಿ ಅಷ್ಟು ಹೊತ್ತಿನಲ್ಲಿ ಮೂರ್ತಿ ಬಂದಾನೆಂದು ಎಣಿಸಿರಲಿಲ್ಲ. ದೀಪದ ಬೆಳಕು ತೆರೆದ ಬಾಗಿಲ ಮೂಲಕ ಮೂರ್ತಿಯ ಮುಖದ ಮೇಲೆ ಬಿದ್ದು, ಮುಖದ ದುಗುಡನ್ನು ಬಯಲುಗೊಳಿಸಿತು. ಮೂರ್ತಿ ಒಂದೆರಡು ಬಟ್ಟೆಗಳನ್ನು ಕೈಯಲ್ಲಿ ಹಿಡಿದಿದ್ದ.

"ಶೇಷು, ಈವತ್ತು ರಾತ್ರಿ ಇಲ್ಲಿಯೇ ಮಲಗಬೇಕು ನಾನು."

"ಅದಕ್ಕೇನು, ಮಲಗಿಕೊ."

ಮೂರ್ತಿಗೆ ತನ್ನ ಹಾಸಿಗೆಯಿಂದಲೇ ಒಂದು ಹರಿದ ಜಮಖಾನ, ಒಂದು ಹರುಕಲು ತುಂಡು ಕಂಬಳಿ ತೆಗೆದುಕೊಟ್ಟ. ಪೋಲೀಸ್ ಲಾಕಪ್ಪಿನಲ್ಲಿ ಖೈದಿಗಳಿಗೆ ಕೊಡುವ ಬಟ್ಟೆಯ ಹಾಗಿತ್ತು.

"ಮೂರ್ತಿ, ನನ್ನ ಹತ್ತಿರ ಬೇರೆ ಯಾವ ಬಟ್ಟೆಯೂ ಇಲ್ಲ, ಇರುವುದಿಷ್ಟೇ."

"ಅಯ್ಯೋ ಪರವಾಗಿಲ್ಲ, ಶೇಷು, ಈವತ್ತು ಮನೆಯಲ್ಲಿ ದೊಡ್ಡ ಅವಾಂತರ." ಎನ್ನುತ್ತಾ ಎಲ್ಲವನ್ನೂ ತಿಳಿಸಿದ.

"ನಾನೂ ಅಣ್ಣನೂ ಒಳಹೊಕ್ಕೊಡನೆ ಹೆಂಗಸರೆಲ್ಲಾ ಹೊರಟು ಹೋದರು. ನಿಮ್ಮ ಅಜ್ಜಿ ಕಾವೇರಮ್ಮನವರೂ ಗೊಣಗಿಕೊಂಡು ನನ್ನನ್ನೇ ದುರುಗುಟ್ಟಿಕೊಂಡು ಹೋದರು. ನಾವಿಬ್ಬರೂ ಒಳಹೊಕ್ಕಾಗ, ಅಣ್ಣನನ್ನು ಕಂಡೊಡನೆಯೇ ಆಕೆಯ ದುಃಖ ಕಟ್ಟೆಯೊಡೆದು ಬಂತು. ನೆಲದ ಮೇಲೆ ಬಿದ್ದು ಹೊರಳಾಡಿದರು. ಮೈಯೆಲ್ಲಾ ಪರಚಿಕೊಂಡರು. ನನಗೂ ಬಹಳ ದುಃಖವಾಯಿತು ಶೇಷು, ಎಷ್ಟಿದ್ದರೂ ಆಕೆಯದು ತಾಯಿಯ ಕರುಳು. ಒಬ್ಬನೇ ಒಬ್ಬ ಪ್ರೀತಿಯ ಮಗ. ಅದೂ ಇನ್ನೂ ಮೂರೇ ವರ್ಷದ ಮಗನನ್ನು ಕಳೆದುಕೊಂಡ ತಾಯಿಯ ದುಃಖ ಅತ್ಯಪಾರ. ಆದರೆ ನನಗೆ ಆಕೆಯನ್ನು ಸಮಾಧಾನಪಡಿಸಲು ಸಾಧ್ಯವಿರಲಿಲ್ಲ. ಅಣ್ಣನೂ ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಅಳು ವಿಪರೀತವಾಯಿತೇ ಹೊರತು ತಗ್ಗಲಿಲ್ಲ. ಇದ್ದಕ್ಕಿದ್ದಂತೆ ಆಕೆಯ ಕಣ್ಣು ನನ್ನಮೇಲೆ ಬಿತ್ತು. ಮತ್ತೆ ಅದೇ ಹುಚ್ಚಾಟ ಮರುಕಳಿಸಿತು. ಮನಬಂದಂತೆ ಕುಣಿದರು, ಬೈದರು, ನೆಲದ ಮೇಲೆಲ್ಲ ಹೊರಳಾಡಿದರು. ಅದನ್ನು ನೋಡಲಾರದೆ ಅಣ್ಣ ನನ್ನನ್ನು ಕರೆದು "ನೀನೀಗ ಇಲ್ಲಿಂದ ಹೊರಟು ಹೋಗು. ಅವಳಿಗೆ ಕೊಂಚ ಸಮಾಧಾನವಾದ ಮೇಲೆ ಬಾ" ಎಂದರು. ನಾನೂ ಯೋಚಿಸಿದೆ. ಕೊನೆಗೆ ಹೇಗೊ ನೋಡೋಣವೆಂದುಕೊಂಡು ಒಪ್ಪಿ ಬಾಗಿಲು ತೆರೆದು ಹೊರಗೆ ಕಾಲಿಟ್ಟೆ. ಇನ್ನೂ ಒಂದು ಹೆಜ್ಜೆ ಮುಂದಿಕ್ಕುವುದರಲ್ಲಿಯೇ ನನ್ನ ಬಟ್ಟೆಗಳು ಒಂದಾದ ಮೇಲೊಂದು ನನ್ನ ಮೇಲೆಸೆಯಲ್ಪಟ್ಟವು. ಹಾಗೆಯೇ ಅಲ್ಲಿನ ಕೆಲಪುಸ್ತಕಗಳೂ ಕೂಡ. ಆಕೆ ಜೋರಾಗಿ

ಅರಚಿಕೊಳ್ಳುತ್ತಿದ್ದರು: "ತೊಲಗು, ಹಾಳಾಗಿ ಹೋಗು, ಮತ್ತೆ ಕಾಲಿಟ್ಟೀಯ, ಮೂದೇವಿ" ಎಂದು. ನಾನು ತೆಪ್ಪಗೆ ಬಂದೆ" ಮೂರ್ತಿ ಕೊಂಚಕಾಲ ಉಸಿರು ತೆಗೆದುಕೊಳ್ಳಲು ಮೌನವಾಗಿ ಕುಳಿತ. ಶೇಷುವಿನ ತಲೆ ಸಿಡಿಯುತ್ತಿತ್ತು.

"ಹಾಗಾದರೆ."

"ಹೌದು, ಶೇಷು. ನನಗೂ ಮನೆಗೂ ಋಣಾನುಬಂಧ ತೀರಿದಂತೆಯೇ ಎಂದು ತೋರುತ್ತದೆ. ಏನೋ ನೋಡೋಣ, ಬೆಳಗ್ಗೆ ಒಂದು ಬಾರಿ ಅಣ್ಣ ನನ್ನು ನೋಡಿಬರುತ್ತೇನೆ ಏನೂ ಆಗದಿದ್ದರೆ"

"ನನ್ನ ಜತೆಗಿರುವೆಯಂತೆ, ಪರವಾಗಿಲ್ಲ."

"ನಿಮ್ಮ ಅಜ್ಜನ ಕೋಪ."

"ಅದು ಇಲ್ಲದ ಕಾಲ ಯಾವುದು ನೀನೇ ಹೇಳು? ಮಾತುಮಾತಿಗೂ ಕೋಪಗೊಳ್ಳುವವರ ಕೋಪಕ್ಕೆ ಬೆಲೆಕೊಟ್ಟರೆ ಆದೀತೇನು?"

ಮೂರ್ತಿ ಮಲಗಿದ, ಶೇಷು ದೀಪ ಆರಿಸಿದ ಒಬ್ಬರಿಗಾದರೂ ನಿದ್ರೆ ಬರಲಿಲ್ಲ. ಕಿಟಕಿಯ ಹೊರಗೆ ಬೀದಿಯ ದೀಪದ ಪ್ರಕಾಶ ಪ್ರಬಲವಾಗಿತ್ತು. ಕೊಠಡಿಯೊಳಕ್ಕೆ ಒಂದೊಂದು ಕಿರಣ ಒಳಹೊಕ್ಕು ಒಳಗಿನದೆಲ್ಲ ಮಸಕು ಮಸಕಾಗಿ ಕಾಣುತ್ತಿತ್ತು. ಮೂರ್ತಿಯ ಮೈಮೇಲಿದ್ದ ಹರುಕು ಕಂಬಳಿ, ಶೇಷುವಿನ ಮೈಮೇಲಿದ್ದ ಹರುಕು ಬೆಡ್‌ಷೀಟುಗಳ ಅಡಿಯಿಂದ ನಿಟ್ಟುಸಿರು ಹೊರಳಿ ಹೊರಳಿ ಹೊರಬರುತ್ತಿತ್ತು.

ಬೆಳಗ್ಗೆ ರಾಮಣ್ಣನನ್ನು ನೋಡಲು ಹೋದ ಮೂರ್ತಿ ಹಿಂದಿರುಗು ವುದನ್ನೇ ಕಾದಿದ್ದ ಶೇಷು; ಫಲಿತಾಂಶ, ಮೊದಲೇ ಊಹಿಸಿದ್ದರು. ಅದೇನೋ ಹೇಗೋ, ಅವರಿಗೆ ಹೀಗೆಯೇ ಆದೀತೆಂದು ಅನಿಸಿತ್ತು. ಹಾಗೇಯೇ ಆಗಿಯೂ ಆಯಿತು!

"ಹುಂ. ಏನಂದರು?"

"ಏನನ್ನುವುದು, ಗೊತ್ತೇ ಇದೆ. ನೀನಿಲ್ಲಿದ್ದರೆ ಅವಳ ಪ್ರಾಣ ಹೋಗಿಯೇ ತೀರುವುದು. ಮನೆಬಿಟ್ಟು ಹೊರಟುಹೋಗು, ಬೇಕಾದರೆ ಚಿಕ್ಕ ಪ್ಪನ ಮನೆಗೇ ಮತ್ತೆ ಹೊರಟುಹೋಗು ಎಂದರು."

"ಚಿಕ್ಕಪ್ಪನ ಮನೆಗೆ? ಮತ್ತೆ?"

"ಹೂಂ, ಅವರಂದ ಮಾತು ಅದು. ಆದರೆ ಆ ಲೋಲುಪ ಜೀವನಕ್ಕೆ ಮತ್ತೆ ಹಿಂದಿರುಗುವುದು ಸಾಧ್ಯವೇ, ಶೇಷು? ನನ್ನ ಮನಸ್ಸಂತೂ ಒಪ್ಪುವುದಿಲ್ಲ. ಎಷ್ಟೇ ಕಷ್ಟಪಟ್ಟರೂ ಪರವಾಗಿಲ್ಲ. ಮತ್ತೆ ಆ ಬಾಳು ಬೇಡ."

"ಮುಂದೆ—"

"ಮುಂದೆ, ಒಂದೊಂದು ಬಾರಿ ಅನಿಸುತ್ತೆ ಶೇಷು, ನಮ್ಮಮ್ಮ ಇದ್ದಿದ್ದರೆ, ನಮ್ಮಮ್ಮ ಇದ್ದಿದ್ದರೆ—ಹೀಗೆಲ್ಲಾ ಆಗುತ್ತಿತ್ತೇ. ನಾನೀರೀತಿಯಲ್ಲಿ ಕಷ್ಟಪಡಬೇಕಾಗುತ್ತಿತ್ತೇ ಎಂದು, ಅಳು ಬರುತ್ತದೆ. ಆದರೆ ಇದೇ ಬಾಳು. ಇದನ್ನೇ ನಾವು ಬಾಳಬೇಕು, ಬದಲಾಯಿಸಬೇಕು ಎನ್ನುವ ಕೆಚ್ಚು ಬಂದು ಅಳಲನ್ನು ದೂಡಿಬಿಡುತ್ತದೆ."

"ನಿಜ, ಮೂರ್ತಿ. ಬಾಳಿನ ಹೆಜ್ಜೆಹೆಜ್ಜೆಗೂ ಹೋರಾಡಿಕೊಂಡೇ ಮುನ್ನಡೆಯಬೇಕು."

ಮಧ್ಯಾಹ್ನ ಕಾಲೇಜಿನಲ್ಲಿ ಪ್ರಿನ್ಸಿಪಾಲರನ್ನು ಕೇಳಿಯೂ ಆಯಿತು. ಯಾವ ರೀತಿಯ ಸಹಾಯ ಸಹಕಾರವೂ ಅವರಿಂದ ಸಿಗದೆನ್ನುವ ನಿರ್ಧಾರವೂ ಆಯಿತು. ಜತೆಗೇ ಮೂರ್ತಿ ಕಾಲೇಜು ಬಿಡುವುದೂ ಸ್ಥಿರವಾಯಿತು!

ಸಂಜೆ ಶೇಷು ಕಾಲೇಜಿನಿಂದ ಹಿಂತಿರುಗುವ ವೇಳೆಗಾಗಲೇ ಮೂರ್ತಿ ಕೊಠಡಿಗೆ ಬಂದು ಚೀಟಿಯಿಟ್ಟು ಹೋಗಿದ್ದ. ತಾನು ರಾತ್ರಿ ಬರುವುದು ಹೊತ್ತಾಗಬಹುದು, ಬಾಗಿಲು ತೆಗೆದಿರಲಿ ಎಂದು ತಿಳಿಸಿದ್ದ. ಎಲ್ಲಿ ಹೋಗಿದ್ದಾನು ಮೂರ್ತಿ; ಅದೂ ರಾತ್ರಿ ಬರುವುದು ಹೊತ್ತಾಗಬಹುದೆಂದು ಹೇಳಿರುವನಲ್ಲಾ ಎಂದು ಬಹಳ ಚಿಂತಿಸಿದ ಶೇಷು. ಆದರೆ ಆ ಪ್ರಶ್ನೆ ಬಗೆಹರಿಯಲೇ ಇಲ್ಲ. ಓದಲು ಕುಳಿತರೂ ಅದೇ ಯೋಚನೆ, ಬರೆಯಲು ಕುಳಿತರೂ ಅದೇ ಚಿಂತೆ, ಮೂರ್ತಿ ಇಷ್ಟು ಹೊತ್ತಾಗಿ ಎಲ್ಲಿ ಹೋಗಿರಬಹುದು? ಏತಕ್ಕಾಗಿ, ಬಹಳ ಹೊತ್ತು ಇದೇ ಯೋಚನೆಯಲ್ಲಿಯೇ ನಿದ್ರೆ ಬರಲಿಲ್ಲ.

ಬೆಳಿಗ್ಗೆ ಶೇಷುವಿಗೆ ಎಚ್ಚರವಾದಾಗ ಪಕ್ಕದ ಹಾಸಿಗೆಯಲ್ಲಿ ಮೂರ್ತಿ ಮಲಗಿದ್ದುದು ಕಂಡಿತು. ಅವನೆಷ್ಟುವೇಳೆಗೆ ಬಂದನೋ ಏನೋ ಒಂದೂ ತಿಳಿಯದು. ಮೂರ್ತಿಯ ಕುದಿದ ಮುಖದ ಮೇಲೆ ಸೂರ್ಯರಶ್ಮಿ ಬಿದ್ದಿದ್ದಿತು. ಕಣ್ಣಿನಿಂದ ಯಾವಾಗ ಹೊರಳಿದ್ದುದೋ, ಒಂದು ಹನಿ ಕಣ್ಣೀರು ಇನ್ನೂ ಕೆನ್ನೆಯ ಮೇಲಿದ್ದುದು ಹೊಳೆಯಿತು. "ಅಯ್ಯೋ ಪಾಪ!" ಎನಿ

ಸಿತು ಶೇಷುಗೆ. ಎಷ್ಟು ಕಷ್ಟಪಟ್ಟಿದ್ದಾನೆ, ಇನ್ನಾದರೂ ಸುಖಜೀವನವಿದೆಯೇ ಎಂದರೆ, ಅದೇನು ಕಷ್ಟ ಕೊನೆಗಾಣುವಂತೆಯೇ ಇಲ್ಲವೆಂದು ತೋರುತ್ತದೆ, ಎಂದುಕೊಂಡ.

"ಎಲ್ಲಿಗೋ ಹೋಗಿದ್ದೆ ಮೂರ್ತಿ?" ಎಂದ ಮೂರ್ತಿ ಬಂದೊಡನೆಯೇ.

"ಇಲ್ಲಿಯೇ, ಇನ್ನು ಆಗಬೇಕಲ್ಲ ಹೊಟ್ಟೆಪಾಡು."

"ಅಂದರೆ—"

"ಕೆಲಸಕ್ಕೆ ಅಲೆದಾಟ, ಎಲ್ಲಿಯಾದರೂ ಕೆಲಸಮಾಡಿಕೊಂಡು ಕೊಂಚವಾದರೂ ಹಣ ಕೂಡಿಸಿ ಮುಂದೆ ಓದುವ ಆಸೆ. ಅದಕ್ಕೋಸ್ಕರ ನಿನ್ನೆ ಸಂಜೆ ಇಲ್ಲಿಯ ಸುಬ್ಬರಾಯಶೆಟ್ಟರ ಅಂಗಡಿಗೆ ಹೋಗಿದ್ದೆ. ಅಲ್ಲಿ ಅವರು ಗುಮಾಸ್ತೆಯ ಕೆಲಸ ಕೊಡುವರೋ ಏನೋ ಎನ್ನುವ ಆಸೆಯಾಯಿತು. ಆದರೆ ಅವರ ದಳ್ಳಾಳಿ ವ್ಯಾಪಾರ ಕಂಡು ನನಗೇ ಅಸಹ್ಯವೆನಿಸಿ ಕೆಲಸ ಕೇಳದೆ ಹಾಗೆಯೇ ಬಂದುಬಿಟ್ಟೆ. ಬೆಳಗುಳದ ಕಾರ್ಖಾನೆಗೆ ಕೆಲಸಕ್ಕೆ ಒಂದು ಅರ್ಜಿ ಕೊಡಬೇಕಾಗಿತ್ತು. ಆದಾದರೇ ವಾಸಿ, ದುಡಿಯುವುದು ಹೇಗಾದರೂ ದುಡಿಯಬೇಕು, ಅಲ್ಲೇ ದುಡಿಯೋಣವೆಂದುಕೊಂಡೆ. ಅರ್ಜಿ ಬರೆದು ತೆಗೆದುಕೊಂಡು ಹೋಗಿ ಅಲ್ಲಿಯೇ ಕೊಟ್ಟರೆ ಸರಿಯೆಂದು ತೆಗೆದುಕೊಂಡು ಹೋದೆ, ಕೊಟ್ಟು ನಡೆದುಬಂದೆ."

"ಏನೆಂದರು?"

"ಏನೆನ್ನುತ್ತಾರೆ. ಅಲ್ಲಿಯ ಆಡಳಿತ ಸ್ವಲ್ಪ ಪುಳಿಯೋಗರೆಯದು. ಪುಳಿಯೋಗರೆಯ ಪಾಳ್ಯ. ನಮ್ಮಂತಹವರಿಗೆ ಕಷ್ಟ, ಮೊದಲು ಮೊದಲು ಅರ್ಜಿ ತೆಗೆದುಕೊಳ್ಳಲೇ ಒಪ್ಪಲಿಲ್ಲ. ಆಮೇಲೆ ನಾನು ನನ್ನ ಕಷ್ಟವನ್ನೆಲ್ಲಾ ಹೇಳಿಕೊಂಡ ಮೇಲೆ ತೆಗೆದುಕೊಂಡು, 'ನೋಡೋಣ' ಎಂದರು. ಅವರು ಹೇಳಿದ ರೀತಿ ನೋಡಿದರೆ ಏನೂ ಆಗದೆಂದು ತೋರುತ್ತದೆ. ಏನಾದರೂ ಆದೀತೋ ಏನೋ ಕಾಯಲೇಬೇಕು. ನಾಳೆ ಸಂಜೆ ಯಾವುದಕ್ಕೂ ಅಲ್ಲಿಗೆ ಹೋಗಬೇಕು. ನಾಳೆ ಸಂಜೆ ತಿಳಿಸುವರು ನನ್ನ ಭವಿಷ್ಯ! ಆದರೆ ಅದನ್ನೇ ನೆಚ್ಚಿರಲು ಸಾಧ್ಯವಿಲ್ಲ!"

ಶೇಷುವಿಗೂ ಹಾಗೆಯೇ ಅನಿಸಿತು. ಆ ಕೆಲಸ ಸಿಕ್ಕುವುದು ಹೇಗೆ ಖಂಡಿತ?

"ಮತ್ತೇನಾದರೂ ಪ್ರಯತ್ನ ನಡೆಸಲೇಬೇಕು,ಮೂರ್ತಿ."

"ಹುಂ. ಇವತ್ತು ಮುನಿಸಿಪಲ್ ಕೌನ್ಸಿಲರ್‌ಗಳನ್ನು ನೋಡಿಬಿಡು ತ್ತೇನೆ. ಯಾವುದೋ ಒಂದು ಕೆಲಸವಿದೆಯಂತೆ ಅಲ್ಲಿ."

ಸಂಜೆ ಬಂದಾಗ ಮೂರ್ತಿ ಆ ಕೆಲಸದ ವಿಚಾರ ತಿಳಿಸಿದ. ಅದು ಬ್ರಾಹ್ಮಣರಿಗೆ ಅಲ್ಲ, ಬ್ರಾಹ್ಮಣರಲ್ಲದವರಿಗೆ. ಜನಿವಾರ ಹಾಕಿಕೊಂಡ ತಪ್ಪಿಗೆ ಭೂತವನ್ನು ದೂರವಿಡುವಂತೆ ನೌಕರಿಯನ್ನು ದೂರವಿಟ್ಟಂತಾಗಿತ್ತು. ಹಿಂದೆ ಜನಿವಾರದ ಬ್ರಹ್ಮಗಂಟಿಗೆ ಭೂತಗಳು ಬೆಚ್ಚಿ ಓಡುತ್ತಿದ್ದುವಂತೆ; ಈಗ ನೌಕರಿ ಗಳು ಓಡಿಹೋಗುತ್ತವೆ. ಅಂದು ರಾತ್ರಿಯೆಲ್ಲಾ ಇಬ್ಬರೂ ಯೋಚಿಸಿದರು. ಸಿನಿಮಾಗಳಲ್ಲೇನಾದರೂ! ಟಿಕೆಟ್ ಕಲೆಕ್ಟರ ಕೆಲಸ ಸಿಗಬಹುದಾದರೆ. ಆದರೆ ಅದಕ್ಕೆ ಮೊದಲು ಅವರಲ್ಲಿಡಬೇಕಾದ ನಂಬುಗೆಯ ಹಣವನ್ನೆಲ್ಲಿಂದ ತರು ವುದು? ಕೆಲಸ ಸಿಗುವುದು ಯಾವ ನಿರ್ಧಾರ?

ಮೂರ್ತಿಗಾಗಿ ಶೇಷು ಕಾತರದಿಂದ ಕಾದಿದ್ದ. ಬೆಳಗುಳದ ಕಾರ್ಖಾ ನೆಯ ಮಾಲೀಕರೇನೆಂದರೋ? ಮೂರ್ತಿಗೆ ಕೊನೆಗೊಂದು ಆಸರೆ ಸಿಕ್ಕಿತೋ ಇಲ್ಲವೋ ಎಂಬುದೇ ಅವನ ಹೆದರಿಕೆ. ಕ್ಷಣ ಯುಗವಾಗಿತ್ತು. ನಿಮಿಷ ನಿಮಿ ಷಕ್ಕೂ ಗಡಿಯಾರದ ಕಡೆಗೇ ನೋಡುತ್ತಾ ಯೋಚಿಸುತ್ತಿದ್ದ ಶೇಷು.

"ಆಯಿತು ಶೇಷು" ಎಂದ ಮೂರ್ತಿ ಬಂದವನೇ.

ಶೇಷು ಸಂತೋಷದಲ್ಲಿ ಅವನನ್ನು ತಬ್ಬಿಕೊಂಡು ಕುಣಿದುಬಿಟ್ಟ. ಕೊನೆಗೂ ಮೂರ್ತಿಗೆ ಕೆಲಸ ಸಿಕ್ಕಿತಲ್ಲ!

"ಸಂಬಳವೆಷ್ಟು?"

"ಸಂಬಳವಲ್ಲ. ದಿನಗೂಲಿ ೧೨ ಆಣೆ ಮೂರು ಷಿಫ್ಟುಗಳಂತೆ. ಒಂದೊಂದು ವಾರ ಒಂದೊಂದು ಕಾಲಾವಧಿ. ನಾಳೆಯಿಂದ ಕೆಲಸಕ್ಕೆ ಹಾಜರಾಗ ಬೇಕು. ಬರಿಯ ದ್ರಾವಕಗಳ ಜತೆಗಿರುವ ಜೀವನ. ನೋಡಬೇಕು."

"ಅಯ್ಯೋ ಒಗ್ಗಿದರಾಯಿತು. ಇಲ್ಲದಿದ್ದರೆ ಬಿಡುವುದು. ಅಷ್ಟೇ, ಮೂರ್ತಿ."

"ಅದೇನೋ ನಿಜ. ರಾತ್ರಿ ಕೆಲಸ ನಾಳೆ."

"ಅಂದರೆ?"

"ಮಿಡ್‌ನೈಟ್ ಷಿಫ್ಟ್. ರಾತ್ರಿ ೧೨ ಗಂಟೆಯಿಂದ ಹಗಲು ೮ ರವರೆಗೆ."

"ಹೋಗುವುದು ಹೇಗೆ?"

"ಸಂಜೆ ಎಂಟು ಗಂಟೆಗೆ ಇಲ್ಲಿಂದ ಹೋಗುವ ರೈಲಿನಲ್ಲಿ ಹೋಗಿ ಇಳಿಯುವುದು ಹತ್ತು ಗಂಟೆಯವರೆಗೂ ಸಂಘದಲ್ಲಿ ಕಾಲ ಕಳೆಯುವುದು. ಆಮೇಲೆ ಕೆಲಸಕ್ಕೆ ಹೋಗುವುದು. ಬೆಳಿಗ್ಗೆ ಹನ್ನೊಂದು ಗಂಟೆಗೆ ಬರುವ ರೈಲಿನಲ್ಲಿ ಹಿಂದಿರುಗುವುದು."

"ಚೆನ್ನಾಗಿದೆ. ಕೆಲಸ ಎಂಟು ಗಂಟೆ! ವ್ಯರ್ಥವಾಗುವ ಕಾಲ ಸಂಜೆ ಏಳು ಗಂಟೆಯಿಂದ ಮರುದಿನ ೧೧ ಗಂಟೆಯವರೆಗೆ. ಹುಂ. ಇದೂ ಒಂದು ಅನುಭವ ನೋಡು."

"ಸರಿ, ಶೇಷು. ನಾನು ಬೇರೆ ಒಂದು ರೂಮನ್ನು ಬಾಡಿಗೆಗೆ ತೆಗೆದು ಕೊಂಡರೆ ಒಳ್ಳೆಯದು. ನಿಮ್ಮ ಅಜ್ಜ ಈಗಾಗಲೇ ನಿನ್ನನ್ನು ಬೈಯುತ್ತಿರುವಾಗ"

"ಬೈಯುವುದೇನು! ಅವರಿಗೆ ಅದೇ ಪರಿಪಾಟವಾಗಿಹೋಗಿದೆ."

"ನಿನ್ನೆಯ ದಿನ ನಿಮ್ಮಜ್ಜ ಅನ್ನುತ್ತಿದ್ದರು. ಶೇಷು ಪೋಲಿಯ ಸಹ ವಾಸಕ್ಕೆ ಬಿದ್ದಿದ್ದಾನೆ. ಯಾವನೋ ಬೇವಾರ್ಸಿ ಭಿಕಾರಿ ಬಂದು ಅವನೊಂದಿಗಿದ್ದಾನೆ ರೂಮಿನಲ್ಲಿ ಎಂದು. ನನಗಾಗ ಮೊದಲು ರೇಗಿತು. ಆಮೇಲೆ ಎಷ್ಟಿದ್ದರೂ ನಾನು ಬೇವಾರ್ಸಿ, ಭಿಕಾರಿಯೇ, ಪೋಲಿಯೇ ಆದುದರಿಂದ ಅವರು ಅಂದುದು ತಪ್ಪಲ್ಲವೆಂದು ತೆಪ್ಪಗಾದೆ."

"ಅವರ ಮಾತಿಗೇ ಇಷ್ಟು ನೊಂದುಕೊಂಡೆಯಾ ಮೂರ್ತಿ?"

"ಇಲ್ಲ, ಇಲ್ಲ, ಶೇಷು. ನನ್ನ ಬಾಳೇ ಹಾಗಿದೆ. ಹೋಗಲಿ, ಎಲ್ಲಾದರೂ ಮೂರು ನಾಲ್ಕು ರೂಪಾಯಿ ಬಾಡಿಗೆಯಲ್ಲೇ ಒಂದು ರೂಮು ಸಿಕ್ಕಿದರೆ ನೋಡು. ನಿನ್ನ ಸ್ನೇಹಿತರು ಯಾರಾದರೂ ಸಿಕ್ಕಿದರೆ ಅವರಿಗೂ ಹೇಳು."

"ಅದುವರೆಗೂ ಇಲ್ಲಿಯೇ ಇರು. ಆದರೆ, ಮೂರ್ತಿ ಊಟಕ್ಕೆ?"

"ಅದೇ ದೊಡ್ಡ ಸಮಸ್ಯೆ. ಮೊದಲ ತಿಂಗಳ ಕೂಲಿ ಸಿಗುವವರೆಗೂ ಊಟಕ್ಕೇನು ಮಾಡುವುದು? ಏನುಮಾಡಲಿ ಎಂದು ಬಹಳ ಯೋಚಿಸುತ್ತಿದೇನೆ."

ಇಬ್ಬರ ಮುಖದ ಮೇಲೂ ಮೋಡ ಮತ್ತೆ ಮುಸುಕಿತು.

"ಸರಿ. ಕೊನೆಯಮಾರ್ಗ ಗೊತ್ತೇ ಇದೆ." ಎಂದು ನಿಟ್ಟುಸಿರಿಟ್ಟ ಮೂರ್ತಿ.

"ಏನು ?"

"ಪುಸ್ತಕಗಳನ್ನು ಮಾರುವುದು."

"ಮೂರ್ತಿ!"

"ಏನು ಮಾಡುವುದು ಶೇಷು. ನಿನಗೇ ಗೊತ್ತು. ನನಗೆ ಬೇರೆ ಯಾವ ಮಾರ್ಗವೂ ಇಲ್ಲ." ಶೇಷು ತಲೆ ತಗ್ಗಿಸಿದ. ಮೂರ್ತಿಯ ಮಾತು ಎಷ್ಟು ನಿಜವೆಂಬುದು ಅವನ ಮನಸ್ಸನ್ನು ಕೊಚ್ಚುತ್ತಿತ್ತು. ಆದರೆ ಪುಸ್ತಕಗಳನ್ನು ಮಾರುವುದೆಂದರೆ! ಮೂರ್ತಿಗೂ ಪುಸ್ತಕಗಳೆಂದರೆ ಪ್ರಾಣ. ಆದರೇನುಮಾಡ ಲಾದೀತು. ಬೇರೆ ದಾರಿಯೇ ಇಲ್ಲ!

* * *

ರೈಲು ನಿಲ್ದಾಣದಲ್ಲಿ ಕಾದುನಿಂತಿದ್ದ ಶೇಷು. ಮೂರ್ತಿ ರಾತ್ರಿ ಕೆಲಸ ಮುಗಿಸಿಕೊಂಡು ಬರಬೇಕಾಗಿತ್ತು. ಮೂರ್ತಿಗೆ ಕೆಲಸ ಹೇಗೆನಿಸಿರಬಹುದು? ಅವನಿಗೆ ಒಗ್ಗಿತೋ ಇಲ್ಲ ಮೊದಲ ದಿವಸವೇ ಬೇಸರವೋ?

ಮೂರ್ತಿ ಸೊರಗಿ ಸುಸ್ತಾಗಿ ರೈಲಿನಿಂದಿಳಿದ; ಶೇಷು ಅವನು ಇಬ್ಬರೂ ಮಾತನಾಡಿಕೊಂಡು ಹೊರಟರು.

"ಹೇಗಿದೆ, ಮೂರ್ತಿ?"

"ಕೆಲಸವೇನೂ ಅಂತಹ ಕಷ್ಟವಿಲ್ಲ. ಆದರೆ—"

"ಆದರೆ—"

"ಸಹವಾಸ ಸರಿಯಾಗಿಲ್ಲ."

"ಸಹವಾಸ ಸರಿಯಾಗಿಲ್ಲವೇ?"

"ನಿನ್ನೆ ನಾನು ಮೊದಲಬಾರಿ ಕೆಲಸಕ್ಕೆ ಹೋದುದು. ರಾತ್ರಿ ಕೆಲಸಕ್ಕೆ ಬಂದಿದ್ದವರು ಸುಮಾರು ೩೦ ಜನ. ಅವರಲ್ಲಿ ಒಬ್ಬರಿಬ್ಬರು ಹೊರತು ಉಳಿದವರೆಲ್ಲ ತಮ್ಮ ಕಷ್ಟವನ್ನು ಮರೆಯಲು ಇಸ್ಪೀಟು ಮುಂತಾದುದರಲ್ಲಿ ನಿಂತರು. ನಿನ್ನೆ ಸಂಜೆ ನಾನು ರೈಲಿಳಿದವನೇ ನೇರವಾಗಿ ಕ್ಲಬ್ಬಿಗೆ ಹೋದೆ. ಒಳಗೆ ಆಟವಾಡುತ್ತಾ ಕುಳಿತ್ತಿದ್ದವರೆಲ್ಲಾ ನನ್ನಕಡೆ ನೋಡಿ ಗಹಗಹಿಸಿ ನಕ್ಕರು. 'ಇದೊಂದು ಹೊಸ ಪಶು ಬಲಿಗೆ ಬಂದಿದೆ' ಎಂದ ಒಬ್ಬ. ಎಲ್ಲರೂ ಮತ್ತೆ ಜೋರಾಗಿ ನಕ್ಕರು. ಆಡುತ್ತಿದ್ದವರನ್ನು ನೋಡುತ್ತಿದ್ದವರಲ್ಲೊಬ್ಬ ಎದ್ದು

ಬಂದು ನನ್ನ ಬೆನ್ನಿನ ಮೇಲೆ ಹೊಡೆದು ನನ್ನನ್ನಲುಗಿಸಿದ. 'ಹುಂ, ಜೋರಾಗಿಯೇ ಇದೆ ಪ್ರಾಣಿ' ಎಂದು ನನ್ನನ್ನದುಮಲು ಹೋದ. ನನಗೆ ರೇಗಿತು. ಎತ್ತಿ ಒಂದುಬಿಟ್ಟೆ. ಪಾಪ! ಅವನು ಹಾಗಾದೀತೆಂದು ಎಣಿಸಿರಲಿಲ್ಲ. ಏಟು ಬಿದ್ದೊಡನೆಯೇ ಬೆಚ್ಚಿ ಹಿಂದೆಬಿದ್ದ. ಆಡುತ್ತಿದ್ದವರೆಲ್ಲ ಎದ್ದು ನಿಂತರು. ನಾನು ಧೈರ್ಯವಾಗಿ ಎದುರುನಿಂತೆ. ಅವರೆಲ್ಲರ ಮುಖದಲ್ಲೂ ಷಂಡಕೋಪವಿತ್ತು. ಅಷ್ಟರಲ್ಲಿ ಹೊರಗೇನೋ ಗಲಾಟೆಯಾಯಿತು. ಎಲ್ಲರೂ ಹೊರಕ್ಕೋಡಿಬಂದೆವು. ಹೊರಗೆ ಇಬ್ಬರು ಜಗಳವಾಡುತ್ತಿದ್ದರು.

ಇಬ್ಬರೂ ರಾತ್ರಿ ರೈಲಿನಲ್ಲಿ ಬಂದವರು ಕ್ಲಬ್ಬಿಗೆ ಬಂದಿರಲಿಲ್ಲ. ಕಾರ್ಖಾನೆಯಿಂದ ಒಂದು ಮೈಲಿ ದೂರದಲ್ಲೊಂದು ಪಡಖಾನೆಯಿದೆ. ಅಲ್ಲಿಂದ ಇಬ್ಬರೂ ಒಂದೇ ಸಮನಾಗಿ ಜಗಳವಾಡಿಕೊಂಡು ಬಂದಿದ್ದರು. ಈಗಂತೂ ವಿಪರೀತವಾಗಿ ಕೈಗೆ ಕೈಹತ್ತುವಂತಾಗಿತ್ತು. ಉಳಿದವರು ಜಗಳ ನಿಲ್ಲಿಸುವ ಬದಲು ಉತ್ತೇಜನ ಕೊಡುತ್ತಿದ್ದರು. ಅವರ ಹೊಲಸು ಮಾತು, ಹೊಲಸು ನಡತೆ, ಯಾರಿಗಾದರೂ ಅಸಹ್ಯವಾಗುವಂತಹುದು. ಮಾತುಮಾತೇರುತ್ತಾ ಬಿಸಿಯಾಗಿ ಕೊನೆಗೆ ಒಬ್ಬ ಇನ್ನೊಬ್ಬನನ್ನು 'ಸೂಳೇಮಗ' ಎಂದ. ಅವನು ಚೀರುತ್ತಾ ಚಾಕುವಿನಿಂದ ಕೈಗೆ ಚುಚ್ಚಿದ. ಇವನೂ ಹಿಂತಿರುಗಿಸಿದ. ಅಲ್ಲಿಯೇ ಅವರಿಬ್ಬರಿಗೂ ಚಿಕಿತ್ಸೆ ನಡೆಸಿ ಕಳಿಸಿದುದಾಯಿತು. ನನಗೆ ಆಗಲೇ ಬಹಳ ಗಾಬರಿಯೂ ಆಯಿತು. ಬೇಸರವೂ ಆಯಿತು.

ಕ್ಲಬ್ಬಿನಲ್ಲಿ ಒಂದು ವಾಚನಾಲಯವಿದೆ. ಅಲ್ಲಿ ಹೋಗಿ ಕುಳಿತೆ. ಅಲ್ಲಿ ಯಾರೋ ಒಂದು ಪುಸ್ತಕ ಓದುತ್ತಿದ್ದವರು ನನ್ನ ಕಡೆ ನೋಡಿ ನಸುನಕ್ಕರು. ಆ ನಗೆಯಲ್ಲಿ ಒಂದು ಮಧುರ ಸಹಾನುಭೂತಿಯಿತ್ತು.

"ನೀವೇನೋ ಹೊಸಬರು ?" ಎಂದರು ಆತ.

"ಹುಂ" ಎಂದೆ.

ಹಾಗೆಯೇ ಮಾತಾಡುತ್ತಾ ಹೊರಗೆ ನಡೆದುದನ್ನು ತಿಳಿಸಿದೆ. ಅವರು ನಗುತ್ತಾ, "ಇದು ಇಲ್ಲಿ ದಿನವೂ ಆಗುವ ಅವಾಂತರ. ನಿಮಗೇ ಗೊತ್ತಾಗುತ್ತೆ. ಆ ಪಡಖಾನೆಯ ಆಕಡೆಗೊಂದು ಮನೆಯೂ ಇದೆ. ಕೆಲಸಗಾರರಿಗಾಗಿ ಹೆಂಗಸರಿದ್ದಾರೆ ಅಲ್ಲಿ—" ಎಂದರು. ಆತ ಯಾವಾಗಲೂ ಓದುವುದರಲ್ಲೇ ನಿರತರಾಗಿದ್ದಾರೆ. ನಾವಿಬ್ಬರೂ ನಿನ್ನೆ ಒಂದೇಕಡೆ ಕೆಲಸಮಾಡಬೇಕಾ

ಗಿತ್ತು. ಉಳಿದವರೆಲ್ಲಾ ೧೦ ನಿಮಿಷಕ್ಕೊಂದಾವರ್ತಿ ಸಿಗರೇಟು ಸೇದಲು ಹೊರಗೆ ಹೋಗುತಿದ್ದರು. ಅಲ್ಲಿ ಒಂದು ಮೂಲೆಯನ್ನೇ ಭಂಗೀ ಮಠವೆಂದು ಕರೆಯುತ್ತಾರೆ. ಸಿಗರೇಟು ಸೇದಲು ಎಲ್ಲರೂ ಸೇರುವ ಜಾಗ ಅದು. ಕೊಂಚ ವಿರಾಮ ಸಿಕ್ಕಿತೆಂದರೆ ಹೊಲಸು ಹಾಸ್ಯ, ಇಲ್ಲವೇ ನಿದ್ರೆ. ಆದರೆ ನನ್ನ ಜತೆ ಗಿದ್ದಾತ ಒಂದೇ ಸಮನಾಗಿ ಪುಸ್ತಕವನ್ನೋದುತ್ತಲೇ ಇದ್ದರು. ನನಗೆ ಅವರಲ್ಲೇನೋ ಗೌರವ ಮೂಡಿದೆ. ಶೇಷು, ನಾನೂ ಹಾಗೆಯೇ ಓದಬೇಕು ಎನಿಸಿದೆ."

"ನಿಮ್ಮ ಮ್ಯಾನೇಜರ್ ಏನೆಂದರು ?"

"ಬೆಳಗ್ಗೆ ರೈಲಿಗೆ ಬರುವ ಮೊದಲು ಸಿಕ್ಕಿದ್ದರು. ಅವರೂ ನಮ್ಮ ಜನವೇ ಅಂತೆ. ಒಳ್ಳೆಯ ಮಾತಾಡಿದರು. ಹುಷಾರಾಗಿ, ಸರಿಯಾಗಿ ಆಸಕ್ತಿ ಯಿಂದ ಕೆಲಸಮಾಡಿದರೆ ಖಂಡಿತವಾಗಿ ಮುಂದೆ ಬರುವೆಯೆಂದೂ ಹೇಳಿದರು."

"ಹೋಗಲಿ ಬಿಡು. ಹಾಗೆಯೇ ಹೋಗುತ್ತಾ ಅಲ್ಲೊಂದು ರೂಮಿದೆ ಯಂತೆ, ನೋಡಿಕೊಂಡು ಹೋಗೋಣ."

"ನನಗೆ ಮೊದಲು ಕಾಫಿ ಬೀಳಬೇಕು. ಪೆಟ್ರೋಲಿಲ್ಲದೆ ಬಸ್ಸು ಹೋಗೋಲ್ಲ."

"ಕಾಫಿ ಕುಡಿದೇ ರೂಮಿಗೆ ಹೋಗೋಣ. ಆದರೆ ನನ್ನ ಜೇಬು ಮಾತ್ರ ಖಾಲಿ."

"ನಾವಿಬ್ಬರೂ ಜೋಡಿ. ನಡಿ."

೧೦

"ನಿಮ್ಮ ಹತ್ತಿರ ಯಾವುದಾದರೂ ಕತೆ ಪುಸ್ತಕವಿದೆಯೇನ್ರಿ ?"

ಮೂರ್ತಿ ತಿರುಗಿ ನೋಡಿದ. ಚಿಕ್ಕಹುಡುಗಿ. ಎದುರುಮನೆಯ ಶಾಮ ರಾಯರ ಮಗಳು.

"ಯಾರಿಗೆ ?"

"ಕಮಲಮ್ಮನಿಗೆ ಬೇಕಂತೆ; ಕೇಳು ಅಂದರು."

"ಯಾವುದೂ ಇಲ್ಲ."

ಹುಡುಗಿ ಹೊರಟುಹೋದಳು. ಮೂರ್ತಿ ಹಾಸಿಗೆ ಉರುಳಿಸಿಕೊಂಡು ಬಿದ್ದುಗೊಂಡು ಯೋಚನೆ ಮಾಡಿದ. ಕಮಲ ಯಾತಕ್ಕೆ ತನ್ನನ್ನು ಹಾಗೆ

ನೋಡುತ್ತಾಳೆ. ಹೇಗಾದರೂ ಮಾತನಾಡಿಸಲು ಯತ್ನಿಸುವುದು. ಸಂಪೂರ್ಣ ವಾಗಿ ನಿರ್ಲಜ್ಜೆಯಿಂದ ವರ್ತಿಸುವಳು. ಅವನು ಆ ರೂಮಿಗೆ ಬಾಡಿಗೆಗೆ ಬಂದು ಸುಮಾರು ಒಂದು ತಿಂಗಳು. ಇನ್ನೂ ಪೂರ್ಣ ಒಂದು ತಿಂಗಳೂ ಆಗಿರ ಲಿಲ್ಲ. ಆಗಲೇ ಒಂದು ದಿನ ಇವನು ನಲ್ಲಿಯಲ್ಲಿ ನೀರು ತರಲು ಹೋಗಿದ್ದಾಗ ಚೆಲ್ಲಾಟವಾಡುತ್ತಾ ನೀರು ನಿಲ್ಲಿಸಿಬಿಟ್ಟಿದ್ದಳು. ಇವನು ತಲೆಯೆತ್ತಿದಾಗ ಕಿಲಕಿಲನೆ ನಗಲಾರಂಭಿಸಿದ್ದಳು. ಆಗ ಮೂರ್ತಿಗೆ ಸರೋಜೆಯ ನೆನಪು ಬಂದು ಎದೆ ಕಲಕಿತು. ತಲೆತಗ್ಗಿಸಿ ತನ್ನ ರೂಮಿಗೆ ಬಂದಿದ್ದ. ಈಗ ಈ ಹುಡುಗಿಯನ್ನು ಪುಸ್ತಕಕ್ಕಾಗಿ ಹೇಳಿಕಳಿಸಿದಾಳೆ. ಇದರರ್ಥ?

ಕಮಲ ಮತ್ತು ಗೌರಮ್ಮನವರು ಅಕ್ಕತಂಗಿಯರು. ಮದುವೆಯಾಗದ ವರು. ಗೌರಮ್ಮನವರು ಕಲಿತವರು. ಕಲಿಸುವವರು. ಪ್ರೌಢಶಾಲೆಯಲ್ಲಿ ಅಧ್ಯಾಪಕಿ. ಕಮಲಳೂ ಕಾಲೇಜಿನ ಹೊಸಲು ಮೆಟ್ಟಿದವಳೇ! ಕಳೆದ ವರ್ಷ ಒಂದು ಭಾಗದಲ್ಲಿ ಹೋಯಿತು. ಮನೆಯಲ್ಲೇ ಅದನ್ನೋದಿಕೊಳ್ಳುತ್ತಿದ್ದಳು. ಅವಳ ಪೋಷಣೆಯ ಭಾರ ಅಕ್ಕ ಗೌರಮ್ಮನ ಮೇಲೆ. ಅದೇಕೆ ಅವರಿಬ್ಬರೂ ಮದುವೆಯಾಗಲಿಲ್ಲವೋ ಯಾರಿಗೂ ತಿಳಿಯದು. ಅವರಿಬ್ಬರೂ ಒಂದೇ ವಂಶ ದವರು. ಆ ವಂಶದ ಹೆಂಗಸರೆಲ್ಲಾ ಹೀಗೆಯೇ ಕೊಂಚ ಐಲು ಎನ್ನುವರು ಕೆಲ ವರು. ಮತ್ತೆ ಕೆಲವರು ಗೌರಮ್ಮ ಚಿಕ್ಕವರಾಗಿದ್ದಾಗಲೇ ಮದುವೆಯಾಗಿ ದ್ದರು. ಗಂಡ ಬಿಟ್ಟುಹೋದ. ಕಮಲ ಇನ್ನೂ ವ್ಯಾಸಂಗ ಮುಗಿಸಿಲ್ಲ. ಮುಗಿಸಿದೊಡನೆಯೇ ಮದುವೆಯಾಗುವಳು ಎನ್ನುತ್ತಿದ್ದರು. ಕಮಲನನ್ನು ಅವಳ ಮದುವೆಯ ವಿಚಾರವಾಗಿ ಯಾರಾದರೂ ಏನಾದರೂ ಕೇಳಿದರೆ ಬಿನ್ನಾಣದಿಂದ ಮಾತು ಹಾರಿಸಿಬಿಡುವಳು. ಕಮಲಳ ಕೊಂಕು ನಡೆ, ಬಿನ್ನಾಣ ಬಿಂಕಗಳ ಹಾವಭಾವದಿಂದ, ಕಾಲೇಜು ಹುಡುಗರೆಲ್ಲ ಪತಂಗಗಳಂತೆ ರೆಕ್ಕೆ ಬಡಿ ಯುತ್ತಿದ್ದರು. ಅವಳಿಗೆ ಅದರಲ್ಲಿಯೇ ಹಿಗ್ಗು. ಬೇಕುಬೇಕೆಂದು ಹುಡುಗರ ಮುಂದೆ ಹುಚ್ಚಾಟವಾಡುವುದು, ನಗುವುದು, ಸೆರಗು ಹಾರಿಸುವುದು ಇವು ಕಾಲೇಜಿನಲ್ಲಿ ಅವಳ ನಿತ್ಯದ ಪರಿಪಾಟ. ಅವಳುಪಯೋಗಿಸುತ್ತಿದ್ದ ಸ್ನೋ, ಸೆಂಟು ಮುಂತಾದುವಕ್ಕೇ ಅವಳಕ್ಕನ ಸಂಬಳ ಸಾಕಾಗುತ್ತಿರಲಿಲ್ಲ. ಮತ್ತೆ ಹೇಗೆ ಜೀವನ ನಡೆಸುವಳೋ. ಜನರೇನೋ ಕಮಲಳ ವಿಚಾರವಾಗಿ 'ಗುಸ ಗುಸ' ಎಂದುಕೊಳ್ಳುತ್ತಿದ್ದರು. ಸುತ್ತಮುತ್ತಿನವರು ಯಾರೂ ಅವರೊಂದಿಗೆ

ಮಾತನಾಡುವುದನ್ನು ಮೂರ್ತಿ ಕಂಡೇ ಇರಲಿಲ್ಲ. ಮೂರ್ತಿ ಅಲ್ಲಿಗೆ ಬಾಡಿಗೆಗೆ ಬಂದಾಗ ಯಾರೋ ಅವನಿಗೆ ಹೇಳಿದರು.—

"ಹುಷಾರಾಗಿರಪ್ಪ. ನೀನಿನ್ನೂ ಹುಡುಗ. ಅದು ಕಮಲವಲ್ಲ, ಕೆಸರು! ಕೆಸರಿನಲ್ಲಿ ಒಮ್ಮೆ ಕಾಲು ಹೂತರೆ ಕೀಳುವುದು ಕಷ್ಟ."

ಮೂರ್ತಿ ಇದನ್ನೇ ಯೋಚಿಸುತ್ತಿದ್ದ. ತನಗಿದರಿಂದೇನಾದರೂ ಕೆಡು ಕಾಗಬಹುದೇನೋ ಎನಿಸಿತು. ನಮ್ಮ ಮನಸ್ಸು ನಮ್ಮ ಕೈಲಿದ್ದರೆ ಸರಿ ಎಂದುಕೊಂಡ.

ಅಷ್ಟರಲ್ಲಿ ಹೊರಗಿನ ಬಾಗಿಲು ತಟ್ಟಿದ ಸದ್ದಾಯಿತು. ಮೂರ್ತಿ ಆಕಳಿಸುತ್ತಾ ಬಾಗಿಲು ತೆಗೆದ.

ಮುಖದ ಮೇಲೊಂದು ಮೋಹಕ ಮುಗುಳುನಗೆ. ತುಂಬು ತುಟಿ, ಬಳುಕು ನಡೆ, ಕೊಂಕು ಕತ್ತು, ಸೆಳೆಯುವ ಕಣ್ಣು; ಒಳ ಬಂದಳು ಕಮಲ. ಮೂರ್ತಿಯ ಕಣ್ಣಿಗೆ ಕೊಠಡಿಯೆಲ್ಲಾ ಮುಸಕುಮುಸಕಾಯಿತು.

"ಆಂ, ಏನೂ ಇಲ್ಲಾ, ನೋಡಿ'

ಕಿಲಕಿಲ ನಗು. ಮಾತು ಮುಗಿಯಲೇ ಇಲ್ಲ.

"ನಾನು—ನಾನು, ಕುಳಿತುಕೊಳ್ಳಲೇ."

ಮೂರ್ತಿ ಬೆಪ್ಪಾಗಿ ತಲೆಯಲ್ಲಾಡಿಸಿದ.

"ಹಾಂ—ಕತೆ ಪುಸ್ತಕ ಯಾವುದಾದರೂ ಕೊಟ್ಟರೆ, ಬೇಗ ಓದಿ ಕೊಟ್ಟುಬಿಡುತ್ತೇನೆ. ಮನೆಯಲ್ಲಿ ಬಹಳ ಬೇಸರವಾಗುತ್ತೆ. ಒಬ್ಬಳೇ ಇರಬೇಕು. ಅಕ್ಕ School ಗೆ ಹೊರಟುಹೋಗಿದ್ದಾಳೆ."

ಮೂರ್ತಿ ಅವಾಕ್ಕಾಗಿ ಕೇಳುತ್ತಿದ್ದ. ಕಮಲ ಹಾಗೆಯೇ ಅವನ ಹಾಸಿಗೆಯ ಮೇಲೆ ಬಿದ್ದಿದ್ದ ಪುಸ್ತಕವನ್ನೆತ್ತಿಕೊಂಡಳು.

"ಈ novel ಚೆನ್ನಾಗಿದೆಯೇ? Love Among The Artists by George Bernard Shaw. ನನಗೇನೋ Shaw ಕಂಡರೇ ಆಗದು. ಆದರೆ LOVE stories ಕಂಡರೆ ಬಹಳ ಇಷ್ಟ. ನನಗೆ ಇದನ್ನು Lend ಮಾಡಿ. ನಾಳೆ Return ಮಾಡ್ತೀನಿ."

"ಹೂಂ"

"ನಿಮಗೆ ಒಬ್ಬರೇ ಇರಲು ಬೇಸರವಿಲ್ಲವೇ? ನನಗಂತೂ ಬಿಕ್ಕೋ ಎನಿಸುತ್ತೆ. ನನಗೆ ಯಾವಾಗಲೂ company ಇರಲೇಬೇಕು. ಇಲ್ಲದಿದ್ದರೆ I feel so lonely."

ಮೂರ್ತಿ ಸುಮ್ಮನಿದ್ದ. ಎದ್ದು ಹೋಗಿರೆಂದು ಹೇಳುವುದು ಹೇಗೆಂದು ಯೋಚಿಸುತ್ತಿದ್ದ.

"ಅಕ್ಕ ಮಧ್ಯಾಹ್ನವಾಯಿತು ಅಂದರೆ ಸ್ಕೂಲು. ಸ್ಕೂಲಿಗೆ ಹೊರಟು ಹೋಗುತ್ತಾಳೆ. ನನಗೆ time ಕಳೆಯುವುದೇ ಕಷ್ಟ. ನಿಮಗೆ ಕೇರಂ ಆಡಲು ಬರುತ್ತದೆಯೇನು? ನಮ್ಮ ಮನೆಯಲ್ಲಿ Board ಇದೆ. ಆಡೋಣ"

"ನನಗೆ ಬರುವುದಿಲ್ಲ."

"ಸುಲಭ. ಕಲಿಯುವುದೇನೂ ಕಷ್ಟವಿಲ್ಲ. ನನಗೂ ಅಷ್ಟು ಚೆನ್ನಾಗಿ ಬರುವುದಿಲ್ಲ. ಒಂದೆರಡು ದಿನ Practice ಮಾಡಿದರೆ—"

"ಇಲ್ಲ, ಇಲ್ಲ. ನಾನು ಈಗ ನನ್ನ ಸ್ನೇಹಿತನನ್ನು ನೋಡಲು ಹೋಗಬೇಕು. ಕಾಲೇಜಿನಲ್ಲಿ ಅವನು ಕಾದಿರುತ್ತಾನೆ."

"ಕಾಲೇಜಿಗೆ ಹೋಗುವಿರೇನು? ಕೊಂಚ ತಾಳಿ. ನಾನೂ ಅಲ್ಲೊಬ್ಬ Friend ನ ನೋಡಬೇಕು. ನೀವು Five Miuntes Wait ಮಾಡಿ, ಬಂದೆ." ಎನ್ನುತ್ತಾ ರೂಮಿನಿಂದ ಸರಸರ ಹಾವು ಸರಿಯುವಂತೆ ಸರಿದಳು.

"ಗೋಳು ಸಾಕಪ್ಪಾ!" ಎನ್ನುತ್ತಾ ಮೂರ್ತಿ ಕೂಡಲೇ ಬೀಗ ಹಾಕಿಕೊಂಡು ಹೊರಟುಬಿಟ್ಟ. ಶೇಷುವನ್ನು ಕಂಡೊಡನೆ ಎಲ್ಲಾ ತಿಳಿಸಿದ.

"ಸರಿ. ಮೂರ್ತಿ. ನಿನ್ನ ಮೇಲೆ ಬಿತ್ತು ಕೆಸರಿನ ಕಣ್ಣು. ನಡೆಯಲಿ. ನಡೆಯಲಿ. ರಸಿಕ—" ಎಂದ ಶೇಷು ನಗುತ್ತಾ.

"ಈಗ ಈ ಪೀಡೆಯಿಂದ ತಪ್ಪಿಸಿಕೊಳ್ಳೋದು ಹೇಗೆ ಅನ್ನಿಸಿದೆ ಶೇಷು. ಏನು ಮಾಡಲೋ?"

"ಒಂದೇದಾರಿ ನೋಡಪ್ಪಾ. ಅವಳನ್ನು ನಿನ್ನ ರೂಮಿನೊಳಕ್ಕೆ ಬಿಡಬೇಡ. ಅವಳೆಷ್ಟೇ ಪ್ರಯತ್ನಿಸಿದರೂ ಅವಳ ಜತೆ ಮಾತಾಡಬೇಡ. ಅವಳಿರುವುದನ್ನೇ ಗಮನಿಸಬೇಡ ಅದು ಹಾಳಾಗಲಿ ಬಿಡು. ಕೆಲಸ ಹೇಗಿದೆ?"

"ಎಲ್ಲಾ ಸೊಗಸಾಗಿದೆ. ಏನೂ ಪರವಾಗಿಲ್ಲ. ಸುಲಭವಾಗಿಯೇ ಕಲಿಯುತ್ತಿದೀನಿ. ಹಾಗೆಯೇ ಓದಲೂ ಪುರುಸೊತ್ತು ಸಿಗುತ್ತೆ. ನಿನ್ನೆ ರಾತ್ರಿ

ವ್ಯಾಕ್ಸಿಂಗಾರ್ಕಿಯ ಕಾದಂಬರಿಯನ್ನೋದಿ ಮುಗಿಸಿದೆ. ಈವತ್ತು ಇನ್ನು ಯಾವುದಾದರೂ ಕೊಡು."

"ಚೆಕೊವ್‌ನದು ಸಣ್ಣ ಕತೆಗಳು ತಂದಿದೇನೆ. ಅದನ್ನು ತೆಗೆದುಕೊಂಡು ಹೋಗು."

"ಶೇಷು. ನಿನಗಿನ್ನೊಂದು ಮಾತು ಹೇಳುವುದು ಮರೆತೆ. ನಿನ್ನೆ ರಾತ್ರಿ ನಾನು ಕ್ಲಬ್ಬಿಗೆ ಹೋಗಿ ಓದಲು ಕುಳಿತೆ; ಆವೇಳೆಗೆ ಅಲ್ಲಿಗೆ ನಮ್ಮ ವ್ಯಾನೇಜರ್ ಬಂದರು. ನಾನು ಓದುತ್ತಿದ್ದ ಪುಸ್ತಕ ನೋಡಿದರು. ಹಾಗೆಯೇ ತಿರುವಿದರು. ಕುರ್ಚಿಯ ಮೇಲೆ ಕುಳಿತು ಹಾಗೂ ಹೀಗೂ ಒದ್ದಾಡಿದರು, ಏನೋ ಹೇಳಬೇಕು ಎಂದಿರುವವರಂತೆ ನನಗೇನೂ ಅರ್ಥವೇ ಆಗಲಿಲ್ಲ. ನನ್ನ ಪಕ್ಕದಲ್ಲಿದ್ದವರು ಇದೊಂದನ್ನೂ ನೋಡದೆ ತಮ್ಮಷ್ಟಕ್ಕೆ ತಾವು ಓದುತ್ತಿದ್ದರು. ಬಹು ಪ್ರಯಾಸದಿಂದ ಉಗುಳು ನುಂಗುತ್ತಾ ನುಂಗುತ್ತಾ ವ್ಯಾನೇಜರ್ ನನ್ನನ್ನು "ಮೂರ್ತಿ, ಕೆಲಸ ಹೇಗಿದೆ?" ಎಂದರು.

ನಾನೇನೋ "ಪರವಾಗಿಲ್ಲ" ಎಂದೆ. ಮತ್ತೇನೋ ಹೇಳಲು ಬಾಯಿ ತೆರೆದರು ಅವರು. ಅಷ್ಟರಲ್ಲಿ ನನ್ನ ಪಕ್ಕದಲ್ಲಿ ಯಾರೋ ಇದ್ದುದನ್ನು ಕಂಡು ಹೇಳದೆಯೇ ಎದ್ದು ಹೊರಟುಹೋದರು. ಅವರ ರೀತಿ ನೋಡಿದರೆ ಏನೋ ಹೇಳಲು ತವಕಿಸುವಂತಿತ್ತು!"

"ನಿನಗೇನುತಾನೇ ಹೇಳಬಹುದೋ ಅವರು?"

"ಅದು ತಿಳಿದಿದ್ದರೆ ನಿನ್ನನ್ನು ಕೇಳುತ್ತಿದ್ದೇನೇನೋ ಶೇಷು? ಏನೋ? ಏನು ಕಾದಿದೆಯೋ?"

"ಏನುತಾನೇ ಹೇಳಿಯಾರು?"

"ಈವತ್ತೇನಾದರೂ ರಾತ್ರಿ ಹೇಳಿದರೂ ಹೇಳಬಹುದು."

ಅಂದು ರಾತ್ರಿ ಕೆಲಸಕ್ಕೆ ಹೋಗಿ ಕ್ಲಬ್ಬಿಗೆ ಹೋದೊಡನೆ ವ್ಯಾನೇಜರ್ ಹೊರಗೇ ಕಾದಿದ್ದರು, ಟೆನ್ನಿಸ್ ಕೋರ್ಟಿನ ಪಕ್ಕದಲ್ಲಿ.

"ಮೂರ್ತಿ, ಇಲ್ಲಿ ಬನ್ನಿ, ಕೊಂಚ ಕೆಲಸವಿದೆ." ಎಂದರು.

ಮೂರ್ತಿ ಅವರ ಹಿಂದೆಯೇ ಹೋದ. ಕಾರ್ಖಾನೆಯಿಂದ ಹಿಂದೆ ಸುಮಾರು ಅರ್ಧ ಫರ್ಲಾಂಗು ದೂರದಲ್ಲಿದ್ದ ಮನೆಗೆ ಕರೆದುಕೊಂಡು ಹೋದರು. ತಮ್ಮ ಕೋಣೆಯಲ್ಲಿಯೇ ಕೂರಿಸಿ ಒಳಕ್ಕೆ ಹೋದರು. ಮೂರ್ತಿ

ಕಕ್ಕಾವಿಕ್ಕಿಯಾಗಿ ನೋಡಿದ. ಕೋಣೆ ಸುಂದರವಾಗಿ ಸಜ್ಜಿತವಾಗಿತ್ತು. ಕಲೆಯಲ್ಲಿ ಕೊಂಚ ಆದರವಿರುವವನ ಮನೆಯೆಂದು ಚೆನ್ನಾಗಿ ಕಾಣುತ್ತಿತ್ತು. ಗೋಡೆಯ ಮೇಲೆ ಕೆಲವಾರು ಪಟಗಳು, ರಾಜಾರವಿವರ್ಮನ ಲೈಂಗಿಕ ಚಿತ್ರಗಳೇ! ಆದರೆ ಅವುಗಳ ನಡುವೆ ಒಂದು ಮುತ್ತಿನಂತಹ ಚಿತ್ರ. 'ಪರಿತ್ಯಕ್ತ ಮಂದಿರ.' ಅದೇಕೋ ಏನೋ ತನ್ನ ಜೀವನಕ್ಕೂ ಅದಕ್ಕೂ ಹೋಲಿಕೆ ಬಂತು ಮೂರ್ತಿಯ ಮನಸ್ಸಿನಲ್ಲಿ. ಬಿರುಗಾಳಿಯ ಸೆರಗಿನಲ್ಲಿ, ಊರಿನಿಂದ ದೂರದಲ್ಲಿ, ಒಂದು ಕಾಲುಹಾದಿಯ ಪಕ್ಕದಲ್ಲಿ ಬಂಡೆಯ ಮೇಲೊಂದು ಮುರುಕು ಮಂದಿರ. ಸುತ್ತೆಲ್ಲ ಮುಳ್ಳು ಪೊದೆಗಳು, ಮಂದಿರವನ್ನು ಕೇಳುವವರೇ ಇಲ್ಲ! ಆಕಡೆ ಪಕ್ಕಕ್ಕೊಂದು ಸ್ಮಶಾನ; ಅಲ್ಲಿ ಮೂಳೆಯ ರಾಶಿ. ಅಲ್ಲೇ ರಣಹದ್ದೊಂದು! ನೀಲಗಗನದಲ್ಲಿ ಮೋಡದ ಒಂದೇ ಒಂದು ತುಣುಕು. ಎಲ್ಲವೂ ಮುಕ್ಕುಮುಕ್ಕಾಗಿದೆ ಮಂಟಪ! ಮೂರ್ತಿ ಅದನ್ನೇ ದಿಟ್ಟಿಸಿ ನೋಡುತ್ತಿದ್ದ. ಅಷ್ಟರಲ್ಲಿ ಮ್ಯಾನೇಜರ್ ಬಂದರು. ಕೈಯಲ್ಲೊಂದು ಕಾಫಿಯ ಲೋಟ!

"ನೋಡಿ, ಮೂರ್ತಿ. ನೀವೂ ಓದಿದವರು, ಕಲಿತವರು. ಹಾಗೆಯೇ ನನ್ನ ಹುಡುಗಿ ವಸಂತು ಈ ಸಾರಿ ನಾಲ್ಕನೆಯ ಫೋರಂ ಸೇರಿದಾಳೆ; ನೀವು ಕೆಲಸಕ್ಕೆ ಬಂದಾಗ ಹಾಗೆಯೇ ಒಂದರ್ಧ ಘಂಟೆ ಪಾಠ ಹೇಳಿಕೊಟ್ಟರೆ—"

ಮೂರ್ತಿಗೇನು ಹೇಳಲೂ ತೋಚಲಿಲ್ಲ.

"ಏನೂ ಅಷ್ಟೊಂದು ತೊಂದರೆ ತೆಗೆದುಕೊಳ್ಳಬೇಕಾಗಿಯೂ ಇಲ್ಲ. ಎಷ್ಟಾದರೂ ಕೊಂಚ ಇಂಗ್ಲಿಷ್, ಕೊಂಚ ಲೆಕ್ಕ, ಎರಡರಲ್ಲೇ ಐಬು; ತಿಂಗಳಿಗೆ ೧೦ ರೂಪಾಯಿ ಕೊಡುತ್ತೇನೆ."

ಮೂರ್ತಿಗೆ ತಲೆ ಗಿರ್ರನ್ನುತ್ತಿತ್ತು. ತನ್ನ ಸ್ಥಿತಿಯಲ್ಲಿ ಹತ್ತು ರೂಪಾಯಿ! ಆದರೆ ಯೋಚಿಸದೆ ಹೇಳುವುದಾದರೂ ಹೇಗೆ? ಅದೂ ಅಲ್ಲದೆ ಶೇಷುವನ್ನೂ ಒಂದುಬಾರಿ ಕೇಳುವುದು ಒಳ್ಳೆಯದಲ್ಲವೇ? ಸುಮ್ಮನೆ ಒಪ್ಪಿಕೊಂಡು ಆಮೇಲೆ ಕಷ್ಟಕ್ಕೀಡಾಗಬಾರದು; ಅದರಿಂದ ಕೆಡುಕಾಗಬಾರದು. ದುಡುಕಿನಿಂದ ಏನೂ ಆಗದು.

"ಎರಡು ದಿನ ಯೋಚನೆಮಾಡಿ ಹೇಳ್ತೀನೆ" ಎಂದ.

"ಯೋಚಿಸಿಯೇ ಹೇಳಿ. ಏನೂ ಕಷ್ಟವಾಗೋಲ್ಲ"

ಶೇಷು, ಮೂರ್ತಿ ಯೋಚಿಸಿದರು. ಕೊನೆಗೆ ಹೇಗಾದರೂ ಸರಿ, ಪಾಠ ವನ್ನೊಪ್ಪಿಕೊಳ್ಳುವುದೇ ಒಳ್ಳೆಯದೆನಿಸಿತು. ಹತ್ತು ರೂಪಾಯಿ ಬಂದರೆ ಕಾರ್ಖಾನೆ ಬಿಟ್ಟಾಗ ಕಾಲೇಜು ಸೇರಲು ಸಹಾಯವಾಗುವುದಿಲ್ಲವೇ? ಮ್ಯಾನೇಜರ್‌ರ ಮಾತಿನಲ್ಲಿ ಏನು ತಪ್ಪು? ಅಂತೂ ಮೂರ್ತಿ ವಸಂತುವಿಗೆ ಮನೆಯ ಮೇಷ್ಟರಾದ.

ವಸಂತು ಅರ್ಥಾತ್ ವಸಂತಲಕ್ಷ್ಮಿ ಮಹಾಪ್ರಭೃತಿಗಳ ಗುಂಪಿಗೆ ಸೇರಿ ದವಳು. ತಲೆಯ ಚಿಪ್ಪಿನೊಳಗೆ ಮಿದುಳೇ ಗೈರುಹಾಜರಾದುದರಿಂದ ಅವಳ ಪಾಲಿಗೆ ಎಲ್ಲವೂ ಒಂದೇ. ಲೆಕ್ಕವಾದರೇನು, ಇಂಗ್ಲೀಷಾದರೇನು, ಮತ್ತೊಂದಾದ ರೇನು, ಎಲ್ಲಾ ಒಂದೇ! ತಲೆಗೆ ಹತ್ತುತ್ತಲೇ ಇರಲಿಲ್ಲ! ಅದು ಹೇಗೆ ಮಧ್ಯಮ ಶಾಲೆಯಿಂದ ಹೈಸ್ಕೂಲಿಗೆ ಬಂದಳೋ ಅದೇ ಆಶ್ಚರ್ಯ. ಉಪಾಧ್ಯಾಯರೆಲ್ಲ ಅವಳನ್ನು ಕಂಡು ವಿಸ್ಮಯಗೊಳ್ಳುತ್ತಿದ್ದರು. ಹಾಗೆಯೇ ಖೇದವನ್ನೂ ತೋರು ತ್ತಿದ್ದರು. ಈ ಪ್ರಾಣಿ ಹೇಗೆ ಇಲ್ಲಿಗೆ ಬಂದಿತೋ ಎಂದು ವಿಸ್ಮಯ, ಇದಕ್ಕೆ ಪಾಠಬೇರೆ ಹೇಳಬೇಕಲ್ಲಾ ಎಂದು ಖೇದ, ದುಃಖ! ಅವಳಂತೂ ಇದ ನ್ನೊಂದನ್ನೂ ಎಣಿಸುತ್ತಲೇ ಇರಲಿಲ್ಲ- ತಾನಾಯಿತು, ತನ್ನ ಶೃಂಗಾರವಾ ಯಿತು! ತನ್ನ ಜಂಭವಾಯಿತು! ಎಷ್ಟಿದ್ದರೂ ತನ್ನ ತಂದೆ ಕಾರ್ಖಾನೆಯ ಮ್ಯಾನೇಜರ್, ತುಂಬ ಸಂಬಳ ತರುವವರು, ತನಗೇನು ಕಡಿಮೆ? ತಾನೋದಿದ ರೇನು, ಓದದಿದ್ದರೇನು? ತನಗೊಳ್ಳೆಯ ಗಂಡ ಸಿಕ್ಕಿಯೇ ಸಿಕ್ಕುವನೆಂಬ ಭರವಸೆ! ಒಟ್ಟಿನಲ್ಲಿ ಹೇಳುವುದಾದರೆ ಖಾಲಿತಲೆ, ತುಂಬುಬಾಯಿ!

ಮೂರ್ತಿ ರಾತ್ರಿ ೮ ಗಂಟೆಯ ವೇಳೆಗೆ ಪಾಠ ಹೇಳಲುಹೋಗಿ ೯ ರ ವರೆಗೂ ತನಗೆ ತಿಳಿದುದನ್ನು, ಅವಳಿಗೆ ತಿಳಿಯಲಾಗದುದನ್ನು, ಹೇಳಿ ಕ್ಲಬ್ಬಿಗೆ ಹೊರಟುಹೋಗುತ್ತಿದ್ದ. ಅವನಿಗೆ ಈ ಪಾಠಪ್ರವಚನ ಬೇಕಾಗಿರಲಿಲ್ಲ. ಪಾಠ ಹೇಳಿಸಿಕೊಳ್ಳುವ ಹುಡುಗಿ ಸುಮ್ಮನೆ ತನ್ನ ಕಡೆಗೇ ನೋಡುತ್ತಿತ್ತೇ ಹೊರತು ಪುಸ್ತಕದ ಕಡೆಗೆ ಗಮನವನ್ನೇ ಇಡುತ್ತಿರಲಿಲ್ಲ. ಇದೂ ಅಲ್ಲದೆ ಈಚೆಗೆ ಅವ ನಿಗೆ ಉಪಚಾರ ಬೇರೆ. 'ರಾತ್ರಿಯೆಲ್ಲಾ ನಿದ್ದೆಗೆಡಬೇಕು. ಕಾಫಿ ಕುಡಿಯಿರಿ. ಕಾಫಿ ಚೆನ್ನಾಗಿದೆಯೇ? ನಮ್ಮ ವಸಂತುವೇ ಕೈಯಾರ ಮಾಡಿದ್ದು.' ಇದೆಲ್ಲಾ ಅವನಿಗೆ ಅಹಿತವಾದುದು. ಆದರೆ ಇದನ್ನೆಲ್ಲಾ ಹೇಗಾದರೂ ಸಹಿಸ ಬಹುದು. ಈಚೆಗೆ ಕಾರ್ಖಾನೆಯಲ್ಲೆಲ್ಲ ಒಂದು ಬಗೆಯ 'ಗುಸಗುಸ!'

ಎಲ್ಲರೂ ಇವನ ಕಡೆಗೇ ಓರೆಗಣ್ಣಿಂದ ನೋಡುವವರೇ! ತಮಗೇನೋ ಗುಟ್ಟು ಗೊತ್ತಿದೆಯೆಂಬಂತಹ ದೃಷ್ಟಿ. ಹಿಂದೆ ಅದೇನೇನು ಮಾತಾಡಿಕೊಳ್ಳುತ್ತಿದ್ದರೋ! ಒಂದು ದಿನ ಆಕಸ್ಮಿಕವಾಗಿ ರಾತ್ರಿ ಕೆಲಸಮಾಡುತ್ತಿದ್ದಾಗ ಮೂತ್ರಿಗೆ ಹೋಗುವಾಗ ಭಂಗೀಮಂಠದಲ್ಲಿ ಆಗುತ್ತಿದ್ದ ಮಾತುಕತೆ ಕೇಳಿತ್ತು.

"ನಮ್ಮ ಮ್ಯಾನೇಜರ್‌ಗೂ ಮೂರ್ತಿಗೂ ಕೇವಲವಂತಲ್ಲೋ."

"ಮ್ಯಾನೇಜರ್ ಅಲ್ಲವೋ ಗುಗ್ಗು. ಮ್ಯಾನೇಜರ್ ಮಗಳಿಗೂ ಮೂರ್ತಿಗೂ ಕೇವಲ!"

ಗಹಗಹ ನಗು!

"ಹುಂ, ರಾತ್ರಿಯೆಲ್ಲಾ Shift ಗೆ ಬರುವವರೆಗೂ ಅಲ್ಲಿಯೇ ಕಳೆದು ಬಿಡುತ್ತಾನೆ!"

"ಲೋ, ಪಾಠ ಹೇಳಿಕೊಡುತ್ತಾನೆ ಕಣೊ.!"

"ಪಾಠ! ಗೃಹಿಣೀ ಶಿಕ್ಷಣ!"

ಮತ್ತೆ ನಗು!

"ಹೆಸರು ಸೊಗಸಾಗಿದೆಯಪ್ಪಾ, ವಸಂತ! ಹಾ! ಎಲ್ಲೆಲ್ಲಿಯೂ ಚಿಗುರು, ಹೊಸ ಸುಗ್ಗಿ ಬರುವ ಕಾಲ. ಸುಂದರ ಋತು!"

"ಬಿಡೋ! ಬಿಡೋ! ಅವಳಿಗೂ ಸುಗ್ಗಿಯಾಗುತ್ತೆ ಹೀಗೆಯೇ ಕೊಂಚ ದಿನವಾದರೆ."

"ಏನೋ ಹಾಗೇನೋ?"

"ಹುಂ! ಈಗಾಗಲೇ ಆಗಿರಬೇಕು ಮೂರು ನಾಲ್ಕು ತಿಂಗಳು!"

"ಪರವಾಗಿಲ್ಲ. ಮರಿಮೂರ್ತಿಯೋ, ಮೂರ್ತಿಯ ಮರಿಯೋ ಆಗುತ್ತೆ ಅನ್ನು!"

ಮತ್ತೆ ನಗು! ಕೇಕೆ!

ಮೂರ್ತಿ ಕೇಳಿಕೊಂಡು ತಲೆ ತಗ್ಗಿಸಿ ಮುಂದೆ ನಡೆದ!

ಮೂರ್ತಿಯ ಮನಸ್ಸಿಗೆ ಹಿಮಂತಋತು! ಆಸೆಯ ತರಗೆಲೆಯೆಲ್ಲಾ ಉದುರಿಹೋಯಿತು. ತಲೆ ತಗ್ಗಿಸಿ ಬಂದು ತನ್ನ ಜಾಗದಲ್ಲಿ ಕುಳಿತ. ಕೆಲಸದ ನಡುವೆ ಬಲಗೈಮೇಲೆ ದ್ರಾವಕ ಸುರಿದುಕೊಂಡ, ಕೋಟು ತೋಳು ಸುಟ್ಟುಕೊಂಡ. ಒಂದೇ ಸಮನಾಗಿ ಯೋಚಿಸುತ್ತಿದ್ದ; ಏನುಮಾಡುವುದು?

ಹೀಗಾದೀತೆಂದು ಮೊದಲೇ ತಿಳಿದಿದ್ದರೆ! ಮ್ಯಾನೇಜರ್‌ರಿಗೂ ಇದು ಗೊತ್ತಿರ ಬಹುದೇ? ಗೊತ್ತಿಲ್ಲದಿದ್ದರೆ ಈ ಅಪವಾದವನ್ನು ಅವರಿಗೆ ತಿಳಿಸುವುದಾದರೂ ಹೇಗೆ? ಅವನ ಮೇಲೆಯೇ ತಿರುಗಿಬಿದ್ದರೆ? ಅದರ ಬದಲು ಪಾಠಕ್ಕೆ ಹೋಗುವುದನ್ನೇ ನಿಲ್ಲಿಸಿದರೆ? ಅದು ಸರಿ, ಆದರೆ ಏಕಾಏಕಿ ಹೇಗೆ ನಿಲ್ಲಿಸು ವುದು? ಉಹುಂ! ಅದಾಗದು. ಆಗದೆಂದರೆ ಹೇಗೆ? ಏನಾದರೂ ಮಾಡಿಯೇ ತೀರಬೇಕು! ಮ್ಯಾನೇಜರರಿಗೆ ತಿಳಿಸಿಬಿಡುವುದು, ತನ್ನಿಂದ ಇನ್ನು ಮುಂದೆ ಪಾಠ ಹೇಳಲಾಗದೆಂದು. ಕಾರಣ ಕೇಳಿದರೆ? ತಾನೇನು ಹೇಳುವುದು? ಆ ಸಮಯದಲ್ಲಿ ಏನಾದರೂ ತೋಚಿಯೇ ತೋಚುವುದು.

"ಮೂರ್ತಿ, ಮೂರ್ತಿ"

"ಸಾರ್"

"ಬನ್ನಿ, ನಿಮ್ಮೊಂದಿಗೆ ಕೊಂಚ ಮಾತನಾಡುವುದಿದೆ."

"ಬಂದೆ, ಸಾರ್."

ಮೂರ್ತಿ ಮ್ಯಾನೇಜರ್ ಜತೆಗೆ ಕ್ಲಬ್ಬಿಗೆ ನಡೆದ. ಮೊದಲು ವಸಂತುವಿಗೆ ಪಾಠ ಹೇಳಿಕೊಡೆಂದು ಕೇಳುವಾಗಿನಷ್ಟೇ ಗಡಿಬಿಡಿ, ಒದ್ದಾಟ!

"ನಮ್ಮ ವಸಂತು, ಹೇಗೆ ಓದುತ್ತಾಳೆ"

"ಏನೋ ಪರವಾಗಿಲ್ಲ."

"ಪಾಸಾಗುತ್ತಾಳೆ ತಾನೇ? ಯಾಕೆಂದರೆ, ಅದಕ್ಕೇ ಅವಳು ಇಂಗ್ಲಿಷ್ ಲೆಕ್ಕದಲ್ಲಿ ಕೊಂಚ Weak ಅಂತ ನಿಮ್ಮನ್ನು ಪಾಠಕ್ಕೆ ಗೊತ್ತುಮಾಡಿದೆ!"

"ಪಾಸಾದರೂ ಆಗಬಹುದು, ಹೇಳಲಾಗುವುದಿಲ್ಲ. ಕೊಂಚ ಶ್ರಮ, ಆಸಕ್ತಿ ವಹಿಸಿದರೆ."

"ಪರವಾಗಿಲ್ಲ ತಾನೇ, ಆದರೆ...."

ಆ ಒಂದು ನಿಮಿಷದ ಮೌನದಲ್ಲಿ ಪ್ರಪಂಚ ಬಹಳ ಹಳೆಯದಾದಂತೆ ತೋರಿತು ಮೂರ್ತಿಗೆ!

"ಒಂದು ವಿಷಯ, ನಿಮ್ಮನ್ನು ಕೇಳಬೇಕೂಂತ, ನೀವೇನು ಅಂದು ಕೊಳ್ಳುವಿರೊ?"

ಮೂರ್ತಿ ಮಾತಾಡಲೇ ಇಲ್ಲ. ಮೌನದ ಭಾರದಲ್ಲಿ ಕುಗ್ಗಿದ್ದ!

"ವಸಂತು, ಅದೇ ಹೇಗಿದ್ದಾಳೆಂತ?"

" ಅಂದರೆ "

" ಅಂದರೆ, ನೋಡಲು ಹೇಗಿದ್ದಾಳೆಂತ ? "

ಮೂರ್ತಿ ಇದಕ್ಕೂ ಉತ್ತರಕೊಡಲಿಲ್ಲ.

" ಮತ್ತೇನೂ ಇಲ್ಲ, ಒಬ್ಬಳೇ ಮಗಳು, ವಯಸ್ಸಾಯಿತು. ನೀವೇ ನೋಡಿದ್ದೀರಿ. ಹೈಸ್ಕೂಲಿನಲ್ಲಿ ಓದುತ್ತಿದ್ದಾಳೆ, ನಿಮಗಿಷ್ಟವಿದ್ದರೆ ಮುಂದಕ್ಕೂ ಓದುತ್ತಾಳೆ. "

" ನನಗಿಷ್ಟವಿದ್ದರೆ ? "

ಮೂರ್ತಿಯ ಪ್ರಶ್ನೆಯನ್ನೇ ಕೇಳದವರಂತೆ ಮ್ಯಾನೇಜರ್ ಮಾತು ಮುಂದುವರಿಸಿದರು.

" ಸಾಕಷ್ಟು ರೂಪವತಿಯೂ ಹೌದು. ಅದನ್ನು ನಿಮಗೆ ಹೇಳ ಬೇಕಾಗಿಯೂ ಇಲ್ಲ; ವರೋಪಚಾರವೆಲ್ಲ ಮಾಡುತ್ತೇವೆ. ಹಾಗೆಯೇ ೩೦೦೦ ರೂಪಾಯಿ ವರದಕ್ಷಿಣೆಯನ್ನೂ ಕೊಡುತ್ತೇನೆ. ನೀವು ಮನಸ್ಸು ಮಾಡಿದರೆ........ "

ಕಾರ್ಖಾನೆಯಲ್ಲಿ ಯಾವುದೋ ಆಸ್ಫೋಟನೆಯಾದ ಸದ್ದಾಯಿತು. ಮೂರ್ತಿಗೆ ತನ್ನ ಎದೆಯ ಆಸ್ಫೋಟನದಲ್ಲಿ ಅದು ಗಮನಕ್ಕೇ ಬರಲಿಲ್ಲ. ಮೈಯೆಲ್ಲಾ ಬೆವರಿತು ! ವಸಂತ ! ತನ್ನ ಹೆಂಡತಿಯಾಗಬೇಕೆ ! ಮೈ ನಡುಗಿತು. ಅಬ್ಬಾ ! ಅಬ್ಬಾ ! ಯಾರನ್ನಾದರೂ ಕಟ್ಟಿಕೊಂಡಿರಬಹುದು. ಆದರೆ ಈ ಮಡ್ಡಿ ! ಅವಳೊಂದಿಗೆ ಏಗುವವರು ಯಾರು ? ಇದ್ದಕ್ಕಿದ್ದಂತೆ ತಂಗಾಳಿ ಬೀಸಿತು ಹೊರಗಿನಿಂದ. ಸರುವಿನ ನೆನಪಾಯಿತು. ಸರು ! ಸರು ! ಸರು ! ಸರು ಎಂತಹ ರೂಪವತಿ ! ಕೆರೆಯ ನೀರಿನಲ್ಲಿ ಪ್ರತಿಬಿಂಬ ನೋಡು ತ್ತಿದ್ದರೆ ಎಷ್ಟೊಂದು ಸೊಗಸಾಗಿರುತ್ತಿತ್ತು. ಸುಂದರ ಆಕಾಶದಲ್ಲಿ ಭಂಗಾರದ ಮೋಡದಂತೆ ಕಾಣುತ್ತಿದ್ದಳು ! ಅವಳನ್ನು ನೋಡಿ, ತಿಳಿದವನಿಗೆ, ವಸಂತ ! ವಸಂತಋತುವಾದ ಮೇಲೆ ಇದ್ದಕ್ಕಿದ್ದಂತೆ ಹಿಮಂತಬಂದಂತೆ ! ಮೂರ್ತಿಗೆ ಕಣ್ಣು ತುಂಬಿಬಂತು. ಸರು ಹಾಗಾಗದೆ ಹೋಗಿದ್ದರೆ !

" ಮೂರ್ತಿ, ಮೂರ್ತಿ "

ಮೂರ್ತಿ ಬೆಚ್ಚಿ ಎಚ್ಚೆತ್ತ ! ಎದುರಿಗೆ ಮ್ಯಾನೇಜರ್. ತಕ್ಷಣ ಎಲ್ಲವೂ ನೆನಪಾಯಿತು. ತಲೆ ತಗ್ಗಿಸಿ ಯೋಚಿಸಿದ. ಕೊನೆಗೆ ಕಷ್ಟದಿಂದ ಹೇಳಿದ.

"ಕೊಂಚ ಕಾಲ ಬೇಕು ಸಾರ್ ಯೋಚಿಸಲು. ನಾಳೆ ಭಾನುವಾರ. ನಾಡಿದ್ದು ಸಂಜೆ ತಿಳಿಸುತ್ತೇನೆ ಸಾರ್. ನಾಳೆ ನಾನು ಪಾಠಕ್ಕೆ ಬರುವುದಿಲ್ಲ ಸಾರ್."

ಹೊರಗೆ ಗಾಳಿ ಸುಯ್ಯನೆ ಬೀಸಿ, ಇರುಳು ಆಹ್ವಾನಿಸುತ್ತಿತು. ಮೂರ್ತಿ ಕ್ಲಬ್ಬಿನಿಂದ ಹೊರಬಿದ್ದು ಅಂಧಕಾರದಲ್ಲಿ ಮಾಯವಾದ!

* * *

ಮೂರ್ತಿ ಕೊಠಡಿ ಬಾಗಿಲು ತೆರೆದು ಕುಳಿತುಕೊಳ್ಳುತ್ತಲೇ ಬಂತು ಸವಾರಿ! ಕಮಲ ಬಳುಕುತ್ತಾ ಕಿಟಕಿಯಿಂದ ಬಗ್ಗಿ ನೋಡಿದಳು. ಬಾಗಿಲು ತೆಗೆದಿದ್ದುದನ್ನು ನೂಕಿಕೊಂಡು ಹಾಗೆಯೇ ಒಳಕ್ಕೆ ಬಂದೇಬಿಟ್ಟಳು. ಮೂರ್ತಿ ಗಾಢಚಿಂತೆಯಲ್ಲಿ ಮಗ್ನನಾಗಿದ್ದವನು ಅವಳ ಕಡೆಗೆ ನೋಡಲೇ ಇಲ್ಲ. ಹಾಗೆಯೇ ಕೊಂಚಹೊತ್ತು ಕುಳಿತಿದ್ದವಳು ಅವನ ಗಮನ ಸೆಳೆಯಲು ಕೆಮ್ಮಿದಳು ಕಮಲ. ಮೂರ್ತಿ ತಿರುಗಿದ.

ಈಚೆಗಂತೂ ಮೂರ್ತಿಗೆ ಕಮಲಳ ಮುಖ ಕಂಡರೇ ವೈಯುರಿಯುತ್ತಿತ್ತು. ಯಾವ ವಾರಾಂಗನೆಗೂ ಯಾವ ವಿಧದಲ್ಲೂ ಕಡಿಮೆಯಿಲ್ಲ. ಅದೇನು ವೈಯಾರ, ಕೊಂಚವಾದರೂ ನಾಚಿಕೆಯೇ ಬೇಡವೇ? ಅದೂ ತಾನೇತಾನಾಗಿ ಬಂದು ಮೇಲೆ ಬೀಳುವುದೆಂದರೆ!

"ಏನು ಮಾಡುತ್ತಿದ್ದೀರಿ?"

ಮೂರ್ತಿ ಸುಮ್ಮನಿದ್ದ.

"ನನ್ನ ಮೇಲೆ ಕೋಪವೇ?"

ಮೂರ್ತಿ ಮಾತನಾಡಲೇ ಇಲ್ಲ. ಒಂದು ಕಡೆ ವಸಂತ! ಒಂದು ಕಡೆ ಕಮಲ! ಈ ಇಕ್ಕಳದ ನಡುವೆ ಸಾಕಾಗಿ ಹೋಗಿತ್ತು ಮೂರ್ತಿಗೆ!

"ಹೋಗಲಿ, ನಾನು ಸಹಾಯ Help ಮಾಡಲೇ?"

ಮೂರ್ತಿಗೆ ತಡೆಯಲಾಗಲಿಲ್ಲ. ಬಹು ಕೋಪದಿಂದ "ಹುಂ. ಸಹಾಯ ಮಾಡುವಿರೇನು? ಅಲ್ಲಿಂದೆದ್ದು ಹೊರಗೆ ಹೋದರೆ ದೊಡ್ಡ ಸಹಾಯ; ಮತ್ತೆ ನನ್ನ ರೂಮಿಗೇ ಕಾಲಿಡದಿದ್ದರೆ ಮಹಾಪ್ರಸಾದ, ಹೊರಡಿ ಎದ್ದು" ಎಂದು ತಾನೇ ಎದ್ದುನಿಂತ ಮೂರ್ತಿ!

ಕಮಲಳ ಮುಖ ವಿಪರೀತ ಕೆಂಪಾಯಿತು. ಕೆರಳಿ ಎದ್ದು ನಿಂತು ಅವನ ಕಡೆಗೊಮ್ಮೆ ದುರುಗುಟ್ಟಿ ಅಲ್ಲಿಂದ ದಡಬಡನೆ ಹೊರಟುಹೋದಳು.

"ಸದ್ಯ! ಶನಿ ತೊಲಗಿತು!" ಎಂದುಕೊಂಡು ಮೂರ್ತಿ ಬಾಗಿಲು ಹಾಕಿದ ಹಾಸಿಗೆಯ ಬಳಿ ಬಂದು ಬಿದ್ದುಕೊಳ್ಳುವ ವೇಳೆಗೆ ಬಾಗಿಲು ತಟ್ಟಿದ ಸದ್ದು. ಮತ್ತೆ ಎಲ್ಲಿ ವಕ್ರಿಸಿತೋ ಈ ಪೀಡೆ ಎಂದುಕೊಂಡು ಹೆದರಿದ. ಆದರೆ ತಟ್ಟಿದವನು ಶೇಷು!

ಒಳಗೆ ಬಂದವನೇ ಶೇಷು ಮೂರ್ತಿಯ ಪಕ್ಕದಲ್ಲಿ ಕೂತ. ಇಬ್ಬರೂ ಸೇರಿ ಅಗ್ಗಿಷ್ಟಿಕೆ ಹೊತ್ತಿಸಿ ಒಂದಿಷ್ಟು ಟೀ ಕಾಸಿದರು. ಮೂರ್ತಿ ಎಲ್ಲಾ ತಿಳಿಸಿದ.

"ನೋಡು ಶೇಷು, ಈಗೇನು ಮಾಡುವುದೋ ತೋಚದೇ ಹೋಗಿದೆ. ಮ್ಯಾನೇಜರರ ಮಗಳಿಗೆ ಮಾಂಗಲ್ಯ ಕಟ್ಟುವುದಕ್ಕಿಂತ ಕೆರೆ ಬೀಳುವುದೇ ಲೇಸು.''

"ಹೀಗಾಗುತ್ತೆ ಅಂತ ಮೊದಲೇ ತಿಳಿದಿದ್ದರೆ...."

"ಮದುವೆಗೊಪ್ಪುವುದಿಲ್ಲವೆಂದು ಹೇಳಿಬಿಡುವುದು. ನನ್ನ ಮೇಲೆ ಅವರಿಗೆ ಕೋಪಬಂದರೂ ಬರಬಹುದು. ಬರಲಿ ಏನೀಗ?"

"ಹೂಂ. ಅದೇ ಸರಿ!"

"ಅದೇನೋ ಸರಿ. ಆದರೆ ಈ ಶನಿಗೇನು ಮಾಡುವುದೋ? ಈ ಮೋಹಿನಿ, ಶಾಕಿನಿ, ಡಾಕಿನಿ ಅಂತಾರಲ್ಲಾ, ಅದು ಕಾಡಿದ ಹಾಗೆ ಕಾಡುತ್ತಾಳೆ!"

"ಇನ್ನೇನೋ ಮೂರ್ತಿ, ಈವತ್ತು ಮುಖಕ್ಕೆ ಮಂಗಳಾರತಿ ಎತ್ತಿದೀಯಲ್ಲಾ ಸಾಲದೇ? ಮುಂದೆ ಏನಾದೀತೋ ನೋಡೋಣ!"

ಮಾತನಾಡುತ್ತಿದ್ದಂತೆ ಹೊರಗೆ ಕಾಲಿನ ಸಪ್ಪಳವಾಯಿತು. ಬಾಗಿಲನ್ನು ನೂಕಿಕೊಂಡು ಒಳಕ್ಕೆ ಬಂದರು ರಾಮಣ್ಣ! ಮೂರ್ತಿಗೂ ಶೇಷುಗೂ ಆಶ್ಚರ್ಯ! ಮೂರ್ತಿ ಮನೆಬಿಟ್ಟು ಬಂದಾಗಲೇ ಆರು ತಿಂಗಳ ಮೇಲಾಗಿತ್ತು. ಎದುರಿಗೆ ಕಂಡರೂ ಮಾತನಾಡಿಸದವರು ತಾವಾಗಿಯೇ ಬಂದರೆಂದರೆ, ಏನೋ ಪ್ರಪಂಚ ತಲೆಕೆಳಗಾಗುವ ದಿನ ಬಂತೆನ್ನಿಸಿತು! ಮೂರ್ತಿ ಅವರನ್ನು ಕರೆದು ತನ್ನ ಹಾಸಿಗೆಯ ಮೇಲೆ ಕೂರಿಸಿದ.

"ಅಣ್ಣಾ, ಮನೆಯಲ್ಲಿ ಸೌಖ್ಯ ತಾನೆ...."

"ಹೂಂ, ಇದ್ದಾಳೆ. ಮೂರ್ತಿ ನಿನ್ನನ್ನೊಂದು ಮಾತು ಕೇಳಲು ಬಂದೆ"

ಎನ್ನುತ್ತಾ ಶೇಷುವಿನ ಕಡೆ ನೋಡಿದರು. ಶೇಷು ಏಳಲು ಹೋದವನನ್ನು ಮೂರ್ತಿ ಕಣ್ಸನ್ನೆಯಿಂದ ಕೂರಿಸಿದ.

"ಹುಂ"

"ನೋಡು, ಮೂರ್ತಿ, ನನಗೂ ವಯಸ್ಸಾಯಿತು. ಮನೆಯಲ್ಲಿ ಮಕ್ಕಳುಮರಿ ಒಂದೂ ಇಲ್ಲ, ಬಿಕೋ ಎನಿಸುತ್ತೆ!"

ಮೂರ್ತಿಗೆ ನಗು ಬಂತು. ಶೇಷುವಿನ ಕಡೆ ನೋಡಿದ. ಅವನು ಛಾವಣಿಯಲ್ಲಿನ ಹೆಂಚುಗಳನ್ನೆಣಿಸುತ್ತಿದ್ದ.

"ನೀನೂ ವಯಸ್ಸಾದವನು. ನೀನೂ ಒಂದು ಮದುವೆಯಾದರೆ, ಮನೆಗೇ ಬಂದರೆ, ಮೊದಲಿನಂತೆಯೇ...."

"ಹಿಂಸಿಸಬಹುದು ಅವಳನ್ನೂ!"

"ಅಯ್ಯೋ! ಆ ಮಾತೇಕೆ ಆಡುತ್ತೀ ಮೂರ್ತಿ? ಹಳೆಯದನ್ನೆಲ್ಲಾ ಮರೆತುಬಿಡೋಣ! ಎಷ್ಟೋ ತಪ್ಪಾಗುತ್ತೆ; ಆದರೆ ನಾವು ಅದನ್ನೆಲ್ಲಾ ಗಣಿಸಿದರೆ ಸಾಧ್ಯವೇ? ಬೆಳಗ್ಗೆ ಯಾರೋ ಬಂದಿದ್ದರು, ೩೦೦೦ ರೂಪಾಯಿ ವರದಕ್ಷಿಣೆ ಕೊಡುವೆನೆಂದರು. ವರೋಪಚಾರವೆಲ್ಲಾ ಮಾಡುತ್ತಾರೆ. ಹುಡುಗಿಗೆ ನಗನಾಣ್ಯವೆಲ್ಲಾ ಕೊಡುತ್ತಾರೆ. ಯಾವುದಕ್ಕೂ ಕಡಿಮೆಯಿಲ್ಲ. ಎರಡು ಖರ್ಚೂ ಅವರದ್ದೇ, ನಿನಗೂ ಅನುಕೂಲವಾಗುತ್ತೆ!"

ಮೂರ್ತಿ ತಂದೆಗೂ ಒಂದು ಲೋಟ ಟೀ ಬಗ್ಗಿಸಿ ಕೊಟ್ಟು, ಶೇಷುವಿನ ಮುಂದೆಯೂ ಒಂದು ಲೋಟ ತಂದಿಟ್ಟು ತಾನೂ ಒಂದು ಲೋಟ ತೆಗೆದುಕೊಂಡ. ರಾಮಣ್ಣನವರು ಟೀ ಬಹು ಬಿಸಿಯೆಂದು ಅಲ್ಲಿಯೇ ಇಟ್ಟರು, ಕೊಂಚ ಆರಲೆಂದು!

"ನನಗೇನು ಅನುಕೂಲ?" ಎಂದ ಮೂರ್ತಿ.

"ಇದೆಲ್ಲಾ ಅಲ್ಲದೆ ಹುಡುಗಿ ಚೆನ್ನಾಗಿದಾಳೆ. ಒಳ್ಳೆಯ ಮನೆತನದವರು. ದೇವರಲ್ಲಿ ಭಕ್ತಿ, ಶ್ರದ್ಧೆ ಎಲ್ಲಾ ಉಳ್ಳವರು. ನೋಡಪ್ಪಾ...."

"ಯಾರು?"

"ನಿನಗೂ ಅವರು ಗೊತ್ತಂತೆ. ನೀನೂ ಹುಡುಗಿಯನ್ನು ನೋಡಿರುವೆಯಂತೆ, ಒಪ್ಪಿರುವೆಯಂತೆ! ಅವರೇ ಹೇಳಿದರು, ನಿನಗೆ ಸಂಬಳವೂ ಹೆಚ್ಚು—"

"ಓಹೋ!"

" ನಿಮ್ಮ ಮ್ಯಾನೇಜರ್. "

ಮೂರ್ತಿಯ ಮುಖ ಗಡುಸಾಯಿತು. ಕೊಂಚ ಕಾಲ ಸುಮ್ಮನಿದ್ದ.

" ಈಗ, ನಿಮಗೆ ನನ್ನ ನೆನಪಾಯಿತೇನೋ? ಹಣ, ನಗ, ನಾಣ್ಯ ಬರುತ್ತೆ! ಬಾಚಿಕೊಳ್ಳೋಣವೆಂದು! ನಾನು ಮದುವೆಯಾಗುವುದಿಲ್ಲ!" ಎಂದ.

" ನೋಡು, ದುಡುಕಬೇಡ ಮೂರ್ತಿ! ನಿಧಾನವಾಗಿ ಯೋಚಿಸು. ಇಂತಹ ಒಳ್ಳೆಯ ಅವಕಾಶ ಸಿಗುವುದಿಲ್ಲ. ಎಷ್ಟೊಂದು ವರದಕ್ಷಿಣೆ! ನಾವು ಸ್ವಲ್ಪ ಹೇಳಿದರೆ ೫೦೦೦ ಕೂಡ ಕೊಡುತ್ತಾರೆ. ಇದೂ ಅಲ್ಲದೆ ನಿನಗೂ ಸಂಬಳ.... "

"ಸಾಧ್ಯವಿಲ್ಲವೆಂದಮೇಲೆ ಸಾಧ್ಯವೇ ಇಲ್ಲ. ನಾನು ಮದುವೆಯಾಗುವುದೇ ಇಲ್ಲ."

" ಹುಂ! ಹಾಳಾಗಿಹೋಗು! ನಿನಗೂ ನನಗೂ ಯಾವ ಋಣಾನು ಬಂಧವೂ ಇಲ್ಲ!" ಎನ್ನುತ್ತಾ ಚಡಪಡಿಸಿ ಎದ್ದರು ರಾಮಣ್ಣ. ಅವರು ಹೋಗುವ ಅವಸರದ ನಡಗೆಯಲ್ಲಿ ಟೀ ಲೋಟ ಉರುಳಿ ಧೋತ್ರವೆಲ್ಲ ಕರೆಯಾಯಿತು!

ಶೀನು ಹೆಂಚುಗಳನ್ನೆಲ್ಲಾ ಎಣಿಸಿಯಾಯಿತೆಂದು ತೋರುತ್ತದೆ. ಮೂರ್ತಿಯ ಕಡೆ ತಿರುಗಿದ.

" ಪರವಾಗಿಲ್ಲ ಮೂರ್ತಿ, ನಿಮ್ಮ ತಂದೆ ಏನೋ ಅಂದುಕೊಂಡಿದ್ದೆ. "

" ಇಲ್ಲ ಶೀನು! ನೋಡು ಇಳಿದುಹೋಗಿದಾರೆ. ಪಾಪ! ಅವರಿಗೂ ಜೀವದಲ್ಲಿ ಸುಖವಿಲ್ಲ. ಕೆಟ್ಟ ಬೋಧನೆ!"

" ನಮ್ಮ ಅಜ್ಜನ ಹಾಗೆಯೇ, ಮೊನ್ನೆ ಬಂದು ನನ್ನ ಮೇಲೆ ರೇಗಿದರು ಅಜ್ಜ! ಯಾರೋ ಏನೋ ಚುಚ್ಚಿದಾರೆ, ನಿನ್ನ ಜತೆಗೆ ನಾನು ಸೇರಿ ಪೋಲಿ ಕೆಟ್ಟುಹೋದೆ ಅಂತ."

" ಹಾಳಾಗಲಿ ಬಿಡು! ನನಗೇಕೊ ಬೇಜಾರಾಗಿ ಹೋಗಿದೆ. "

" ನೀನೇ ಹೀಗೆಂದರೆ ಹೇಗೆ ಮೂರ್ತಿ? ಶಂಕರುವಿನ ಮಾತು ಮರೆತೆಯಾ? ಆದರ್ಶಕ್ಕಾಗಿ ಹೆಣಗುವ ಸಂಕಲ್ಪ ಹೋಯಿತೇ? "

ಮೂರ್ತಿಯ ಕಣ್ಣಿನಲ್ಲಿ ನೀರು ಉಕ್ಕಿ ಹರಿಯಿತು. ಶೀನುವಿನ

ಕೈಯನ್ನು ಭದ್ರವಾಗಿ ಹಿಡಿದ. ನಾಲ್ಕು ಕಣ್ಣುಗಳಲ್ಲಿಯೂ ಒಂದೇ ದೃಢತೆ ಮೂಡಿ ಕೈಗಳನ್ನು ಬಿಗಿಯಾಗಿ ಕೂಡಿಸಿತ್ತು!

ಎದುರು ಮನೆಯಿಂದ ಗ್ರಾಮಫೋನ್ ರಿಕಾರ್ಡಿನ ಹಾಡಿನ ತುಣುಕೊಂದು ಗಾಳಿಯಲ್ಲಿ ಅವರೆಡೆಗೆ ತೂರಿ ಬಂತು.

"ಜಿಂದಗೀಕೆ ಕಾರವಾ಼ ಚಲ್‌ನಾ ಹೈರೇ, ಪಗಲೇ, ಚಲ್‌ನಾ ಹೈ!"

"ಬಾಳ ಪಯಣ ಸಾಗಬೇಕು, ಹುಚ್ಚಿ! ಸಾಗಲೇಬೇಕು!"

## ೧೧

ಮೂರ್ತಿ ಮ್ಯಾನೇಜರರ ಮನೆಗೆ ಹೋಗಿ ಪಾಠ ಹೇಳುವುದು ನಿಲ್ಲಿಸಿದ. ಅವರನ್ನು ಸರಿಯಾಗಿ ಮಾತನಾಡಿಸುತ್ತಲೂ ಇರಲಿಲ್ಲ. ಅವರೂ ಮೊದಲು ಅವನನ್ನು ಕಂಡರೆ ಎಷ್ಟು ವಿಶ್ವಾಸ ತೋರಿಸುತ್ತಿದ್ದರೋ ಅಷ್ಟು ದ್ವೇಷ ತೋರಲಾರಂಭಿಸಿದರು. ಮಾತುಮಾತಿಗೂ ಅವನ ಮೇಲೆ ರೇಗುವುದು. ಅವನು ಮಾಡಿದ ಪ್ರತಿಯೊಂದರಲ್ಲೂ ಒಂದಲ್ಲ ಒಂದು ಹುಳುಕು ಕಂಡು ಹಿಡಿಯುವುದಾರಂಭವಾಯಿತು. ಅವನನ್ನು ಕಂಡಾಬಟ್ಟೆ ಕೆಲಸಕ್ಕೆ ಹಚ್ಚುತ್ತಿದ್ದರು. ಇದುವರೆಗೂ ಮೂರ್ತಿ ಬಹು ಕಷ್ಟದಿಂದ ಕೆಲಸಮಾಡಿ ಯಾವುದೋ ಒಂದು ಶೋಧನೆಯಲ್ಲಿ ನಿರತನಾಗಿದ್ದ. ಅವನೂ ಇನ್ನೊಬ್ಬ ಕೆಲಸಗಾರನೂ ಬಹು ಸುಲಭ ಬೆಲೆಯಲ್ಲಿ ಒಂದು ಸಾಮಗ್ರಿಯನ್ನು ತಯಾರಿಸುವ ಶೋಧನೆ ನಡೆಸುತ್ತಿದ್ದರು. ಅದು ಇನ್ನೇನು ಪೂರ್ಣವಾಗುವ ಸ್ಥಿತಿಗೆ ಬಂದಿತ್ತು. ಆಗ ಇದ್ದಕ್ಕಿದ್ದಂತೆ ಇಬ್ಬರಿಗೂ ಬೇರೆ ಕೆಲಸ ತಗಲುಹಾಕಿದರು. ಇದರಿಂದ ಅವರ ಶೋಧನೆಯ ಕೆಲಸಕ್ಕೆ ಮತ್ತಾರೋ ಬಂದರು. ಕೊನೆಯ ಘಟ್ಟ ಪೂರೈಸಿ ಕೆಲಸದ ಫಲ ಪಡೆದವರು ಅವರು! ಕೊಂಚಕಾಲವೇನಾದರೂ ನಿಂತರೆ, "ಕಾಲಕಳೆಯುವುದಕ್ಕಲ್ಲ ಕೂಲಿ ಕೊಡುವುದು!" ಎಂದು ಹಂಗಿಸುತ್ತಿದ್ದರು. ಮಾತುಮಾತಿಗೂ ಮೂರ್ತಿಗೆ ಅವನೊಬ್ಬ ಕೂಲಿ, ತಾವು ಮೇಲಿನ ಅಧಿಕಾರಿ ಎಂಬುದನ್ನು ತೋರಿಕೊಡುತ್ತಿದ್ದರು. ಮೂರ್ತಿಯೇನಾದರೂ ರಜೆಯ ಚೀಟಿ ಕಳುಹಿಸಿದರೆ ಚೀಟಿಯೇ ಕಳೆದುಹೋಗಿರುತ್ತಿತ್ತು. ಏನಾದರೂ ಕೇಳಿದರೆ "ತಿಂಗಳಿಗಿಪ್ಪತ್ತು ದಿನ ರಜಾಕೊಡಲು ನಿಮ್ಮ ತಾತನದೇ ಕಾರ್ಖಾನೆ?" ಎನ್ನುವರು. ವರದಿಯಲ್ಲಿ ಮೂರ್ತಿಯ ಮೇಲೆ ಕೆಡುಕು

ಅಭಿಪ್ರಾಯ ಸೂಚಿಸಿದ್ದರು. ಇದರಿಂದ ಮೂರ್ತಿಗೆ ಬೆಳಗುಳದ ಜೀವನ ಬಹಳ ಕಠಿನವಾಗುತ್ತಾ ಬಂತು. ದಿನೇದಿನೇ ಬೇಸರ ವಿಪರೀತವಾಗುತ್ತಿತ್ತು. ಕೆಲಸಕ್ಕೆ ಸೇರಿ ಆಗಲೇ ಒಂದು ವರ್ಷವಾದರೂ ಸಾಕಷ್ಟು ಹಣವೂ ಕೂಡಿರಲಿಲ್ಲ. ಇನ್ನೂ ಒಂದು ವರ್ಷ ಇರಬೇಕು!

ಸಂಜೆ ೬ ಗಂಟೆಯ ಸಮಯ. ಮೂರ್ತಿ, ಶೇಷು ಇಬ್ಬರೂ ನಡೆದು ಹೋಗುತ್ತಿದ್ದರು ತೋಚಿದಂತೆ.

"ನೋಡು, ಶೇಷು. ಬೆಳಗ್ಗೆ ರೈಲು ಹೊತ್ತಾಗಿಹೋಯಿತು. ಅದಕ್ಕೆ ೫ ರೂಪಾಯಿ ದಂಡ ತೆರಬೇಕು."

"ನಿಮ್ಮ ಮ್ಯಾನೇಜರ್ ಒಳ್ಳೆಯ ಸೇಡು ತೀರಿಸಿಕೊಳ್ಳುತ್ತಿದ್ದಾನೆ ಮೂರ್ತಿ."

"ಸದ್ಯ! ಇದನ್ನಾದರೂ ಅನುಭವಿಸಬಹುದು. ಆ ಮದುವೆ! ಅಬ್ಬಾ! ಆ ಹುಡುಗಿಯನ್ನು ನೆನೆದರೇ ನಡುಕ ಬರುತ್ತದೆ!"

"ಅದೆಲ್ಲಾ ಸರಿ, ಇಲ್ಲಿ ಹೇಗಿದೆ ರೂಮಿನಲ್ಲಿ?"

"ನಿನಗೆ ಹೇಳುವುದನ್ನೇ ಮರೆತಿದ್ದೆ. ಈಗ ಅವಳು ನನ್ನ ಕಡೆಗೆ ನೋಡಿದರೇ ಮುಖ ತಿರುವಿಕೊಳ್ಳುತ್ತಾಳೆ! ಇಲ್ಲದಿದ್ದರೆ ಕ್ರೂರವಾಗಿ ನೋಡುತ್ತಾಳೆ. ಆದಿನ ನಾನಂದುದು ಸಾಕಷ್ಟು ಪರಿಣಾಮಕಾರಿಯಾದಂತೆ ಕಾಣುತ್ತದೆ."

"ಹೋಗಲಿ ಬಿಡು."

"ಆದರೆ ಇನ್ನೊಂದೆಂದರೆ ಮತ್ತಾರ ಮೇಲೋ ಆಕೆ ಬಲೆ ಬೀಸಿದ್ದಾಳೆ. ಆ ಪಶು ಸಿಕ್ಕಿಕೊಂಡಿದೆ. ಮೊನ್ನೆ ಮೊನ್ನೆ ನನಗೆ ಗೊತ್ತಾಯಿತು. ಆ ಉದ್ದನೆಯ ಹುಡುಗ, ಅಯ್ಯರ್ ಹುಡುಗ, ಕಾಲೇಜಿನಲ್ಲಿ ಹೋದ ವರ್ಷ ಓದುತ್ತಿದ್ದ. ಈಗ ಪೋಲೀಸ್ ಇಲಾಖೆಯಲ್ಲಿ ಸೇರಿದಾನೆ ನೋಡು ಅವನು."

"ಅವನ ಹೆಸರು, ಅದೇನು? ಕೃಷ್ಣಸ್ವಾಮಿಯೇ?"

"ಅಲ್ಲ ಕಣೋ. ಈಗ ಜ್ಞಾಪಕಕ್ಕೆ ಬಂತು, ದೊರೆಸಾಮಿ! ಈಗ ಹದಿನೈದು ದಿನದ ಹಿಂದೆ ಅವನು ಒಂದು ನನ್ನ ಕಿಟಕಿಯ ಪಕ್ಕದಲ್ಲಿ ಹಾದು ಹೋದ. ಯಾರೋ ಹೊಸಬನೆಂದು ನೋಡಿದರೆ ಇವನು! ಬಾಗಿಲ ಬಳಿ ಹೋಗಿ 'ಕಮಲು' ಎಂದ. ಬಾಗಿಲು ತೆರೆದು ಮುಚ್ಚಿದ ಸಧ್ದಾಯಿತು. ಅವರ

ಸರಸಸಲ್ಲಾಪ ಚೆಲ್ಲಾಟಗಳ ಸದ್ದು ನನಗೆ ಕೇಳುತ್ತಿತ್ತು. ಪರವಾಗಿಲ್ಲ ಹುಡುಗಿ, ಎಂದುಕೊಂಡೆ!"

"ಏನು ಪರವಾಗಿಲ್ಲವೋ."

ಮೂರ್ತಿಯ ಮುಖದಲ್ಲಿ ದುಗುಡ ಮಿಂಚುತ್ತಿತ್ತು.

"ಶೇಷು. ಬಾಳೆಲ್ಲಾ ಬರಿಯ ಕಷ್ಟವೇ ಆಗಿಹೋದರೆ ಹೇಗೆ, ಶೇಷು? ನನಗೆ ಈಗೀಗ ಬಹಳ ಬಾರಿ ಅನಿಸುತ್ತಿದೆ. ಇನ್ನೂ ಎಷ್ಟು ದಿನ ಹೀಗೆ ಏಗುವುದು? ಎಷ್ಟೊಂದು ದುಡಿದರೂ ಮನಸ್ಸಿಗೆ ಶಾಂತಿ ಇಲ್ಲ! ಹೌದು, ನಾನೂ ಧ್ಯೇಯಕ್ಕಾಗಿ ಹೋರಾಡಬೇಕು. ಬಾಳಿನಲ್ಲಿರುವ ಸುಖವೆಂದರೆ ಅಲ್ಲಿರುವ ಕಷ್ಟದಕಾಸಾರ ಹಾದುಹೋಗುವುದು! ಆದರೂ.—"

"ಮೂರ್ತಿ, ಬಾಳು ಕಷ್ಟ! ಪ್ರಪಂಚ ಕೆಟ್ಟುದು! ಆದರೆ ಆಕೆಟ್ಟ ಜಗತ್ತಿನ ನಡವಳಿಕೆಯನ್ನು, ರೀತಿಯನ್ನು ಎದುರಿಸಲು ನಿನ್ನ ನನ್ನಂತಹವರು ಕೆಲವರಾದರೂ ಇಲ್ಲವೇ? ಪ್ರವಾಹದೊಂದಿಗೆ ಹೋಗಲು ಕಷ್ಟವಿಲ್ಲ. ಆದರೆ ಪ್ರವಾಹದೆದುರು ಸಾಗಲು ಬಲಿಷ್ಠ ಮನುಷ್ಯನೇ ಆಗಬೇಕು. ನಾವು ಸತ್ತ ಕತ್ತೆಗಳಂತೆ ಜಗತ್ತಿನ ಸಂಪ್ರದಾಯದ ಪ್ರವಾಹದಲ್ಲಿ ಹರಿಯುವ ಬದಲು, ಎಷ್ಟೇ ಕಷ್ಟವಾದರೂ ಸರಿ, ಸಂಪ್ರದಾಯವನ್ನಿದಿರಿಸೋಣ! ದುಡಿಯೋಣ! ಇಷ್ಟರ ಮೇಲೆ ಅಳಿದರೂ ಚಿಂತೆಯಿಲ್ಲ!"

ಇಬ್ಬರೂ ಮುಂದೆ ತಿರುಗಿದಂತೆ ಎದುರಿಗೆ ಒಂದು ಬೋರ್ಡು, ನ್ಯೂ ಥಿಯೇಟರ್ಸ್ ಚಿತ್ರ, ಜಿಂದಗಿ! ಬರುವಾರವರ ದಿಗ್ದರ್ಶನ!

"ಮೂರ್ತಿ, ಜಿಂದಗಿಗೆ ಹೋಗೋಣ ನಡಿ."

ಚಿತ್ರ ಶುರುವಾಗಲು ಸುಮಾರು ಇಪ್ಪತ್ತು ನಿಮಿಷವಿದ್ದುದರಿಂದ ಹೋಗಲು ಸಾಕಷ್ಟು ವೇಳೆಯಿತ್ತು. ಇಬ್ಬರೂ ಚಿತ್ರಕ್ಕೆ ನಡೆದರು.

"ಮೂರ್ತಿ, ಚಿತ್ರ ನೋಡಿದೆಯಾ? ಬಾಳನ್ನು ಒಂದು ಭಾವದಿಂದ ಅಳೆದು ಹೃದಯದ ಒಂದು ಕಾವ್ಯಭಾವವನ್ನೇ ಚಿತ್ರ ಮಾಡಿದ್ದಾನೆ ಬರುವಾ!"

"ಎಂತಹ ಅಮೋಘ ಚಿತ್ರ, ಶೇಷು! ಬೇವಾರ್ಸಿಯಾದರೂ ನಾಯಕನಲ್ಲಿ ಒಂದು ತತ್ವವಿದೆ, ಅವಳು ಕೂಡ ಎಂತಹ ಹೆಂಗಸು? ಗಂಡನ ಮನೆಯ ಹಿಂಸೆಗಾಗಿ ಅದನ್ನು ಬಿಟ್ಟುಬಂದು ಅವನೊಂದಿಗೆ ಬಾಳನಾವೆ ನಡೆಸಿ—ಅಬ್ಬಾ!"

"ನಿಜವಾಗಿ ಕಾವ್ಯವನ್ನೇ ಚಿತ್ರ ಮಾಡಿದಂತೆ ಮೂರ್ತಿ! ಬಾಳಿನ

ವಿಚಾರವಾಗಿ ಎಷ್ಟೊಂದು ಯೋಚನೆ ಮಾಡಿದ್ದೇವೆ ನಾವು; ಕವಿಯೂ ಯೋಚಿಸಿದ್ದಾನೆ. ನಿಜವಾದ ಬಾಳನ್ನು ಚಿತ್ರಿಸಿದ್ದಾನೆ; ಶೆಲ್ಲಿಯ ಕವಿತೆಗಳಂತೆ, ಹಾರ್ಡಿಯ ಕಾದಂಬರಿಗಳಂತೆ, ಭಟ್ಟಿಯಿಳಿಸಿದ ಕಾವ್ಯವಾಗಿದೆ ಈ ಚಿತ್ರ!"

"ಹೊತ್ತು ಬಹಳವಾಯಿತು ಶೇಷು. ರೂಮಿಗೆ ಹೋಗಿ ಅಡಿಗೆ ಮಾಡಿಕೊಳ್ಳಲು ಹೊತ್ತಾಗಿ ಹೋಗುತ್ತೆ. ಇಲ್ಲೇ ಒಂದಿಷ್ಟು ಕಾಫಿ ಕುಡಿದು ಬಿಡೋಣ."

"ನನಗೆ ಬೇಡವೋ ಮೂರ್ತಿ, ನೀನು ಕುಡಿ."

"ಹಾಗಾದರೆ ನನಗೂ ಬೇಡ."

ದೂರದಿಂದ ಒಬ್ಬ ಹುಡುಗ "ಮೈಸೂರು ಪತ್ರಿಕೆ, ಸಾಧ್ವಿ, ಮೂರೇ ಕಾಸು!" ಎಂದು ಕೂಗುತ್ತಿದ್ದ.

"ನೋಡು ಮೂರ್ತಿ, ಅವನದೂ ಒಂದು ರೀತಿಯ ಬಾಳು! ಪತ್ರಿಕೆ ಮಾರಿಕೊಂಡು ಬಂದ ಕಾಸೆರಡರಲ್ಲಿ ಅವನ ಜೀವನ ನೀಸಬೇಕು. ಇನ್ನೂ ಚಿಕ್ಕತನದಲ್ಲಿಯೇ ಈ ರೀತಿಯಲ್ಲಿ ಬಾಳಿನ ಪೆಟ್ಟಿಗೆ ಸಿಕ್ಕಿದವನು ಮುಂದೇನಾಗುವನೋ?"

"ಸಾರ್, ಪೇಪರ್ ಬೇಕೇ ಸಾರ್? ಬಿಸಿಬಿಸಿ ಸುದ್ದಿ! ಬೊಂಬಾಯಲ್ಲಿ ಎ. ಐ. ಸಿ. ಸಿ. ಸಭೆಯ ನಿರ್ಣಯವಿದೆ ಸಾರ್! ಮೂರೇ ಕಾಸು ಸಾರ್! ರಷ್ಯದಲ್ಲಿ ಜರ್ಮನರು ಹಿನ್ನಡೆಯುತ್ತಿದ್ದಾರೆ!"

"ಹೂಂ! ಕೊಡು ಒಂದು." ಎನ್ನುತ್ತಾ ಮೂರ್ತಿ ಮೂರು ಕಾಸು ಕೊಟ್ಟು ಒಂದು ಪ್ರತಿ ಮೈಸೂರು ಪತ್ರಿಕೆ ಕೊಂಡುಕೊಂಡು ಶೇಷುವಿನ ಕೈಗೆ ಕೊಟ್ಟ.

"ಮೂರ್ತಿ, ಬೊಂಬಾಯಲ್ಲಿ ಎ. ಐ. ಸಿ. ಸಿ. ಸಭೆ ಸೇರಿ ನಿರ್ಣಯಿಸಿದೆ. ಸತ್ಯಾಗ್ರಹ ಹೂಡಬೇಕು ಸ್ವಾತಂತ್ರ್ಯಕ್ಕಾಗಿ. ಗಾಂಧೀಜಿಯ ನಾಯಕತ್ವದಲ್ಲಿ ಭಾರತ ಮುನ್ನಡೆಯಬೇಕು, ಗಾಂಧೀಜಿಗೆ ಎಲ್ಲ ಅಧಿಕಾರವನ್ನು ವಹಿಸಿಕೊಟ್ಟಿದೆ. ಆದರೆ ಗಾಂಧೀಜಿ ಮೊದಲು ವೈಸರಾಯಿಯನ್ನೂ, ಜಿನ್ನಾ ಸಾಹೇಬರನ್ನೂ ಸಂಧಿಸಿ ಮಾತುಕತೆ ನಡೆಸಬೇಕು. ಅದಾವುದೂ ಫಲಕಾರಿಯಾಗದಿದ್ದರೆ ಅಹಿಂಸಾತ್ಮಕ ಚಳುವಳಿ ನಡೆಸಬೇಕು."

"ಏನೋಪ್ಪ! ಎಲ್ಲಾ ಕಡೆಯೂ ಒಂದೇ! ಗೋಳು! ಗೋಳು! ಅಲ್ಲೆಲ್ಲಾ ಯುದ್ಧ! ಇಲ್ಲಿ ದಾಸ್ಯ! ವ್ಯಕ್ತಿಯ ಬಾಳಿನಲ್ಲಿ ನೋವು, ನಾಡಿನ ಬಾಳಿನಲ್ಲಿ ದಾಸ್ಯ."

"ಆದರೆ ಗಾಂಧೀಜಿ ವೈಸರಾಯನ್ನೂ ಜಿನ್ನಾ ಸಾಹೇಬರನ್ನೂ ನೋಡುವ ವರೆಗೂ ತಡೆದೀತೇ ಸರ್ಕಾರ ಎನ್ನುವುದೇ ಪ್ರಶ್ನೆ? ಮುದುಕನನ್ನೂ ಕಾರ್ಯ ಕಾರೀ ಸಮಿತಿಯವರನ್ನೂ ಬಂಧಿಸಿಬಿಟ್ಟರೆ."

"ಬಂಧಿಸುವರೆಂದೇ ತೋರುತ್ತದೆ ನನಗೇನೋ. ಏಕೆಂದರೆ ಈ ಸರ್ಕಾರ ಎಷ್ಟಿದ್ದರೂ ದಬ್ಬಾಳಿಕೆಯದು!"

"ಆಗೇನಾದೀತೋ ನೋಡಬೇಕು ಮೂರ್ತಿ."

"ಗೊತ್ತೇ ಇದೆ ಶೇಷು. ಜನ ರೇಗುವರು, ಈಗಾಗಲೇ ಎಲ್ಲೆಲ್ಲೂ ಅಶಾಂತಿ ತಲೆದೋರಿದೆ. ಅದು ಭೀಕರವಾಗುತ್ತದೆ. ನಮ್ಮ ಕಾರ್ಖಾನೆಯ ಕೆಲಸಗಾರರಲ್ಲೂ ಅಸಮಾಧಾನ ಮೂಡಿದೆ. ಇದನ್ನೇ ನೆವಮಾಡಿಕೊಂಡು ಮುಷ್ಕರ ಹೂಡಿದರೆ."

"ನೀನು?"

"ಶೇಷು, ನಿನಗೆ ತಿಳಿದೇ ಇದೆ. ನನಗಾಗಿ ಏನಿದೆ ಹೇಳು? ನನ್ನವರಾಗಿ ಯಾರಿದ್ದಾರೆ?"

"ನಾನೂ ಅದೇ ಯೋಚಿಸುತ್ತಿದ್ದೆ ಮೂರ್ತಿ. ಚಳುವಳಿ ಆರಂಭವಾದರೆ, ವಿದ್ಯಾರ್ಥಿಗಳೂ ಅದರಲ್ಲಿ ಸೇರುವರು. ನಾನೂ ಸೇರಬೇಕು, ಸೇರುತ್ತೇನೆ. ಆದರೆ ಅದರಿಂದ ಮುಂದೆ ಆಗುವುದನ್ನು ಯೋಚಿಸಬೇಕು. ನಾನು ಚಳುವಳಿಗೆ ಸೇರಿ ಅಜ್ಜನ ಮನೆಯಲ್ಲಿರುವುದು ಅಸಾಧ್ಯ!"

"ಅಷ್ಟೇ ತಾನೆ? ಬಂದು ನನ್ನ ಜತೆಗಿದ್ದರಾಯಿತು. ಅದಕ್ಕೇನು ಯೋಚನೆ?"

"ಆದರೆ ನಿನಗೇ ತೊಂದರೆಯಾಗಿರುವಾಗ."

"ಶೇಷು, ನನಗೆ ಗೆಳೆಯನಿರುವವನು ನೀನೊಬ್ಬ. ನೀನು ಕೂಡ ಹೀಗೆ ಹಿಂದೆಗೆದರೆ! ನೀನು ದುಃಖದಲ್ಲಿರುವಾಗ ನಾನು ಸಹಾಯ, ಅದೂ ನನ್ನಿಂದಾ ದುದನ್ನು ನೀಡದಿದ್ದರೆ ನಮ್ಮಿಬ್ಬರ ಗೆಳೆತನವಿದ್ದೇನು ಪ್ರಯೋಜನ? ನನ್ನ ಹತ್ತಿರವೂ ಸಂಕೋಚವೇನೋ ಶೇಷು?"

" ಹಾಗೇನೂ ಇಲ್ಲ; ಸುಮ್ಮನೆ ಯೋಚಿಸಿದೆ ಅಷ್ಟೆ, ನೋಡೋಣ! "

ರಾತ್ರಿಯೆಲ್ಲಾ ಮೂರ್ತಿಗೆ ನಿದ್ರೆಯೇ ಬರಲಿಲ್ಲ. ಬೆಳಗ್ಗೆ ಬೆಳಗಿನ ಜಾವವೇ ರೈಲಿನಲ್ಲಿ ಹೋಗಬೇಕು ಕೆಲಸಕ್ಕೆ. ಆದರೆ ನಾಡಿನ ನಾಯಕರು! ಮುಂದೇನಾಗಿ ಹೋದೀತೊ? ಅರೆನಿದ್ರೆ ಬಂದಂತಾಗಿತ್ತು ಮೂರ್ತಿಗೆ. ಒಂದು ವಿಚಿತ್ರ ಬಗೆಯ ಕನಸು, ತಾನು ಜಗಳವಾಡಿದ ವ್ಯಕ್ತಿ ಯಾರೆಂಬುದೂ ಸರಿಯಾಗಿ ತೋರಲಿಲ್ಲ. ಮುಸಕುಮುಸಕಾಗಿ ಕಂಡಿತು ಆ ರೂಪ! ಒಮ್ಮೆ ತನ್ನ ತಂದೆಯಂತೆ, ಮತ್ತೊಮ್ಮೆ ಚಿಕ್ಕಪ್ಪ, ಮತ್ತೆ ಮ್ಯಾನೇಜರ್, ಸರೋಜ, ಕಮಲ, ವಸಂತರೂ ಕೂಡಿದಂತೆ! ಈ ಜಗಳದಲ್ಲಿ ತಾನಿನ್ನೇನು ಸೋತೆ ನೆನ್ನುವಾಗ ತನ್ನ ತಾಯಿ, ಶಂಕರು, ಶೇಷು ಕೂಡಿದಂತೆ ಒಂದು ವ್ಯಕ್ತಿ ತನ್ನನ್ನು ರಕ್ಷಿಸಿದುದು! ಮರುನಿಮಿಷ ಎಲ್ಲರೂ ಮಾಯವಾಗಿ ಅಲ್ಲೊಬ್ಬ ಪೋಲೀಸಿನವನು ತನ್ನನ್ನೊದ್ದುರುಳಿಸಿದುದು; ತಾನು ಚರಂಡಿಯೊಳಕ್ಕೆ ಬಿದ್ದುದು! ಮೂರ್ತಿ ಬೆಚ್ಚಿದ! ಎಚ್ಚರವಾಯಿತು. ಬೆಳಗಾಗಿ ಬಿಸಿಲು ಕಿಟಕಿಯಿಂದ ಒಳಬಂದು ಮುಖದ ಮೇಲೆ ಬಿದ್ದಿತ್ತು. ಅವಸರವಸರವಾಗಿ ಎದ್ದ ಮೂರ್ತಿ. ಇನ್ನು ಈ ದಿನವೂ ಕಾರ್ಖಾನೆಗೆ ಹೋಗುವಂತಿಲ್ಲ! ಹೋಗಲಿ, ಒಂದು ದಿನ ಹೋದರೇನೂ ಚಿಂತೆಯಿಲ್ಲವೆಂದುಕೊಂಡು ಮುಖ ತೊಳೆಯಲು ಕೆಳಗಿಳಿದು ನಲ್ಲಿಯ ಹತ್ತಿರ ಹೋದ. ಒಳಗಿಂದ ಕಮಲಳೂ ಅವಳ ಪೋಲೀಸ್ ಮಿತ್ರನೂ ಮಾತನಾಡಿಕೊಳ್ಳುತ್ತಿದ್ದುದು ಕೇಳಿಸಿತು.

" ಕಮಲು, ನನಗಿನ್ನು ಮೇಲೆ ಕೊಂಚ ಕೆಲಸ ಹೆಚ್ಚು. ಮೊದಲಿನಷ್ಟು ಜತೆಗಿರಲು ಸಾಧ್ಯವಿಲ್ಲ! "

" ಯಾಕೋ ಕಾಣೆ? ನಾನು ಬಿಡುವುದಿಲ್ಲ! "

" ನೋಡು, ಈ ಹಾಳು ಕಾಂಗ್ರೆಸ್‌ನವರು ಏನಾದರೂ ತರಲೆತಂಟೆ ಹಚ್ಚುತ್ತಾರೆ. ಒಂದಲ್ಲ ಒಂದು ರೀತಿಯಲ್ಲಿ ಗಲಾಟೆ ಹಚ್ಚಿ ನಮ್ಮ ಪ್ರಾಣ ಹಿಂಡುತ್ತಾರೆ. ಬೆಳಗ್ಗೆ ಬೊಂಬಾಯಿಯಲ್ಲಿ ಗಾಂಧಿ, ನೆಹ್ರು ಎಲ್ಲರನ್ನೂ ಹಿಡಿದರು. ಇನ್ನು ಜೈಲುಗಳನ್ನು ತುಂಬಬೇಕು ನಾವು. ಕುರಿಗಳನ್ನು ಹಿಡಿದ ಹಾಗೆ ಹಿಡಿಯಬೇಕು. ಅವರು ಅವಾಂತರಮಾಡಿದ ಮೇಲೆ ನಾವು ತೆಪ್ಪಗಿರುವಂತೆಯೇ ಇಲ್ಲ! ಸರಿ! ನಮಗೂ ಕೆಲಸ ವಿಪರೀತ. ಆದರೆ ನಾನೂ ಇದ್ದುದರಲ್ಲೇ ಪುರುಸೊತ್ತು ಮಾಡಿಕೊಂಡು; ನನ್ನ ಕಮಲು, ನೀನೂ

ಕೊಂಚ ಸಹಾಯಮಾಡಬೇಕು. ನಿನ್ನೆ ಸಂಜೆ ಉಟ್ಟಿದ್ದೆಯಲ್ಲಾ ಆ ಬಿಳಿಯ ಖಾದಿಯ ಸೀರೆ ಅದನ್ನುಟ್ಟುಕೊಂಡು ಈ ಹೆಂಗಸರ ಸಭೆಗಳಿಗೆ ಹೋಗಿ ಸುದ್ದಿ ತಂದು ತಿಳಿಸು. ಹಾಗೇ, ನನ್ನ ಮುದ್ದು!"

ಮೂರ್ತಿಗೆ ತಲೆಯ ಮೇಲೆ ಆಕಾಶವೇ ಬಿದ್ದಂತಾಯಿತು. ಅವಸರವ ಸರವಾಗಿ ಬಟ್ಟೆ ಹಾಕಿಕೊಂಡು ಶೇಷುವಿನ ರೂಮಿಗೋಡಿದ.

* * *

ಸಂಜೆ ವಿದ್ಯಾರ್ಥಿಗಳೆಲ್ಲರೂ ಸಭೆ ಸೇರಿ ಮುಷ್ಕರ ಹೂಡುವುದೆಂದೇ ತೀರ್ಮಾನಿಸಿದರು. ನಾಡಿನ ನಾಯಕರ ಬಿಡುಗಡೆಯಾಗುವವರೆಗೂ ಶಾಲಾ ಕಾಲೇಜುಗಳಿಗೆ ಬಹಿಷ್ಕಾರ ಹಾಕಬೇಕು. ನಾಯಕರ ಬಿಡುಗಡೆಗಾಗಿ ಚಳುವಳಿ ನಡೆಸಬೇಕು. ಎಲ್ಲೆಡೆಯಲ್ಲಿಯೂ ರಾಷ್ಟ್ರೀಯತೆಯ ಪ್ರಚಾರ ನಡೆಸಬೇಕೆಂದೂ ತೀರ್ಮಾನಿಸಿದರು. ಮುಷ್ಕರ ಸರಿಯಾಗಿ ಶಿಸ್ತಿನಿಂದ ಸುಗಮವಾಗಿ ಸಾಗಲೆಂದು ಒಂದು ಕೇಂದ್ರ ಸಮಿತಿಯನ್ನು ನಿಯಮಿಸಿಕೊಂಡರು. ಶೇಷುವೂ ಕೇಂದ್ರಸಮಿತಿಯ ಸದಸ್ಯರಲ್ಲಿ ಒಬ್ಬ!

ಮರುದಿನ ಬೆಳಿಗ್ಗೆ ಎಂದಿನಂತೆ ಮೂರ್ತಿ ಕೆಲಸಕ್ಕೆ ನಡೆದ. ಕಾರ್ಖಾನೆ ಯಲ್ಲಿ ಆಗಲೇ ಕೊಂಚ ಗಲಾಟೆಯಾಗಿತ್ತು. ಮೂರ್ತಿಯ ಓದುಗ ಗೆಳೆಯ ನಾಗಲೇ ಕೆಲವರಿಗೆ ಬೋಧಿಸಿದ, ಕೆಲಸಗಾರರು ಮುಷ್ಕರ ಹೂಡುವುದೇ, ಕೆಲಸಕ್ಕೆ ಹೋಗುವುದೇ ಎಂದು ಬಹಳ ಯೋಚನೆಮಾಡುತ್ತಿದ್ದರು. ಮೂರ್ತಿ ಅವರೊಂದಿಗೆ ಸೇರಿಕೊಂಡು ಮೈಸೂರಿನ ಸುದ್ದಿ ತಿಳಿಸಿದ. ಎಲ್ಲರೂ ಕ್ಲಬ್ಬಿನಲ್ಲಿ ಸಭೆ ಸೇರಿದರು. ಇನ್ನು ಕೆಲವರು ಕೆಲಸಗಾರರು ಬರಬೇಕಾಗಿತ್ತು. ಹಾಗೆಯೇ ಕಾಲಕಳೆಯುವ ಬದಲು ವಾತಾವರಣದ ಕಾಠಿಣ್ಯವನ್ನು ಒಡೆಯಲು ರೇಡಿಯೋ ತಿರುಗಿಸಿದರೆ ಸುದ್ದಿ ಸುರಿಯಲಾರಂಭ!

"ಡಾಕಾದಲ್ಲಿ ಕಾರ್ಮಿಕರ ಮೆರವಣಿಗೆಯ ಮೇಲೆ ಪೋಲೀಸರು ಗುಂಡು ಹಾರಿಸಿದರು. ಪುಣೆಯಲ್ಲಿ ಅಶ್ರುವಾಯು (Teargas) ವನ್ನುಪಯೋಗಿಸಿ ದರು. ಸಭೆ ಚದರಿಸಲು ವಿಮಾನದಿಂದ ಗುಂಡು ಸುರಿದರು!"

ಮೂರ್ತಿ ಕೇಳಲಾರದೆ ರೇಡಿಯೋ ನಿಲ್ಲಿಸಿದ.

ಮುಷ್ಕರ ಆರಂಭವಾಗಿ ಒಂದು ವಾರವಾಗಿತ್ತು. ಶೇಷು ಅವಸರವ ಸರವಾಗಿ ಅನ್ನತಿನ್ನಲು ಕುಳಿತಂತೆ ಅಪ್ಪ ಬಂದರು.

"ಶೇಷಗಿರಿ, ತಲೆಯಲ್ಲಿ ಬುದ್ಧಿಯಿದೆಯೋ?"

ಶೇಷು ಸುಮ್ಮನಿದ್ದ.

"ನಿನಗಾಗಲೇ ಎರಡು ಸಾರಿ ಹೇಳಿಯಾಯಿತು. ಈವತ್ತು ಮೂರನೆಯ ಸಾರಿ. ಪೋಲಿ ಸೂಳೇಮಕ್ಕಳ ಜತೆ ಸೇರಿ ಕಾಲೇಜು ಬಿಡುವುದಂತೆ, ಮುಷ್ಕರ ಹೂಡುವುದಂತೆ! ನೀನು ಕಡಿಯುವುದು ಅಷ್ಟರಲ್ಲೇ ಇದೆ. ನಾಳೆಯ ದಿನ ಕಾಲೇಜಿಗೆ ಹೋಗದಿದ್ದರೆ ಮನೆಬಿಟ್ಟು ಹೊರಡಬೇಕಾದೀತು! ಆಮೇಲೆ ಬೀದಿಯಲ್ಲಿ ಭಿಕಾರಿಯಾಗಿ ಅಲೆಯಬೇಕು!"

ಕಾಲಿನ ಸಪ್ಪಳ ದೂರವಾಯಿತು. ಶೇಷು ತಲೆಯೆತ್ತಿದ. ಅಜ್ಜಿಯ ಮುಖ ಧುಮುಗುಟ್ಟುತ್ತಿತ್ತು.

"ಹೂಂ! ನನ್ನ ಮೂತಿಯೇನು ನೋಡುತ್ತೀ? ಹಿಂಡಸುರಿಯಬೇಕು. ಋಣ ತೀರಿಸಬೇಕು. ತಿನ್ನು! ತಿನ್ನು! ಇನ್ನೆಷ್ಟು ದಿನ ನಿನ್ನ ಸೇವೆ ನಡೆಸಬೇಕೋ ಕಾಣೆ!"

ಶೇಷುವಿಗೆ ದುಃಖ ಉಮ್ಮಳಿಸಿ ಬಂತು.

"ಇನ್ನು ಅನ್ನಬೇಡ" ಎಂದ.

"ಹೂಂ! ಅದುಬೇರೆ ಬೆದರಿಕೆಯೇನೋ? ಅನ್ನಬೇಡವಂತೆ, ಪಾಪ! ಅಕ್ಕಿ ಉಳಿಸಬೇಕು ಅಜ್ಜನಿಗೆ ಅಂತಲೋ ಏನೊ! ಜನ್ಮಕ್ಕೆ ನಾಚಿಕೆಯಿಲ್ಲ! ಕೂಳುತಿಂದು ನಾಯಿಯಂತೆ ಬೀದಿಬೀದಿ ಅಲೆಯುವುದು, ಹೊತ್ತಿಗೆ ಸರಿಯಾಗಿ ಇಲ್ಲಿ ದಂಡಪಿಂಡಕ್ಕೆ ಹಾಜರಾಗುವುದು! ನಾಯಿಯೇ ವಾಸಿ! ಸಾಕಿದವರ ಕಾಲಬಳಿಯೇ ಇರುತ್ತೆ. ಹೇಳಿದಂತೆ ಕೇಳಿಕೊಂಡು ಬಾಲ ಮುದುರಿಕೊಂಡಿರುತ್ತೆ! ನಾಯಿಗಿಂತ ಕೀಳು!"

ಶೇಷು ಹಾಗೆಯೇ ನುಂಗಿಕೊಂಡು ಎದ್ದ. ಆಗಲೇ ಹೊತ್ತಾಗಿಹೋಗಿತ್ತು ಮೂರ್ತಿ ಅಲ್ಲಿ ಕಾದಿರುತ್ತಾನೆ. ಆಮೇಲೆ ಇಬ್ಬರೂ ಹೋಗಿ ಆ ಪತ್ರಿಕೆಯನ್ನು ಹೇಗಾದರೂ ಅಚ್ಚು ಹಾಕಿಸಲೇಬೇಕು. ಅವಸರವಸರವಾಗಿ ಹೋದ ಮೂರ್ತಿಯ ರೂಮಿಗೆ.

"ಶೇಷು, ನಾನು ಹೇಳಿದೆ ನೋಡು ಆವತ್ತು, ಇಲ್ಲಿ ಒಬ್ಬ ಸಿ.ಐ.ಡಿ. ಬರುತ್ತಾನೆ ಅಂತ. ಅವನಿಗೆ ನನ್ನ ಮೇಲೆ ಕಣ್ಣು. ಐದಾರುಸಾರಿ ನನ್ನ

ರೂಮಿನ ಹತ್ತಿರ ಹೀಗಿಂದ ಹಾಗೆ ಹಾಗಿಂದ ಹೀಗೆ ಸುತ್ತಿದ. ಕೊಂಚ ಓಡಾಡುವಾಗ ಹುಷಾರಾಗಿರಬೇಕು."

"ಸರಿ, ಮೂರ್ತಿ. ಹಸ್ತಪ್ರತಿ ನಿನ್ನ ಬಳಿಯೇ ಇದೆ ತಾನೆ? ಸಂಜೆ ಆ ಅಚ್ಚುಕೂಟಕ್ಕೆ ಹೋಗಿದ್ದೆಯೇನು? ಅವನೇನೆಂದ?"

"ಬಹಳ ಕಷ್ಟವಾಯಿತು ಒಪ್ಪಿಸುವುದು. ಪೋಲೀಸಿನವರ ಹೆದರಿಕೆ! ಸರ್ಕಾರದ ಹೆದರಿಕೆ! ಆಗುವುದಿಲ್ಲ ಎಂದ. ಆಮೇಲೆ ನಾನು ಲಂಚ ಕೊಟ್ಟು, ಹಾಗೆಯೇ ನಿನ್ನ ಹೆಸರು ಬೇಡ, ಹೆಸರಿಲ್ಲದೆ ಅಚ್ಚು ಹಾಕಿಕೊಡು ಎಂದು ಹೇಳಿದ ಮೇಲೆ ರಾತ್ರಿ ಮಾಡಿಕೊಡುವೆನೆಂದೊಪ್ಪಿದ. ಒಂದು ಆರು ಸಾವಿರ ಪ್ರತಿ ಹಾಕಿಸಬೇಕು. ಸುಮಾರು ೪೦ ರೂಪಾಯಿ ಖರ್ಚಾಗುತ್ತೆ. ನಾವು ರಾತ್ರಿ ಅಲ್ಲಿಯೇ ಇರಬೇಕು. ತಾಳು, ನಾನು ಬಟ್ಟೆ ಹಾಕಿಕೊಳ್ಳುತ್ತೇನೆ ಹೋಗೋಣ."

ಮೂರ್ತಿ, ಶೇಷು ಇಬ್ಬರೂ ಮುಂದೆ ನಡೆದಂತೆ ಹಿಂದೆ ಯಾರೋ ಹಿಂಬಾಲಿಸುತ್ತಿರುವಂತೆ ತೋರಿತು. ಅದು ಹೇಗೋ ಏನೋ ತಮ್ಮ ರೂಮಿನಿಂದಲೇ ತಮ್ಮನ್ನು ನೋಡಿಕೊಂಡು ಹಿಂಬಾಲಿಸುತ್ತಿರುವುದು ಅವರಿಗೆ ತಿಳಿಯಿತು. ಕೂಡಲೇ ಇಬ್ಬರೂ ಜೋರಾಗಿ ನಡೆಯಲಾರಂಭಿಸಿದರು. ಹಿಂದಿದ್ದ ವ್ಯಕ್ತಿ ಕೊಂಚಕಾಲ ಹಿಂದೆ ಬಿದ್ದರೂ ಮತ್ತೆ ಅವರನ್ನೇ ಹಿಂಬಾಲಿಸಿದ. ಮೂರ್ತಿ, ಶೇಷು ಇಬ್ಬರೂ ಮಾತನಾಡಿಕೊಂಡು ಒಬ್ಬ ಪೂರ್ವಕ್ಕೆ ಒಬ್ಬ ಪಶ್ಚಿಮಕ್ಕೆ ತಿರುಗಿದ ಹಿಂದಿದ್ದ ಸಿ.ಐ.ಡಿ. ದೊರೆಸಾಮಿಗೆ ದಿಕ್ಕೇ ತೋಚದು. ಯಾರನ್ನು ಹಿಂಬಾಲಿಸುವುದೋ? ತಕ್ಷಣ ಅವನು ಮೂರ್ತಿಯೇ ಸರಿಯಾದ ಆಸಾಮಿಯೆಂದುಕೊಂಡು ಅವನನ್ನೇ ಹಿಂಬಾಲಿಸಿದ. ಮೂರ್ತಿ ಗಲ್ಲಿಬಿದ್ದು ಹಾಗೂಹೀಗೂ ಅವನಿಂದ ತಪ್ಪಿಸಿಕೊಂಡು ಯಾವುದೋ ಒಂದು ಸಂದಿನಲ್ಲಿ, ಬೆಳಕಿಗೆ ಬಾರದ ಒಂದು ಅಚ್ಚುಕೂಟಕ್ಕೆ ಬಂದ. ಶೇಷು ಆಗಲೇ ಅಲ್ಲಿಗೆ ಬಂದು ಕುಳಿತಿದ್ದ. ಹಸ್ತಪ್ರತಿ ಕೊಟ್ಟು ಆಯಿತು.

ಎಲ್ಲಾ ಅಚ್ಚಾಗುವ ವೇಳೆಗೆ ಸುಮಾರು ಬೆಳಗಿನ ಜಾವ ನಾಲ್ಕು ಗಂಟೆಯಾಗಿತ್ತು. ಮೂರ್ತಿ ಒಂದೆರಡು ಸಾವಿರದ ಕಟ್ಟನ್ನು ಶೇಷುವಿನೊಂದಿಗೆ ಕಳುಹಿಸಿಕೊಟ್ಟು ಉಳಿದುದನ್ನು ಸಾವಿರಸಾವಿರವಾಗಿ ವಿಂಗಡಿಸಿ ಕಟ್ಟಿದ. ಬೆಳಗ್ಗೆ ಯಾರನ್ನೋ ಕಳಿಸುವುದಾಗಿಯೂ ಅವರೊಂದಿಗೆ ಉಳಿದುದನ್ನೆಲ್ಲಾ

ಕಳಿಸಬೇಕೆಂದೂ ಮುದ್ರಕನಿಗೆ ತಿಳಿಸಿ ತಾನೊಂದು ಸಾವಿರದ ಕಟ್ಟನ್ನೆತ್ತಿಕೊಂಡ. ಇವನು ನಾಲ್ಕಾರು ಗಲ್ಲಿ ತಿರುಗಿದ-ದೇ ತಡ ಅದೆಲ್ಲಿ ಕಾದಿದ್ದನೋ ದೊರೆಸಾಮಿ ಇವನನ್ನೇ ಹಿಂಬಾಲಿಸಿದ. ಮೂರ್ತಿಗೆ ಅವನು ತನ್ನನ್ನು ಹಿಂಬಾಲಿಸುವುದು ಗೊತ್ತಾದೊಡನೆ ಬೇಗಬೇಗ ನಡೆಯಲಾರಂಭಿಸಿದ. ಆದರೆ ದೊರೆಸಾಮಿ ಅವನ ಹಿಂದೆಯೇ! ಮೂರ್ತಿಗೆ ತಾನು ಬಂಧಿತನಾದರೆ ಚಿಂತೆಯಿಲ್ಲ. ಆದರೆ ಆ ಅಚ್ಚಾದ ಪ್ರತಿಗಳೆಲ್ಲ ಹಾಳಾದರೆ ಎಂಬ ಹೆದರಿಕೆ. ದೊರೆಸಾಮಿ ವೇಗವೇಗವಾಗಿ ಬರುತ್ತಿದ್ದವನು ಜೇಬಿನಿಂದ ಸೀಟಿ ತೆಗೆದು ಊದಿದ. ಕೂಡಲೇ ಮೂರ್ತಿಗೆ ಗೊತ್ತಾಗಿಹೋಯಿತು, ತಾನು ಸಿಕ್ಕಿಬಿದ್ದೆನೆಂದು! ಆ ತಿರುವಿನಲ್ಲೊಂದು ದೊಡ್ಡ ಮೋರಿಯಿತ್ತು. ತಕ್ಷಣ ಮರು ಯೋಚನೆಯೇ ಇಲ್ಲದೆ ಅದರೊಳಕ್ಕಿಳಿದ.

ದುರ್ನಾತ! ಕೊಚ್ಚೆ, ಮೈಯೆಲ್ಲಾ ಕೊಚ್ಚೆ! ಜತೆಗೆ ಸೊಳ್ಳೆಗಳು ಬಂದು ಮೈಕಿತ್ತು ತಿನ್ನುತ್ತಿದ್ದುವು. ಕೈಯಲ್ಲಿ ಕಾಗದದ ಕಟ್ಟು ಬೇರೆ. ಮಂಡಿಯವರೆಗಿದ್ದ ಕೊಚ್ಚೆ ನೀರಿನಲ್ಲಿ ಬಗ್ಗಿ ನಿಂತುಕೊಂಡು ಬೆನ್ನೆಲ್ಲಾ ನೋವಾಗಿ ಹೋಗಿತ್ತು. ಆದರೆ ಅಲ್ಲಿಂದ ಅಲುಗುವಂತಿಲ್ಲ. ಹೇಗಾದರೂ ಸರಿ ಅವರಿಂದ ತಪ್ಪಿಸಿಕೊಂಡರಾಯಿತು! ಒಮ್ಮೆ ರೂಮಿಗೆ ಹೋಗಿಬಿಟ್ಟರೆ ಪರವಾಗಿಲ್ಲ. ಮೂರ್ತಿ ಉಸಿರುದನಿಯೆಲ್ಲಿ ಹೊರಗೆ ಕೇಳಿತೋ ಎಂದು ಮೆಲ್ಲನೆ ಉಸಿರಾಡುತ್ತಿದ್ದ. ಮೇಲೆ ಕಾಲಿನ ಸಪ್ಪಳವಾಯಿತು. ದೊರೆಸಾಮಿಯ ದನಿ ಕೇಳಿಸಿತು. ಏನೋ ಗೊಣಗುತ್ತಿದ್ದ. ಆ ಐದಾರು ನಿಮಿಷ ಮೂರ್ತಿಯ ಉಸಿರೇ ಸಿಕ್ಕಿಕೊಂಡಂತಾಗಿತ್ತು!

ಮೂರ್ತಿ ಚರಂಡಿಯಿಂದ ಹೊರಬಿದ್ದು ಹಾಗೂಹೀಗೂ ಕಷ್ಟಪಟ್ಟು ರೂಮು ಸೇರಿದ. ಬೆಳಗುಳಕ್ಕೆ ಕಳಿಸಲೆಂದು ಹಲಕೆಲವು ಪ್ರತಿಗಳನ್ನು ಬೇರೆಯಿಟ್ಟು, ಉಳಿದುವನ್ನು ಕೂಡಲೇ ತೆಗೆದುಕೊಂಡು ಹೋಗಿ ವಿದ್ಯಾರ್ಥಿ ಸಂಘದ ಕಚೇರಿಗೆ ಕೊಟ್ಟುಬಿಟ್ಟ. ಶೇಷು ಆಗಲೇ ಬಂದು ಪ್ರತಿಗಳನ್ನೆಲ್ಲಾ ಕೊಟ್ಟು ಉಳಿದುವನ್ನು ತರಲು ಮತ್ತೆ ಮುದ್ರಣಾಲಯಕ್ಕೆ ಹೋಗಿದ್ದ.

ಮೂರ್ತಿ ರೂಮಿಗೆ ಬಂದು ಕಾಫಿ ಮಾಡಿ ಕುಡಿದ. ಶೇಷು ಇನ್ನೇನು ಬರುವುದಾಗಿ ಹೇಳಿದ್ದ. ಅವನಿಗೋಸ್ಕರ ಕಾದು ಹಾಗೆಯೇ ಪುಸ್ತಕ

ತಿರುವುತ್ತಿದ್ದ ಹಾಗೆಯೇ ಕಿಟಕಿಯಿಂದ ಒಂದು ನೆರಳು ಅವನ ಮುಖದ ಮೇಲೆ ಬಿತ್ತು. ತಿರುಗಿನೋಡಿದರೆ ದೊರೆಸಾಮಿ!

"ಬಾಗಿಲು ತೆರೆಯಿರಿ!"

ಬಾಗಿಲು ತೆರೆದ ಮೂರ್ತಿ. ದೊರೆಸಾಮಿಯೊಂದಿಗೆ ಇನ್ನೂ ಇಬ್ಬರು ಪೋಲೀಸಿನವರು. ಮೂವರೂ ಮೂರ್ತಿಯ ಕೊಠಡಿಯನ್ನೆಲ್ಲಾ ಶೋಧಿಸಿದರು. ಆ ಕೆಲವು ಪ್ರತಿಗಳನ್ನು ವಶಪಡಿಸಿಕೊಂಡರು. ಮೂರ್ತಿ ನ್ಯಾಯಬಾಹಿರ ಸಾಹಿತ್ಯ ಹೊಂದಿದ್ದನೆಂದು ಅವನನ್ನು ಬಂಧಿಸಿದರು.

"ನೀವು ಸ್ಟೇಷನ್ನಿಗೆ ಕರೆದುಕೊಂಡು ಹೋಗಿ, ನಾನಿನ್ನೇನು ಬಂದೆ" ಎಂದ ದೊರೆಸಾಮಿ ನಗುತ್ತಾ.

ಮೂರ್ತಿ ತನ್ನ ಬಟ್ಟೆಗಳನ್ನು ಕಟ್ಟಿಕೊಳ್ಳಲು ಕಾಲ ಕೇಳಿದ. ಇನ್ನೆಲ್ಲಿ ಶೇಷು ಬಂದು ಕೂಡಲೇ ಸಿಕ್ಕಿಬಿದ್ದಾನೊ ಎಂದೇ ಅವನ ಹೆದರಿಕೆ. ಹೇಗಾದರೂ ಅವನಿಗೆ ತಿಳಿಸಬೇಕು ತಾನು ಬಂಧಿತನಾದ ಸುದ್ದಿ. ಶೇಷು ಇನ್ನು ಕೆಲವು ದಿನವಾದರೂ ಹೊರಗುಳಿದರೆ ಒಳ್ಳೆಯದಲ್ಲವೇ?

ದೊರೆಸಾಮಿ, ಕಮಲ ಇಬ್ಬರೂ ಕೈಯಲ್ಲಿ ಕೈಯಿಟ್ಟು ನಗುತ್ತಿದ್ದರು. ಅದೇಂತಹುದೊ ಮಾತುಕತೆ, ಮೂರ್ತಿ ತಲೆ ತಗ್ಗಿಸಿದ! ತನ್ನ ಮೇಲೆ ಇದು ಕಮಲಳ ಸೇಡು! ಹುಂ! ಆಗಲಿ! ಎಂದುಕೊಂಡು ಬಟ್ಟೆಕಟ್ಟಲಾರಂಭಿಸಿದ.

ಲಾಕಪ್ಪಿಗೆ ಹಾಕುವ ಮೊದಲು ಪೋಲೀಸ್ ಅಧಿಕಾರಿಗಳ ಮುಂದೆ ವರದಿ.

"ನಿನ್ನ ಹೆಸರೇನು?"

"ಮೂರ್ತಿ."

"ಎಂತಹ ಮೂರ್ತಿ, ಮಣ್ಣಿನ ಮೂರ್ತಿಯೋ? ಮರದ ಮೂರ್ತಿಯೋ?" ಎಂದು ತನ್ನ ಹಾಸ್ಯಕ್ಕೆ ತಾನೇ ನಕ್ಕ ಇನಸ್ಪೆಕ್ಟರ್.

ಮೂರ್ತಿಗೆ ರೇಗಿತು. ಆದರೆ, ರೇಗುವುದರಿಂದೇನೂ ಪ್ರಯೋಜನವಿಲ್ಲ!

"ತಂದೆಯ ಹೆಸರು!"

ಮೂರ್ತಿ ಮತ್ತೆ ಯೋಚಿಸಿದ! ತಂದೆಯ ಹೆಸರು ಹೇಳುವುದೇ? ಛೆ! ಅವರನ್ನು ಸಿಕ್ಕಿಸಿದಂತಾಗುತ್ತದೆ. ಇದೂ ಅಲ್ಲದೆ ತನ್ನ ಪಾಲಿಗೆ ತಂದೆ ಸತ್ತಂತೆಯೇ!

"ತಂದೆ ಹೆಸರೇನಯ್ಯ?" ಗರ್ಜಿಸಿದ ಇನಸ್ಪೆಕ್ಟರ್.

“ ತಂದೆಯಿಲ್ಲ ! ”

“ ಹಾಗಾದರೆ ಕಸಬುಗಾರ್ತಿಯ ಮಗನೋ ? ”

ಮತ್ತೆ ವಿಕಟ ನಗು !

ಮೂರ್ತಿಗೆ ತನ್ನ ತಾಯಿಗಾದ ಅಪಮಾನ ಸಹಿಸದಾಯಿತು. ಎತ್ತಿ ಬಿಗಿದ ಇನಸ್ಪೆಕ್ಟರನಿಗೆ. ಅಲ್ಲಿಗೆ ಮುಗಿಯಿತು ಕತೆ !

ರಾತ್ರಿಯೆಲ್ಲ ಏಟು ! ಬೆನ್ನುಮೂಳೆಯೆಲ್ಲ ಮುರಿದುಹೋದಂತಾಗಿತ್ತು ಮೂರ್ತಿಗೆ. ಮೈಯೆಲ್ಲಾ ನೋವು, ನರನರವೆಲ್ಲಾ ಹಿಡಿಯುತ್ತಿತ್ತು. ಬೆನ್ನ ಗಾಯದಿಂದ ರಕ್ತ ಸುರಿದಿತ್ತು. ಅದಕ್ಕೆ ಔಷಧವಿಲ್ಲ. ಕೇಳುವವರೂ ಇಲ್ಲ. ಜತೆಗೆ ಬಾಯಾರಿಕೆ ! ಬಾಯಾರಿಕೆ ! ನೀರು ! ನೀರು ! ಕೊಡುವವರಾದರೂ ಯಾರು ? ರಾತ್ರಿಯೆಲ್ಲಾ ಹೀಗೆಯೇ ಕಳೆಯಿತು. ಬೆಳಗ್ಗಿಯ ಸುಮಾರಿಗೆ ಮೂರ್ತಿಗೆ ಸ್ವಲ್ಪಸ್ವಲ್ಪ ನಿದ್ರೆಬಂದಂತಾಯಿತು, ಜೊಂಪುಹಿಡಿಯಿತು. ಆದರೆ ಅದೇನದು ಶಬ್ದ ! ಲಾಕಪ್ಪಿನ ಪಕ್ಕದಲ್ಲಿ ಇನಸ್ಪೆಕ್ಟರು ಒಂದೇಸಮನಾಗಿ “ ಕಿಡಿ ! ಕಿಡಿ ! ಕಿಡಿ ! ಕಿಡಿ ! ” ಎನ್ನುತ್ತ ಬರುತ್ತಿದ್ದ. ಅವನಿಗೇನು ಹುಚ್ಚು ಹಿಡಿಯಿತೋ ಎಂದುಕೊಂಡ ಮೊದಲು, ಆಮೇಲೆ ನೆನಪಾಯಿತು ತಾನು ನಿನ್ನೆ ತಂದ ಪತ್ರಿಕೆಯ ಹೆಸರು ‘ ಕಿಡಿ ’. ಸರಿ, ಯಾರನ್ನೋ ಹಿಡಿದು ಲಾಕಪ್ಪಿನಲ್ಲಿ ಇಟ್ಟಿದ್ದಾರೆ. ಅವರಿಂದ ಆ ಪತ್ರಿಕೆಯ ವಿಚಾರ ಸುದ್ದಿ ಹೊರಡಿಸಬೇಕು. ಅದೇ ಹೆಸರನ್ನು ಕೂಗುತ್ತಾ ಹೋದರೆ ಅವನು ಮರುಳಾಗಿ ಅದರ ಸುದ್ದಿ ಕೊಡಬಹುದು ಅಥವಾ ಅವನ ಮುಖದಲ್ಲಿ ಬದಲಾವಣೆಗಳಾದರೆ ಹಿಂಸೆಮಾಡಿಯಾದರೂ–ಹಿಂಸೆ ! ಅಬ್ಬಾ ! ಮೂರ್ತಿಯ ಬೆನ್ನೆಲ್ಲಾ ಬಾತುಕೊಂಡಿತ್ತು ! ಪಕ್ಕಕ್ಕೆ ತಿರುಗಿದರೆ ಧೂಳು ಹೊಗೆಯಂತೆ ಮೇಲೇರುತ್ತಿತ್ತು. ಮೈಯೆಲ್ಲಾ ಗರಗಸದಿಂದ ಕೊಯ್ದಂತಾಗುತ್ತಿತ್ತು. ಇನ್ನು ಪಾಪ ! ಆ ಪಕ್ಕದವನಿಗೆ ಎಂತೆಂತಹ ಹಿಂಸೆ ಕಾದಿದೆಯೊ ಎನಿಸಿ ಕಣ್ಣಿನಲ್ಲಿ ನೀರು ಬಂತು. ಅವನಿಗೆ ಆಗುವ ನೋವಿನಲ್ಲಿ ಮೂರ್ತಿ ತನಗಾದ ನೋವನ್ನು ಮರೆತು, ಅವನಿಗಾಗಿ ಮರುಗಿದ. ತಾನು ಅಚ್ಚು ಹಾಕಿಸಿದ್ದು, ತಾನೇ ಬರೆದುದು ; ಅದಕ್ಕಾಗಿ ನೋವನ್ನನುಭವಿಸುವವನು ಆ ಹುಡುಗ ! ಇದೇ ಇಂದಿನ ಜಗತ್ತು, ಕ್ರೂರಿ ಜಗತ್ತು ! ಒಬ್ಬರ ತಪ್ಪಿಗೆ ಮತ್ತೊಬ್ಬರಿಗೆ ಶಿಕ್ಷೆ ! ಮೂರ್ತಿಗೆ ಮುಂದೆ ಯೋಚಿಸಲಾಗಲಿಲ್ಲ. ಮೈನವೆ ಹೆಚ್ಚಿತು..

ಪಕ್ಕಕ್ಕೆ ತಿರುಗಿದರೂ ನೋವು! ದೂರದಲ್ಲಿ ದೊಡ್ಡ ಗಡಿಯಾರ ಆರು ಗಂಟೆ ಹೊಡೆಯಿತು. ಒಂದೊಂದನ್ನಾಗಿ ಎಣಿಸಿದ ಮೂರ್ತಿ! ಹುಂ! ಇನ್ನೆಷ್ಟು ಹೊತ್ತು ಈ ನರಕದಲ್ಲಿರಬೇಕೋ? ಬೆಳಗಾದರೇನಾದರೂ ಕಾಫಿಗೀಫಿ ತರಿಸಿ ಕೊಳ್ಳಬಹುದು. ಕೊಂಚ ಚೇತರಿಸಿಕೊಳ್ಳಬಹುದು ಎಂದುಕೊಂಡ. ಆದರೆ ಈ ಪೋಲೀಸಿನವರು ಅದನ್ನಾದರೂ ಮಾಡಿಯಾರೆಂಬ ಭರವಸೆಯೆಲ್ಲಿ?

ಹೊರಗೆ ಮೋಟಾರು ಬಂಡಿ ಕಾದಿತ್ತು. ಮೂರ್ತಿಯ ಲಾಕಪ್ಪಿನ ಬಾಗಿಲು ತೆರೆದು ಅವನನ್ನು ಎಳೆದುಕೊಂಡು ಹೋಗಿ ಗಾಡಿಗೆ ಕೂರಿಸಿದರು. ಪಕ್ಕಕ್ಕೆ ತಿರುಗಿನೋಡಿದರೆ ಆ ಕಡೆಯಿಂದ ಶೇಷು ಬಂದ! ಮೂರ್ತಿಯ ಲಾಕಪ್ಪಿನ ಪಕ್ಕದ ಲಾಕಪ್ಪಿನಲ್ಲಿದ್ದವನು ಏಳುವುದು ಹೊತ್ತಾಗಿತ್ತೆಂದು ಬೆತ್ತ ದಲ್ಲಿ ಇನಸ್ಪೆಕ್ಟರು ಒಂದು ಬಿಗಿದಿದ್ದ ಗುರುತು ಹಣೆಯ ಮೇಲೆ ಕಾಣುತ್ತಿತ್ತು. ಜೈಲಿನ ಕಡೆಗೆ ಗಾಡಿಹೊರಟಂತೆ ಮೂರ್ತಿ ಲಾಕಪ್ಪಿನ ಕಡೆ ಒಮ್ಮೆ ತಿರುಗಿ ನೋಡಿದ. ಇನೆಸ್ಪೆಕ್ಟರ ಕ್ರೂರ ಕಣ್ಣಿನ ಮೇಲೆ ಎಳೆಬಿಸಿಲು ಹೊಳೆದು ಅವನ ಮನಸ್ಸಿನ ಪಿಶಾಚೀಸಂತೋಷವನ್ನು ಹೊರತೋರುತ್ತಿತ್ತು.

## ೧೨

ಮೂರ್ತಿ ಕಣ್ತೆರೆದಾಗ ರಾತ್ರಿಯಾಗಿತ್ತು. ಎಚ್ಚರವಾದಂತೆ ಮೈ ಕೈ ನೋವು ವಿಪರೀತವಾಗಿ ನರಳಲಾರಂಭಿಸಿದ—ತಾನೆಲ್ಲಿದ್ದೇನೆ—ಏನು ಎಂಬು ದೊಂದೂ ಅರ್ಥವೇ ಆಗಲಿಲ್ಲ. ಪಕ್ಕಕ್ಕೆ ಸರಿಯಲು ಯತ್ನಿಸಿದ. ಬೆನ್ನಿನಲ್ಲಿ ನೋವು ಹೆಚ್ಚಾಗಲು ಮುಸುಗಟ್ಟಿದ.

" ಮೂರ್ತಿ, ಮೂರ್ತಿ "

ಎಲ್ಲಿಯೋ ಪರಿಚಿತವಾದ ದನಿಯೆನಿಸಿತು ಮೂರ್ತಿಗೆ. ಆ ಅರೆತಿಳಿವಿ ನಲ್ಲಿ ಇದ್ದಕ್ಕಿದ್ದಂತೆ ಸರುವಿನ ನೆನಪು ಬಂತು. ಮತ್ತೆ " ಮೂರ್ತಿ ನೋವು ಹೇಗಿದೆಯೋ ? "

ಹಣೆಯ ಮೇಲೆ ಕೈಬಿಸಿಯ ಅನುಭವವಾಯಿತು. ಮೂರ್ತಿ ಕಣ್ತೆರೆದು ನೋಡಿದ. ಶೇಷು ಪೆಚ್ಚುಮೋರೆಯಿಂದ ಪಕ್ಕದಲ್ಲಿ ಕುಳಿತಿದ್ದ, ಸುತ್ತಮುತ್ತ

ಹಾಸಿಗೆಗಳು. ಮೇಲೊಂದು ವಿದ್ಯುದ್ದೀಪ. ತಾನು ಹೇಗೆ ಅಲ್ಲಿಗೆ ಬಂದೆನೆಂಬುದೇ ಪ್ರಶ್ನೆ.

"ಶೀಷು"

"ಹೂಂ, ಮೂರ್ತಿ"

"ನಾವೆಲ್ಲಿದ್ದೇವೆ, ಶೀಷು?"

"ಆಸ್ಪತ್ರೆಯಲ್ಲಿ, ಈಗ ಆಯಾಸವಾಗಿದೆ ಮಲಗಿಕೊ ಕೊಂಚ ಹಾಲು ಕೊಡಲೇ?"

ಮೂರ್ತಿಗೂ ಬಹಳ ಬಾಯಾರಿತ್ತು. ಕೊಂಚ ಹಾಲು ಕುಡಿದ. ಸ್ವಲ್ಪ ಸುಸ್ತು ಕಡಿಮೆಯಾದಂತಾಯಿತು.

"ಶೀಷು, ಆಸ್ಪತ್ರೆಗೆ ಹೇಗೆ ಬಂದೆ?"

ಮೂರ್ತಿ ನೆನಪಿಗೆ ತಂದುಕೊಂಡ. ಬೆಳಗ್ಗೆ ಜೈಲಿನ ಬಾಗಿಲಿಗೆ ಮೊಟಾರು ಗಾಡಿಯಲ್ಲಿ ಬಂದಿದ್ದ. ಗಾಡಿಯಿಂದ ಕೆಳಗಿಳಿಯುವಾಗ ಬಹು ಕಷ್ಟವಾಗಿತ್ತು. ರಾತ್ರಿ ಲಾಕಪ್ಪಿನಲ್ಲಿ ತಿಂದ ಪೆಟ್ಟುಗಳಿಂದ ಮೈಯೆಲ್ಲಾ ಬಹಳ ನೋಯುತ್ತಿತ್ತು. ಒಂದೊಂದು ಹೆಜ್ಜೆಯಿಡುವುದೂ ಪ್ರಯಾಸವಾಗಿತ್ತು. ಆಗ ಆ ಇನಸ್ಪೆಕ್ಟರ್ ಏನೋ ಬಯ್ದ. ತಾನು ಕೊಂಚ ಜೋರಾಗಿ ನಡೆಯಲು ಹೋಗಿ ಎಡವಿದುದು ನೆನಪು, ಮುಂದೆ ಎಲ್ಲ ಮುಸುಕು, ಮುಸುಕು! ಈಗ ಆಸ್ಪತ್ರೆ! ಶೀಷು ಮೂರ್ತಿಯ ಪ್ರಶ್ನೆಗೆ ಉತ್ತರ ಕೊಡಲಿಲ್ಲ, ಸುಮ್ಮನೆ ಮೌನವಾಗಿ ಕುಳಿತಿದ್ದ.

"ಶೀಷು, ಶೀಷು"

"ಮಾತಾಡಿ ಆಯಾಸ ಮಾಡಿಕೋಬೇಡವೋ ಮೂರ್ತಿ"

"ಇಲ್ಲ, ನಾನಿಲ್ಲಿ ಹೇಗೆ ಬಂದೆ?"

"ಕಲ್ಲಿನ ಮೇಲೆ ಎಡವಿ ಬಿದ್ದೆ, ರಾತ್ರಿಯ ಗಾಯಕ್ಕೆ ಮತ್ತೆ ಏಟು ಬಿದ್ದು ರಕ್ತ ಸುರಿಯಲು ಸುರುವಾಯಿತು. ನಿನಗೆ ತಿಳಿವು ತಪ್ಪಿತು. ಜೈಲಿನ ವೈದ್ಯರು ತಕ್ಷಣ ಬಂದು ನಿನ್ನನ್ನೆತ್ತಿಕೊಂಡು ಇಲ್ಲಿಗೆ ಕರೆತಂದರು. ಆಗ ಜ್ಞಾನ ತಪ್ಪಿದವನಿಗೆ ಈಗಲೇ ತಿಳಿವು ಬಂದುದು. ಸದ್ಯ! ನಮಗೆಲ್ಲಾ ಬಹಳ ಗಾಬರಿಯಾಗಿತ್ತು."

"ಗಾಬರಿಯೇನು ಶೀಷು? ನಾನು ಈಗಲೇ ಸಾಯುವವನಲ್ಲ" ನರಳುತ್ತಲೇ ನಗಲು ಪ್ರಯತ್ನಿಸಿದ ಮೂರ್ತಿ.

" ಸರಿ ನೀನು ಮಲಗಿಕೊ ನಾನು ಊಟ ಮುಗಿಸಿಕೊಂಡು ಬರುತ್ತೇನೆ. ಈಗ ನೋವು ಹೇಗಿದೆ? "

" ಒಂದೊಂದು ಗಾಯಕ್ಕೂ ಶೂಲ ಹಾಕಿ ಇರಿದಂತಾಗುತ್ತದೆ. ಬೇಗ ಬಾ ಶೇಷು."

ಶೇಷು ಊಟಕ್ಕೆಹೊರಟು ಹೋದ ಮೂರ್ತಿಗೆ ನೋವು. ಹೀಗೆ ತಿರುಗು ವಂತಿಲ್ಲ. ಹಾಗೂ ತಿರುಗುವಂತಿಲ್ಲ. ಮೈ ಕೊಂಚ ಅಲುಗಿಸಿದರೂ ಕೊಡಲಿ ಯಿಂದ ಕೊಚ್ಚಿದಷ್ಟು ನೋವು, ಹಾಗೆಯೇ ಎದುರಿನ ಕಿಟಕಿಯಿಂದ ಹೊರ ನೋಡಿದ. ದೊಡ್ಡದೊಂದು ತೆಂಗಿನಮರ, ತುಂಬ ಗರಿಗಳು, ಅದರ ಹಸುರು ಗರಿಗಳ ತುಟ್ಟ ತುದಿಯಲ್ಲಿ ಆಕಾಶದಲ್ಲಿ ಒಂದೇ ಒಂದು ನಕ್ಷತ್ರ ಮಿಣುಕು ತ್ತಿತ್ತು. ಚಳಿ ಹಿಡಿದಂತೆ ನಡುಗುತ್ತಿತ್ತು ಆ ನಕ್ಷತ್ರ. ಕಿಟಕಿಯಿಂದ ಬೀಸಿದ ತಂಗಾಳಿಯಲ್ಲಿ ಮೂರ್ತಿಯ ಮನಸ್ಸಿಗೂ ಕೊಂಚ ಹಾಯಿ ಎನಿಸಿತು. ದೂರದ ಚರ್ಚಿನ ಪ್ರಾರ್ಥನಾ ಗಂಟೆಯ ದನಿ ಸಂಗೀತದಂತೆ ಅಲೆ ಅಲೆಯಾಗಿ ಮಧುರ ವಾಗಿ ಕೇಳಿ ಬಂತು.

ಮೂರ್ತಿಗೆ ಇದ್ದಕ್ಕಿದ್ದಂತೆ ಶಂಕರುವಿನ ನೆನಪಾಯಿತು. ಅದೊಂದು ದಿನ ಇಂತಹುದೇ ರಾತ್ರಿ, ಸರು ಬಿಟ್ಟು ಹೋದ ಕೆಲವೇ ದಿನಗಳಾಗಿತ್ತು. ಶಂಕರುವಿನ ಗೆಳೆತನವೂ ಗಾಢವಾಗುತ್ತಿತ್ತು. ಅಂದು ಶಂಕರು ಕೆಲವು ಹಾಡು ಹೇಳಿದ್ದ. ಶಂಕರುವಿಗೆ ಸೊಗಸಾದ ಶಾರೀರವಿತ್ತು. ಆದರ್ಶಕ್ಕಾಗಿ ಅಲೆದಾ ಡುವ ವ್ಯಕ್ತಿಯ ಜೀವನದ ಎಡರು ತೊಡರುಗಳು, ಅವುಗಳನ್ನು ಬಗೆಹರಿ ಸುವ ಮಹಾ ಸಮಸ್ಯೆಗಳನ್ನೆಲ್ಲಾ ತಿಳಿಸಿದ್ದ. ಜೀವದ ಎರಡು ಕಾಲುಗಳು ಆಸೆ ನಿರಾಸೆ, ಒಂದು ಹೆಜ್ಜೆ ನಿರಾಸೆ ಮತ್ತೊಂದು ಆಸೆ. ಆದರೆ ಜೀವದ ಹೃದಯ ವಿದೆಯಲ್ಲಾ ಅದೇ ಆದರ್ಶ. ಅದು ಮುಂದೆ ಸಾಗುವಲ್ಲಿ ನಿರಾಸೆಯಿದೆಯೆಂದು ಕುಗ್ಗಲಾಗದು. ಆಸೆಯಿದೆಯೆಂದು ಅತಿ ಹಿಗ್ಗಲಾಗದು, ಆ ಆಸೆಯಿಟ್ಟು ಮುನ್ನಡೆಯಲು ಯತ್ನಿಸಿ ಮುಗ್ಗರಿಸಲೂ ಬಾರದು. ಹವಣರಿತು ಹದವಾಗಿ ಹೆಜ್ಜೆಯಿಟ್ಟರೆ ಖಂಡಿತ ಜೀವ ಸಫಲ! ಕೆರೆಯ ಏರಿಯ ಮುರುಕು ಮಂಟಪದ ಬಳಿ ಮೂರ್ತಿ, ಶಂಕರು ಕುಳಿತಿದ್ದರು. ಅಲ್ಲಿಯೇ ಬೆಳೆದಿದ್ದ ತೆಂಗಿನ ಮರದ ಗರಿಗಳ ಮೇಲೊಂದು ನಕ್ಷತ್ರ ಛಳಿಯಲ್ಲಿ ನಡುಗುತ್ತಿತ್ತು. ದೂರದಿಂದ ಶಾಲೆಯ ಪಕ್ಕದ ಚರ್ಚಿನ ಪ್ರಾರ್ಥನಾ ಗಂಟೆ ಕೇಳಿತ್ತು.

ಮೂರ್ತಿಯ ಮನಸ್ಸು ಆಕಡೆ ತುಯ್ದಿತ್ತು. ಈಗ ಮತ್ತೆ ಚಿಂತಿಸಲಾರಂಭಿಸಿದ, ಶಂಕರು ಏನಾದ? ವೈಯುಕ್ತಿಕ ಸತ್ಯಾಗ್ರಹಕ್ಕೆಂದು ಹೋದವನು ಏನಾದನೆಂಬುದೇ ಗೊತ್ತಾಗಿರಲಿಲ್ಲ! ಚಿಂತಿಸುತ್ತಾ ಹಾಗೆಯೇ ಕಣ್ಣು ಮುಚ್ಚಿದ ಮೂರ್ತಿಗೆ ಶೇಷು ಊಟ ಮುಗಿಸಿ ಒಂದುದು ತಿಳಿಯಲೇ ಇಲ್ಲ. ಶೇಷು ಒಂದೆರಡು ನಿಮಿಷ ಹಾಗೆಯೇ ನಿಂತಿದ್ದ, ಮೂರ್ತಿಗೆ ನಿದ್ರೆ ಬಂದಿದೆಯೆಂದು ಕೊಂಡು, ಸದ್ದಿಲ್ಲದೆ ಹೊರಗೆ ಹೋಗಲು ಯತ್ನಿಸುವ ವೇಳೆಗೆ ಮೂರ್ತಿ ಕಣ್ತೆರೆದ."

" ಶೇಷು "

" ಓ, ನಿನಗೆ ನಿದ್ರೆ ಬಂದಿದೆ ಎಂದೇ ತಿಳಿದಿದ್ದೆ ಮೂರ್ತಿ. "

" ಇಲ್ಲ, ಏನೋ ಯೋಚನೆಮಾಡುತ್ತಿದ್ದೆ, ಶೇಷು. "

" ಸರಿ, ಆರಂಭವಾಯ್ತೋ ? "

" ಇಲ್ಲ ಶೇಷು, ಶಂಕರುವಿನ ನೆನಪಾಯ್ತು. ನನಗೆ ಆದರ್ಶ ತೋರಿದ ಗುರು ಎಲ್ಲಿರುವನೋ ಎಂದು ಯೋಚಿಸಿದೆ. ಮತ್ತೆ ನಾನು ಶಂಕರುವನ್ನು ಕಾಣುವೆನೋ ಇಲ್ಲವೋ "

ಶೇಷು ತಲೆ ತಗ್ಗಿಸಿ ಸುಮ್ಮನೆ ನಿಂತಿದ್ದ. ಮೂರ್ತಿಯೂ ಕೊಂಚಕಾಲ ಮಾತಾಡಲಿಲ್ಲ.

" ನಾನೂ ಇಲ್ಲಿಯೇ ಮಲಗಿಕೊಳ್ಳುತ್ತೇನೆ ಮೂರ್ತಿ " ಎಂದು ಶೇಷು ಮೂಲೆಯಿಂದ ಒಂದು ಚಾಪೆ ತಂದು ಹಾಸಿದ. ಅಲ್ಲಿಯೇ ಇದ್ದ ಒಂದು ಹರಕು ಕಂಬಳಿಯನ್ನು ತಂದಿಟ್ಟುಕೊಂಡು ಮಲಗಲು ಸಿದ್ಧನಾದ.

"ಇದೇನೇ ಜೈಲಿನ ಹಾಸಿಗೆ."

"ಹೂಂ, ಇಷ್ಟೆ."

"ಶೇಷು, ಎಷ್ಟು ವಿಚಿತ್ರಜೀವನವೋ ನಮ್ಮದು. ನೀನು ಲಕ್ಷಾಧೀಪತಿಯ ಮೊಮ್ಮಗ, ದತ್ತುಮಗ. ಹೀಗೆ ಜೈಲಿನಲ್ಲಿ ಖೈದಿಗಳು, ದರೋಡೆ-ಕೋರರು ಮಲಗಿದ ಹರುಕು ಚಾಪೆಯ ಮೇಲೆ ಮಲಗಬೇಕು"

ಮತ್ತೆ ಕೊಂಚಕಾಲ ಇಬ್ಬರೂ ಮೌನವಾಗಿದ್ದರು. ಅದೇಕೋ ಏನೋ ಒಂದು ಅವ್ಯಕ್ತ ಕೊರತೆ ಭಾಧಿಸುತ್ತಿತ್ತು ಇಬ್ಬರನ್ನೂ.

"ಶೇಷು, ನಿದ್ರೆ ಬಂತೇನೋ?"

"ಇಲ್ಲಿ ನಿದ್ರೆ ಬಂದಹಾಗೆಯೇ ಇದೇನೋ ! ಸೊಳ್ಳೆಗಳಿಗೆ ಗುತ್ತಿಗೆ ಅಂತ ತೋರುತ್ತೆ ಈ ಜಾಗ. ಮೇಳ ಗಾನ ಆರಂಭವಾಗಿದೆ."

"ಅದಿರಲೊ, ನಿಮ್ಮ ಅಜ್ಜ ಏನಂದಾರೋ ಶೀಪು?"

"ಏನಂದಾರು ? "

ಏನನ್ನು ವರೆಂಬುದು ಗೊತ್ತೇ ಇತ್ತು. ಆದರೆ ಏನುಮಾಡುವರೋ ಅದು.

"ನಿನ್ನನ್ನು ಹುಡುಕಿಕೊಂಡು ಜೈಲಿಗೆ ಬರಬಹುದು. ನಿನ್ನನ್ನು ಬಿಡಿಸಲು ಯತ್ನಿಸಬಹುದು. ಹೇಗಿದ್ದರೂ ಹಣವಿದೆ; ಅಧಿಕಾರಿಗಳ ಮೇಲೆ ಪ್ರಭಾವವೂ ಇದೆ."

"ನಮ್ಮ ಅಜ್ಜನನ್ನು ತಿಳಿದೂ ತಿಳಿದೂ ನೀನು ಹೀಗೆ ಅನ್ನುತ್ತೀಯಲ್ಲಾ ಮೂರ್ತಿ. ತೊಲಗಿಹೋದರೆ ಸಾಕು ಈ ಪ್ರಾಣಿ ಅಂತ ಕಾದಿದ್ದರು. ನಾನೀಗ ಜೈಲಿಗೆ ಬಂದುದು ಅವರಿಗಿನ್ನೂ ಸುಖವೇ ಆಯಿತು. ನನ್ನನ್ನು ಬಯ್ಯುವುವಕ್ಕೋಸ್ಕರ ಜೈಲಿಗೆ ಬಂದರೂ ಬರಬಹುದೇ ಹೊರತು ಬಿಡಿಸುವು ದಕ್ಕಾಗಿ ಖಂಡಿತ ಬರುವುದಿಲ್ಲ. ನನಗೋಸ್ಕರ ಅಷ್ಟು ಜವಾಬ್ದಾರಿ ವಹಿಸು ವವರೇ ಅವರು ? ಅಷ್ಟು ತೊಂದರೆ. ಊಹುಂ ! "

ಮತ್ತೆ ಕೊಂಚಕಾಲ ಮೌನ. ಆ ಮೌನವನ್ನು ಭೇದಿಸಿಕೊಂಡು ಒಮ್ಮೊಮ್ಮೆ ಮೂರ್ತಿಯ ನರಳಾಟ.

"ಮೂರ್ತಿ, ಬಹಳ ಹೊಡೆದರೇನೋ."

"ವಿಪರೀತ, ಮೈಮೂಳೆಯೆಲ್ಲ ಮುರಿದಂತಾಗಿದೆ. ನಿನಗೆ ಹೊಡೆಯ ಲಿಲ್ಲತಾನೇ."

"ಇಲ್ಲ, ಆದರೆ ರಾತ್ರಿಯೆಲ್ಲ ನಿದ್ರೆಬಾರದಂತೆ ಮಾಡಿದರು. ವಿಪರೀತ ಹಿಂಸೆಯಾಯಿತು."

" ಅಂದರೆ."

" ನನ್ನನ್ನು ಕೂಡಿದ್ದ ಲಾಕಪ್ಪಿನ ಪಕ್ಕದ ಒಂದು ಗೋಡೆಗೆ ಸೇರಿದಂತೆ ಒಂದು ಯಂತ್ರವಿತ್ತು. ನನಗೆ ಕೊಂಚ ತೂಕಡಿಕೆ ಬಂತೆಂದರೆ ಆರಂಭ, ಅದರ ಗರ್ಜನೆ. ನನಗೆ ಕೂಡಲೇ ಜೋಂಪೆಲ್ಲಾ ಹೋಗಿ ಎಚ್ಚರ ವಾಗುತ್ತಿತ್ತು. ಆದರೆ ಆ ಇನಸ್ಪೆಕ್ಟರ 'ಒಂದೇಸಮನಾಗಿ "ಕಿಡಿ, ಕಿಡಿ" ಅಂತ ಹೊಡೆದುಕೊಳ್ಳುತ್ತಿದ್ದ."

" ಅದನ್ನು ಅಚ್ಚು ಹಾಕಿಸಿದ್ದು ಯಾರು ಅಂತ ಅವರಿಗೆ...."

" ಅದಕೋಸ್ಕರ ನಿನಗೆ ಚಿತ್ರಹಿಂಸೆಕೊಟ್ಟರು, ಹೊಡೆದರು. ನನ್ನನ್ನು ಮಾತ್ರ ಮಾನಸಿಕವಾಗಿಯೇ ತಿರುಗಿಸಲು ಯತ್ನಿಸಿದರು. ನನಗೆ ಅದು ತಿಳಿದಿಲ್ಲವೆಂದುಕೊಂಡಿರುವಂತಿದೆ."

"ನಮ್ಮಿಬ್ಬರಿಗಲ್ಲದೆ ಅದು ಬೇರೆ ಯಾರಿಗಾದರೂ ಗೊತ್ತೇನೋ? ಶೇಷು,"

"ಆ ಭೈರಂಗಪ್ಪನಿಗೆ ಮಾತ್ರಗೊತ್ತು. ಅವನೂ ಈವತ್ತು ಜೈಲಿಗೆ ಬಂದ, ಅವನನ್ನು ಹೆಚ್ಚಿಗೆ ಏನೂ ಕೇಳಲಿಲ್ಲವಂತೆ; ಆದುದರಿಂದ ಪರವಾಗಿಲ್ಲ."

" ಶೇಷು. ಆದರೆ ನನಗೊಂದು ಯೋಚನೆ. ಬೆಳಗುಳದ ಕಾರ್ಖಾನೆಯ ನನ್ನ ಜತೆಗಾರರಿಗೆ ಆ ಪತ್ರಿಕೆ ತಲುಪಿತೋ ಇಲ್ಲವೋ- ಇವರು ಯಾರಾದರೂ ತೆಗೆದುಕೊಂಡು ಹೋದರೋ ಇಲ್ಲವೋ ? ಮತ್ತೆ, ನನ್ನ ರೂಮಿನಲ್ಲಿರುವ ಸಾಮಾನು-ಆ ಕಮಲ, ದೊರೆಸಾಮಿ ಏನುಮಾಡಿಬಿಟ್ಟಿದಾರೋ ಅಂತ ನನಗೆ ಹೆದರಿಕೆ."

" ರೂಮಿನದೇನೋ ಕೊಂಚ ಹೆದರಿಕೆಯೇ. ಬೆಳಗುಳದ್ದು ಏನು ಮಾಡಿರುವರೋ ಗೊತ್ತಿಲ್ಲ. ಈಗ ಅದನ್ನು ಕಳುಹಿಸದಿದ್ದರೆ ನೀನಿಷ್ಟು ದಿನ ಕಷ್ಟಪಟ್ಟದ್ದೂ ಪ್ರಯೋಜನವಿಲ್ಲವಾಗುತ್ತೆ. ನಾಳೆ ಯಾವುದೂ ಗೊತ್ತಾಗುತ್ತೆ, ಈಗ ಕೊಂಚ ಹಾಗೆಯೇ ಮಲಗು. ನಾಳೆ ಜೈಲಿಗೆ ಬರುವವರಿಂದ ಏನಾದರೂ ಸುದ್ದಿ ಬರುತ್ತೆ."

ರಾತ್ರಿಯೆಲ್ಲಾ ಮೂರ್ತಿ ಒಂದೇಸಮನಾಗಿ ನೋವಿನಿಂದ ನರಳುತ್ತಿದ್ದ. ಶೇಷುವಿಗೂ ಸೊಳ್ಳೆಯ ಕಡಿತದಿಂದ ನಿದ್ರೆಯೇ ಬರಲಿಲ್ಲ. ಸುಮ್ಮನೆ ಹೀಗಿಂದ ಹಾಗೆ ಹೊರಳಾಡುತ್ತಿದ್ದ. ಅವನ ನಿಟ್ಟುಸಿರು ಆಗಾಗ ಮೂರ್ತಿಯ ನರಳು ವಿಕೆಯ ದನಿಗೆ ತಾಳಗೂಡಿಸುತ್ತಿತ್ತು.

ಬೆಳಗ್ಗೆ ಮೂರ್ತಿಗೆ ಕೊಂಚ ವಾಸಿಯೆನಿಸಿತು. ಬೆಳಗಿನಜಾವ ಅದು ಹೇಗೋ ನಿದ್ರೆ ಬಂದು ಬಿಟ್ಟಿತು. ಸುಮಾರು ೪-೫ ಗಂಟೆಯ ಕಾಲ ಚೆನ್ನಾಗಿ ನಿದ್ರೆ ಮಾಡಿದ. ಅವನು ಕಣ್ತೆರೆದಾಗ ೯ಗಂಟೆಯು ಮೇಲಾಗಿತ್ತು.

" ಏನು ಬೇಕು ಸಾರ್ ? "

ಬಹಳ ಹೀಚುದನಿ ಕೇಳಿ ಮೂರ್ತಿಗೆ ಆಶ್ಚರ್ಯವಾಯಿತು. ಇದು ಯಾರೋ ಎಂದು ಕಷ್ಟಪಟ್ಟು ಆ ಕಡೆ ತಿರುಗಿದ. ಸುಮಾರು ೧೨ ವರ್ಷದ

ಎಳೆಯ ಹುಡುಗ, ಬಿಳಿಯ ಜುಬ್ಬಾ ಹಾಕಿಕೊಂಡು ಮೇಲೊಂದು ಬಿಳಿಯ ಖಾದಿ ಟೋಪಿ ಇಟ್ಟುಕೊಂಡಿದ್ದ.

"ಶೇಷು ಎಲ್ಲಿ?"

"ಯಾರೋ ಅವರ ಮನೆಯವರು ಬಂದಿದಾರೆ ಸಾರ್, ಅವರನ್ನು ನೋಡಲು ಹೋಗಿದಾರೆ. ಹಾಗೆಯೇ ನಿಮಗೇನಾದರೂ ಎಚ್ಚರವಾದರೆ ಏನು ಬೇಕೆಂದು ಕೇಳು ಅಂತ ಹೇಳಿ ನನ್ನನ್ನಿಲ್ಲಿ ಬಿಟ್ಟು ಹೋಗಿದಾರೆ ಸಾರ್"

"ನೀನು ಯಾವತ್ತು ಬಂದೆ?"

"ನಿನ್ನೆ ಸಂಜೆ ಸಾರ್"

"ಯಾಕೆ?"

"ನಿನ್ನೆ ನಾವು ಮೆರವಣಿಗೆ ಹೊರಟಿದ್ದೆವು ಸಾರ್, ಬೆಳಗ್ಗೆ. ಆಗ ಪೋಲೀಸ್ ಇನಸ್ಪೆಕ್ಟರ್ ಬಂದು ಮೆರವಣಿಗೆಯಲ್ಲಿದ್ದ ಹುಡುಗರನ್ನೆಲ್ಲಾ ಸಿಕ್ಕಾಪಟ್ಟೆ ಬೈದ ಸಾರ್, ಪೋಲೀ ಮಾತೆಲ್ಲ ಅಂದ ಸಾರ್. ನನಗೆ ಕೋಪ ತಡೆಯಲಾಗಲಿಲ್ಲ ಸಾರ್. ಅಲ್ಲೇ ಪಕ್ಕದಲ್ಲಿ ಟೊಮೆಟೋ ಅಂಗಡಿಯಿತ್ತು. ಎರಡಾಣೆ ಟೊಮೆಟೋ ತೆಗೆದು ಅವನ ಬೊಜ್ಜು ಮೈಗೆ ಬಿಗಿದೆ ಸಾರ್. ಅದಕ್ಕೆ ನನ್ನನ್ನು ಚೆನ್ನಾಗಿ ಹೊಡೆದು ಸಂಜೆ ಜೈಲಿಗೆ ತಂದು ಬಿಟ್ಟರು ಸಾರ್"

ಮೂರ್ತಿಗೆ 'ಅಯ್ಯೋ' ಎನಿಸಿತು. ಪಾಪ! ಇನ್ನೂ ಚಿಕ್ಕ ಹುಡುಗ, ಎಷ್ಟು ನೋವಾಗಿರಬೇಕು! ಎಂತಹ ಕ್ರೂರಿ ಆ ಇನಸ್ಪೆಕ್ಟರ್!

"ನಿಮಗೆ ಗೊತ್ತೇ ಸಾರ್, ಆ ಇನಸ್ಪೆಕ್ಟರಿಗೆ ಮಗಳೊಬ್ಬಳಿದಾಳೆ ಸಾರ್. ಹೈಸ್ಕೂಲಿನಲ್ಲಿ ಓದುತ್ತಿದ್ದಾಳೆ. ಅನಸೂಯ ಅಂತ ಹೆಸರು. ಅವಳು ಮೆರವಣಿಗೆಯಲ್ಲಿ ಸೇರಿಬಿಟ್ಟಳು ಅಂತ ಮನೆಯಲ್ಲಿ ಅವಳಿಗೆ ಚಿತ್ರಹಿಂಸೆ. ಕಾಲಿಗೆ ಕೊಳ್ಳಿ ತಗುಲಿಸಿ ಸುಟ್ಟಿದಾನೆ ಸಾರ್, ಅವಳನ್ನು ಈಗ ಮನೆಯಲ್ಲೇ ಕೂಡಿರ್ತಾನೆ ಯಾವಾಗಲೂ! ಅಂತಹವನು ಸಾರ್, ಈ ಇನಸ್ಪೆಕ್ಟರ್!"

ಪಾಪ! ಆ ಹುಡುಗಿಗೆ ಎಷ್ಟು ನೋವಾಗಿರಬೇಕು! ತನ್ನ ಸ್ವಂತ ಮಗಳನ್ನೇ ಹೀಗೆ ದಂಡಿಸಿದರೆ ಮತ್ತೆ ಉಳಿದವರನ್ನು ಬಿಟ್ಟಾನೇ ಈ ಕ್ರೂರಿ ಎನಿಸಿತು ಮೂರ್ತಿಗೆ.

"ಮುಖ ತೊಳೆಯಲು ನೀರು ಕೊಡಲೇ ಸಾರ್?"

ಮುಖ ತೊಳೆಯುತ್ತ ಮೂರ್ತಿ ಪ್ರಶ್ನಿಸಿದ ಹುಡುಗನ ವಿಚಾರವಾಗಿ. ಹುಡುಗನ ತಂದೆ ಯಾವುದೋ ಕಾರ್ಖಾನೆಯಲ್ಲಿ ಜೀತ ಮಾಡುತ್ತಾನೆ. ಹುಡುಗ ಹೈಸ್ಕೂಲಿನಲ್ಲಿ ಓದುತ್ತಿದ್ದಾನೆ. ಇದು ಮೊದಲನೆಯ ವರ್ಷ, ತಂದೆಗೆ ಒಬ್ಬನೇ ಮಗ ಇವನು. ಅವನಲ್ಲಿಯೇ ಎಲ್ಲ ಆಸೆಗಳನ್ನೂ ಇಟ್ಟಿದ್ದಾನೆ ತಂದೆ. ತಂದೆಯ ಆಸೆಯ ರೀತಿಯೇ ಬೇರೆ, ಮಗ ತೋಡಿಕೊಂಡ ಮಾರ್ಗವೇ ಬೇರೆ. ಎಂತಹ ವಿಷಮತೆ ಜೀವನದಲ್ಲಿ ಎನಿಸಿತು ಮೂರ್ತಿಗೆ! ಹುಂ! ಹೀಗೆಯೇ ಇರಬೇಕು ಜೀವನವೆಲ್ಲ ಎಂದುಕೊಂಡು ಹಾಗೆಯೇ ಹಾಸಿಗೆಯ ಮೇಲೊರಗಿ ಕೊಂಡ. ಶೇಷು ಮಾತು ಮುಗಿದೊಡನೆಯೇ ಬರಲಿ ಎಂದು ಹುಡುಗನ ಕೈಲಿ ಹೇಳಿ ಕಳಿಸಿ ಶೇಷುವಿಗಾಗಿ ಕಾದಿದ್ದ.

"ಮೂರ್ತಿ, ಮೂರ್ತಿ" ಎನ್ನುತ್ತಾ ಓಡಿ ಬಂದ ಶೇಷು.

"ಏನೋ?" ಮೂರ್ತಿ ಅವನ ಕಡೆಗೆ ತಿರುಗಿದ.

"ನಮ್ಮಜ್ಜ ಬಂದಿದ್ದರು ಕಣೋ!"

"ಸರಿ ಏನಂದರು, ಇನ್ನೇನು, ಬೈದರು ತಾನೆ?"

"ಹುಂ. ಬೈದರು. ಆದರೆ ಒಂದು ವಿಚಿತ್ರ ರೀತಿಯಲ್ಲಿ, ಮೊದಲು ಗದರಿಸಿ ದರು. ನೀವೆಲ್ಲಾ ಮುಟ್ಠಾಳರು, ಮಾಡೋದಕ್ಕೆ ಕೆಲಸವಿಲ್ಲ. ತಿಂದ ಅನ್ನ ಅರಗೋದಿಲ್ಲ, ಅದಕ್ಕೇ ಈ ಹಾಳು ಮುಷ್ಕರಕ್ಕೆ ಹಚ್ಚಿದೀರಿ ಅಂತ ಇನ್ನೂ ಏನೇನೋ ಬೈದರು. ನಾನು ಸುಮ್ಮನಿದ್ದೆ. ಆಮೇಲೆ ಒಳ್ಳೆಯ ಮಾತಿಗಿಳಿ ದರು. ನೋಡು, ಶೇಷು, ನೀನು ಇಲ್ಲಿಗೆ ಬಂದಿರುವುದು ನಮಗೆಲ್ಲ ಎಷ್ಟು ದುಃಖ! ನಿಮ್ಮಜ್ಜಿ ಆಗಲೇ ಸೊರಗುತ್ತಿದ್ದಾಳೆ, ಕಂಗೆಟ್ಟುಹೋಗಿದ್ದಾಳೆ ಅಂದರು".

"ಓಹೋ, ಕಾವೇರಮ್ಮನವರು ನಿನ್ನ ವಿರಹವ್ಯಥೆಯಿಂದ ಇಳಿದು ಹೋಗುತ್ತಿದ್ದಾರೆ!"

"ಆಮೇಲೆ ಒಳ್ಳೆಯ ಮಾತಿನಲ್ಲೇ, ಕ್ಷಮಾಪಣೆ ಬೇಡಿಕೊಂಡು ಬಿಡು ಅಂತ ಹೇಳಿದರು. ನಾನು ಕೇಳಲಿಲ್ಲ; ಏನೇಮಾಡಿದರೂ ಜಗ್ಗಲಿಲ್ಲ. ಜೈಲರ್ ಚಾಣಕ್ಯ! ಅವನೂ ಏನೇನೋ ಬೋಧಿಸಿದ. ನಾನೊಪ್ಪದಿರಲು ಅಜ್ಜ ರೇಗಿ ನನ್ನನ್ನು ಏನೇನೋ ಅಂದು "ಇನ್ನುಮೇಲೆ ನನಗೂ ನಿನಗೂ ಸಂಬಂಧವಿಲ್ಲ. ನನ್ನ ಪಾಲಿಗೆ ನೀನು ಸತ್ತಂತೆಯೇ" ಎಂದು ಹೇಳಿ ಕೋಪದಿಂದ ಹೊರಟು ಹೋದರು."

"ಹೋಗಲಿ ಬಿಡು, ಒಳ್ಳೆಯದೇ ಆಯಿತು."

ಮೂರ್ತಿ ಕೊಂಚ ಗಂಭೀರನಾದ, ಶೇಷು ನೆಲದಕಡೆಯೇ ದಿಟ್ಟಿಸುತ್ತಿದ್ದ.

"ಶೇಷು—" ಮೆಲ್ಲನೆ ಕೂಗಿದ ಮೂರ್ತಿ.

"ಅಂ" ಶೇಷು ತಲೆಯೆತ್ತಿದ.

"ನನ್ನ ಬಂಧನದ ಸುದ್ದಿಯನ್ನು ಅಣ್ಣ ಹೇಗೆ ತೆಗೆದುಕೊಂಡಿರುತ್ತಾರೋ?"

"ನನ್ನ ಜೈಲಿನ ಸುದ್ದಿ ಅಜ್ಜ ತೆಗೆದುಕೊಂಡ ಹಾಗೆಯೇ."

"ಇಲ್ಲ ಶೇಷು, ಅಣ್ಣನ ಮನಸ್ಸು ಒಳ್ಳೆಯದು. ಆದರೆ ಪುಕ್ಕಲು, ಧೈರ್ಯವಿಲ್ಲ."

ಅಷ್ಟರಲ್ಲಿ ಡಾಕ್ಟರ್ ಬಂದರು. ಯಂತ್ರದಂತೆ ಅವನ ಕೈ ನೋಡಿ ಗಾಯಕ್ಕೆ ಮುಲಾಮು ಹಚ್ಚಿ ಹೊರಟು ಹೋದರು. ಹೊರಗೆ ಊಟದ ಗಂಟೆಯ ಸದ್ದಾಯಿತು. ಶೇಷು ಊಟಕ್ಕೆ ಹೊರಟ; ಮೂರ್ತಿ ಹಾಗೆಯೇ ಒಂದು ಪಕ್ಕಕ್ಕೆ ಹೊರಳಿಕೊಂಡು ನೋವಿನಲ್ಲೊಂದು ನಿಟ್ಟುಸಿರುಬಿಟ್ಟ.

ಮೂರ್ತಿಯ ಗಾಯಗಳೆಲ್ಲಾ ಮಾಗುವ ವೇಳೆಗೆ ೧೦ ದಿನಗಳಾದುವು. ಯಾವಾಗಲೂ ಶೇಷು ಅವನ ಜತೆಯಲ್ಲೇ ಇರುತ್ತಿದ್ದ. ದಿನವೂ ರಾತ್ರಿ ಅಲ್ಲಿಯೇ ಮಲಗಿ ಮೂರ್ತಿಗೆ ಉಪಚಾರಮಾಡುತ್ತಿದ್ದ. ಆಗಾಗ ಉಳಿದ ಹುಡುಗರೂ ಮೂರ್ತಿಯನ್ನು ನೋಡಲು ಬರುತ್ತಿದ್ದರು. ಅವನೊಂದಿಗೆ ಕೆಲವು ಮಾತುಗಳನ್ನಾಡಿ ಹೋಗುತ್ತಿದ್ದರು. ಹೊಸದಾಗಿ ಸೆರೆಗೆ ಬಂದವರಿಂದ ಮೂರ್ತಿ ಹೊರಗಿನ ಸುದ್ದಿ ತಿಳಿಯುತ್ತಿದ್ದ. ಮುಷ್ಕರ ಬೇರೆ ರೀತಿಯಾಗಿ ಹೋಗುತ್ತಿದೆ; ನಾಯಕರಿಲ್ಲದೆ ಹುಡುಗರು ಅನಾಯಕರಾಗಿದ್ದಾರೆ. ಕೆಲವರಾಗಲೇ ಶಾಲೆ ಕಾಲೇಜುಗಳಿಗೆ ಹಿಂತಿರುಗಿದ್ದಾರೆ. ಕೆಲವರು ಹಿಂದು ಮುಂದು ಯೋಚಿಸುತ್ತಿದ್ದಾರೆಂದು ತಿಳಿದು ಮೂರ್ತಿಗೆ ಬಹಳ ದುಃಖವಾಯಿತು. ಆದರೇನು ತಾನೇ ಮಾಡಲು ಸಾಧ್ಯ?

ಮೂರ್ತಿ ಆಸ್ಪತ್ರೆಯಿಂದ ತನ್ನ ಕೋಣೆಗೆ ಬಂದ. ಶೇಷುವೂ ಅವನೂ ಏನೋ ಚರ್ಚೆ ನಡೆಸುತ್ತಿದ್ದಂತೆ ಪೋಲೀಸ್ ಕಾನಸ್ಟೇಬಲ್ ಒಂದು ಜೈಲರ್, ಮೂರ್ತಿಯನ್ನು ಕೂಗಿದರೆಂದು ತಿಳಿಸಿದ. ಅದೇನೋ ಹೊಸದು ಬಂತಲ್ಲಾ ಎಂದು ಮೂರ್ತಿ ಶೇಷು ಇಬ್ಬರೂ ಜೈಲರನ ಕಚೇರಿಗೆ ನಡೆದರು. ಜೈಲರ್ ಮೂರ್ತಿಯ ಹೆಸರು, ವಿಳಾಸಗಳನ್ನೆಲ್ಲಾ ಗುರುತು ಹಾಕಿಕೊಂಡು ಅವನಿದ್ದ

ಕೆಲಸವನ್ನು ಬರೆದುಕೊಂಡ. ಈವತ್ತು ಹನ್ನೆರಡು ಗಂಟೆಯ ವೇಳೆಗೆ ಸಿದ್ಧರಾಗಿರಿ ಎಂದು ತಿಳಿಸಿದ ಮೂರ್ತಿಗೆ.

ಎಲ್ಲಿಗೆ, ಯಾತಕ್ಕೆ, ಯಾವುದೂ ಗೊತ್ತಿಲ್ಲ; ಸುಮ್ಮನೆ ಸಿದ್ಧರಾಗಿರಿ ಎಂದರೆ! ಮೂರ್ತಿಗೆ ಆಶ್ಚರ್ಯವಾಯಿತು.

" ಯಾತಕ್ಕೆ ಸಿದ್ಧರಾಗಬೇಕು ? "

" ಹೊರಡಲು " ಎನ್ನುತ್ತಾ ಜೈಲರ್ ತನ್ನಷ್ಟಕ್ಕೆ ತಾನು ಬರೆಯುತ್ತಾ ಕುಳಿತುಬಿಟ್ಟ. ಮೂರ್ತಿ ಕೊಂಚಹೊತ್ತು ಕಾದಿದ್ದು ಹೊರಗೆ ಬಂದ.

* * *

ಹುಡುಗರೆಲ್ಲ ಬಾಗಿಲ ಬಳಿ ಕಾದಿದ್ದು ಬೀಳ್ಕೊಟ್ಟರು. ಹೊರಗೆ ಪೋಲೀಸ್ ವ್ಯಾನ್ ಕಾದಿತ್ತು. ತಮ್ಮ ಗೆಳೆಯರನ್ನೆಲ್ಲಿ ಕರೆದೊಯ್ಯುವರೋ ಏನುಮಾಡುವರೋ ಒಂದೂ ತಿಳಿಯದು. ಅದೂ ಬರಿಯ ೧೦ ಜನರನ್ನು ಮಾತ್ರವೇ! ಹುಡುಗರಿಗೆ ಒಂದು ಬಗೆಯ ಹೆದರಿಕೆ ಬೇರೆ; ಗುಂಡಿನಿಂದ ಹೊಡೆದು ಕೊಂದುಬಿಟ್ಟರೆ! ಎಲ್ಲಿಯೋ ಸೆರೆಯಾಳುಗಳನ್ನು ಹಾಗೆ ಕೊಂದು ಬಿಟ್ಟರೆಂದು ಸುದ್ದಿ ಬೇರೆ ಕೇಳಿದ್ದರು. ಹಾಗೆಯೇ ತಮ್ಮ ಗೆಳೆಯರನ್ನು....

ಶೇಷು ಮೂರ್ತಿಯನ್ನು ಬಿಗಿದಪ್ಪಿದ, ಅವನಿಂದ ಉದ್ವೇಗವನ್ನು ತಡೆಯಲಾಗಲಿಲ್ಲ ಕಣ್ಣಿನಲ್ಲಿ ನೀರು ತುಂಬಿತು. ಮೂರ್ತಿಗೂ ಅವನನ್ನು ಬಿಟ್ಟುಹೋಗಲು ಹೇಗೆಹೇಗೋ ಅನಿಸಿತು. ಮತ್ತೆ ಕಾಣುವೆವೋ ಇಲ್ಲವೋ, ಬೇರೆ ಯಾವುದಾದರೂ ಸೆರೆಮನೆಗೆ ಕಳಿಸಿದರೂ ಸರಿ; ಇಲ್ಲವೇ, ಗುಂಡಿನೇಟಿಗೆ ಕೊಟ್ಟರೂ ಸರಿ; ಹೇಗೆಂದು ತಾನೇ ಹೇಳಲಾದೀತು.

" ಶೇಷು, ಮತ್ತೆ ನೋಡುವೆವೋ ಇಲ್ಲವೋ, ಇದೇ ಕೊನೆಯ ಬಾರಿ. "

ಮಾತು ಹೊರಡಲಿಲ್ಲ ಮುಂದೆ. ಒಬ್ಬರನ್ನೊಬ್ಬರು ಮತ್ತೆ ಬಿಗಿ ದಪ್ಪಿದರು ಶೇಷು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ.

" ಇದೇನೋ ಇದು ಶೇಷು, ಅಳುವರೇನೋ ? ಧೈರ್ಯ ತಂದುಕೋ. ನಾಹೋದರೇನೀಗ, ಏನೂ ನಷ್ಟವಿಲ್ಲ! ಹುಚ್ಚ, ಇದಕ್ಕೇ ಅತ್ತರಾಯಿತಲ್ಲ! ನಾ ಹೊರಡಲೇನೋ, ಬದುಕಿದ್ದರೆ ಭೇಟಿ! "

ಶೇಷು ಹುಚ್ಚು ಹಿಡಿದವನಂತೆ ನಿಂತಿದ್ದ. ಬಾಲಕರೆಲ್ಲ ಜೈಕಾರ ಮಾಡು ತ್ತಿದ್ದರು. ಜೈಲಿನ ಬಾಗಿಲು ಮುಚ್ಚಿತು. ಹೊರಗೆ ಮೋಟಾರು ಹೊರಟ

ಸದ್ದಾಯಿತು. ಹೊರಗಿನಿಂದಲೂ ಆ ಹತ್ತು ಜನರ ಜೈಕಾರ ಕೇಳಿ ಬಂತು. ಜೈಲಿನ ಹುಡುಗರು ಮತ್ತೂ ಜೋರಾಗಿ ಜೈಕಾರ ಮಾಡಿದರು. ಶೇಷು ಮಾತ್ರ ಹುಚ್ಚನಂತೆ ಆಕಾಶದಲ್ಲಿ ಪಯಣ ಸಾಗುತ್ತಿದ್ದ ಮೋಡವೊಂದನ್ನೇ ದಿಟ್ಟಿಸಿ ನೋಡುತ್ತಿದ್ದ.

ಸಂಜೆ ಮೋಟಾರಿನ ಸದ್ದು ಕೇಳಿದೊಡನೆಯೇ ಶೇಷುವೂ ಉಳಿದ ಹುಡುಗರೊಂದಿಗೆ ಬಾಗಿಲ ಬಳಿಗೋಡಿದ. ಒಬ್ಬೊಬ್ಬರಾಗಿ ಹೋದವರೆಲ್ಲ ಒಳಬಂದರು. ಶೇಷುವಿನ ಎದೆ ತಹತಹಿಸುತ್ತಿತ್ತು. ಆದರೆ ಮೂರ್ತಿ ಮಾತ್ರ ಬರಲಿಲ್ಲ. ಅಲ್ಲಿಯೇ ವಿದ್ಯಾರ್ಥಿಗಳನ್ನುದ್ದೇಶಿಸಿ ನಾಯಕರು ಮಾತನಾಡಿದರು. ತಮ್ಮನ್ನೆಲ್ಲಾ ಕರೆದುಕೊಂಡು ಹೋಗಿದ್ದುದು ನ್ಯಾಯಾಸ್ಥಾನಕ್ಕೆ. ತಮ್ಮ ಮೇಲೆಲ್ಲಾ ಒಂದಲ್ಲ ಒಂದು ವಿಧದಲ್ಲಿ, ಒಂದಲ್ಲ ಒಂದು ಕಾರಣಕ್ಕಾಗಿ ಮೊಕದ್ದಮೆ ಹೂಡಿದ್ದಾರೆ. ಶೇಷುವನ್ನು ಪೋಲೀಸಿನರು ತಮ್ಮ ವಶದಲ್ಲಿಯೇ ಉಳಿಸಿಕೊಂಡಿದಾರೆ ಎಂದು ತಿಳಿಸಿದರು ಭಾಷಣಕಾರರು.

ಶೇಷು ಕಾಲೆಳೆದುಕೊಂಡು ತನ್ನ ಕೋಣೆಗೆ ಹಿಂತಿರುಗಿದ. "ಮೂರ್ತಿ ಬರಲಿಲ್ಲ, ಮೂರ್ತಿ ಬರಲಿಲ್ಲ!" ಇದೇ ಅವನ ಮನಸ್ಸಿನಲ್ಲಿ ಒಂದೇ ಸಮನೆ ಪ್ರತಿಧ್ವನಿತವಾಗುತ್ತಿತ್ತು. ಅವನ ಪಕ್ಕದ ಹುಡುಗ ಏನೋ ಮಾತನಾಡಿದ. ಆದರೆ ಶೇಷುಗೊಂದೂ ಗೊತ್ತೇ ಆಗಲಿಲ್ಲ. ಪೆಚ್ಚು ಮೋರೆ ಹಾಕಿಕೊಂಡು ಕುಳಿತ. ಮತ್ತೆ ಮೂರ್ತಿಗೆ ಚಿತ್ರಹಿಂಸೆ ಕೊಡುವರೆಂಬುದು ಖಚಿತವಾಗಿ ಹೋಗಿತ್ತು. ಪಾಪ! ಮೂರ್ತಿಗೆ ಗಾಯ ಇನ್ನೂ ಆಗತಾನೇ ಮಾಗಿದೆ. ಹಾಸಿಗೆಯಿಂದ ಇನ್ನೂ ನಿನ್ನೆ ಮೊನ್ನೆ ತಾನೇ ಎದ್ದವನು ಆಗಲೇ ಮತ್ತೆ ಚಿತ್ರಹಿಂಸೆಗೆ ಗುರಿಯಾಗಬೇಕಲ್ಲಾ! ಶೇಷುವಿಗೆ ಹೃದಯ ತುಂಬಿ ಬಂತು. ಮನಸ್ಸು ತಾಕಲಾಟದಲ್ಲಿ ಒದ್ದಾಡುತ್ತಿತ್ತು. ಒಂದೇ ಸಮನೆ ಕಾಲು ರೂಮಿನ ಈ ಬದಿಯಿಂದ ಆ ಬದಿಗೆ ಸಾಗಿ ಬರುತ್ತಿತ್ತು. ಹಾಗೆಯೇ ಶೇಷು ಕಿಟಕಿಯಿಂದ ಹೊರಗೆ ನೋಡಿದ. ಸೂರ್ಯ ಮುಳುಗುವ ಸಮಯ, ಎದುರಿಗೆ ತೆಂಗಿನ ಗರಿಗಳ ಮೇಲೆ ಕೆಂಬಣ್ಣ ಮೂಡಿತ್ತು. ಜೈಲಿನ ಹೊರ ಗೋಡೆಯ ಮೇಲೊಂದು ಬಿಳಿಯ ಹಕ್ಕಿ ಕುಳಿತು ಅವನ ಕಡೆಗೇ ನೋಡುತ್ತಿರುವಂತೆ ಕಾಣುತ್ತಿತ್ತು. ಅದರ ಮೈಯೆಲ್ಲಾ ಸಂಜೆಯ ಕಿರಣಗಳಲ್ಲಿ ರಕ್ತವರ್ಣವಾಗಿತ್ತು. ಶೇಷು ಅದರ ಕಡೆಗೇ ದಿಟ್ಟಿಸುತ್ತಿದ್ದಂತೆ ದೂರದಿಂದ ಚರ್ಚಿನ ಗಂಟೆಯ ಸದ್ದು ಒಮ್ಮೆಲೇ ಕೇಳಿ ಬಂತು.

ಹಕ್ಕಿ ಹಾರಿ ಹೋಯಿತು. ಸೂರ್ಯ ಮುಳುಗಿದ. ಶೇಷು ಮಾತ್ರ ಅಲ್ಲಿಯೇ ನಿಂತಿದ್ದ, ಹಾಗೆಯೇ!

ಶೇಷು ಅಂದಿನಿಂದ ಯಾರ ಜತೆಗೂ ಸೇರುತ್ತಿರಲಿಲ್ಲ. ಯಾವಾಗಲೂ ಒಬ್ಬನೇ ಕೂತಿರುತ್ತಿದ್ದ. ಜೈಲಿನ ದಕ್ಷಿಣ ಭಾಗಕ್ಕೊಂದು ತೋಟವಿತ್ತು. ಅಲ್ಲೊಂದು ಎತ್ತರವಾದ ಮಾವಿನ ಮರ. ಆ ಮರದ ನೆರಳಿನಲ್ಲಿ ಕುಳಿತು ಶೇಷು ಯಾವಾಗಲೂ ಓದುತ್ತಿದ್ದ. ಊಟ ಮಾಡಿದರೆ ಉಂಟು, ಇಲ್ಲದಿದ್ದರೆ ಇಲ್ಲ. ಹೀಗಾಗಿ ಶೇಷು ದಿನೇ ದಿನೇ ಇಳಿಯುತ್ತಾ ಬಂದ. ಮೂರ್ತಿಯ ಸುದ್ದಿ ಏನೂ ತಿಳಿಯಲೇ ಇಲ್ಲ, ಅವನು ಹೋಗಿ ಆಗಲೇ ಒಂದು ವಾರವಾಯಿತು. ಆದರೂ ಅವನೆಲ್ಲಿ, ಏನಾದ ಎಂಬುದೊಂದೂ ಯಾರಿಗೂ ತಿಳಿಯದು. ಆ ಹತ್ತು ಮಂದಿಯ ಮೇಲಿನ ಮೊಕದ್ದಮೆ ನಡೆಯುತ್ತಿತ್ತು. ಶೇಷುಗೆ ಅವರು ನ್ಯಾಯಾಲಯಕ್ಕೆ ಎಂದು ಹೋಗುವರೆಂಬುದೂ ತಿಳಿಯದು. ಯಾವಾಗಲೂ ಮೂರ್ತಿಯ ವಿಚಾರವಾಗಿಯೇ ಚಿಂತೆ. ಪೋಲೀಸಿನರು ಆ ದಿನವೇ ಅಷ್ಟೊಂದು ಹಿಂಸೆ ಕೊಟ್ಟವರು ಈಗೇನು ಮಾಡಿರುವರೋ! ಮೂರ್ತಿಗೆ ಅದನ್ನು ಸಹಿಸಲು ಸಾಧ್ಯವಾಗಿದೆಯೋ ಇಲ್ಲವೋ!

ಮೋಡಗಳ ದಿಬ್ಬಣ ಆಕಾಶದಲ್ಲಿ ಸಾಗಿತ್ತು. ಏನೋ ಒಂದು ಬಗೆಯ ನೀರವತೆ. ಆ ನೀರವತೆಯ ಸೆರಗಿನಲ್ಲಿ ಮಹಾ ಬಿರುಗಾಳಿಯಿದೆಯೆನ್ನುವಂತಿತ್ತು. ಹೃದಯಕ್ಕೆ ಶಾಂತಿಯ ಬದಲು ಅವ್ಯಕ್ತ ನೋವು ತಂದಿತ್ತು ಆ ನೀರವತೆ! ಆ ಮೋಡಗಳ ಕಪ್ಪು ಹಿನ್ನೆಲೆಗೊಂದು ಬಿಳಿಯ ಹಕ್ಕಿ ಗಾಳಿಗೆದುರು ಸಾಗುತ್ತಿತ್ತು. ಬಹು ಸುಂದರ ದೃಶ್ಯ, ರೆಕ್ಕೆ ಬಡಿದು ಬಡಿದು ಆಯಾಸಗೊಂಡಿತ್ತು, ಗಾಳಿಯ ವೇಗ ವಿಪರೀತ, ಹಕ್ಕಿ ಎಷ್ಟೇ ಪ್ರಯಾಸ ಪಟ್ಟರೂ ಬಹಳ ಮುಂದೆ ಹೋಗಲಾಗಿರಲಿಲ್ಲ! ಅದೂ ಆ ಅಪಾರ ಆಕಾಶದಲ್ಲಿ ಮಹಾ ಮೋಡಗಳ ಹಿನ್ನೆಲೆಗೆ ಅದೊಂದು ಕಿರಿಹಕ್ಕಿ. ಅಣುಮಾತ್ರವಾದುದು ಅಲೆಯೇ ತೂಗು ಹಾಕಿದಂತಿತ್ತು. ಶೇಷು ಅದನ್ನೇ ಎವೆಯಿಕ್ಕದೆ ನೋಡುತ್ತಿದ್ದ. ಆ ಹಕ್ಕಿಯಲ್ಲೇನೋ ಆತ್ಮೀಯತೆ! ಅದರ ಬಾಳಿನಲ್ಲಿ ಯಾವುದೋ ಅನಿರ್ವಚನೀಯ ಸಹಾನುಭೂತಿ! ಅದು ಅನುಭವಿಸುತ್ತಿದ್ದ ಬಿರುಗಾಳಿಯ ಬಿರುಸು ಶೇಷುವಿನ ಹೃದಯದಲ್ಲಿ ಅಲ್ಲೋಲ ಕಲ್ಲೋಲ ಮಾಡಿತ್ತು. ಆ ಅಲ್ಲೋಲ ಕಲ್ಲೋಲದಲ್ಲಿ

ಮೂರ್ತಿಯ ಆಕೃತಿ ಹಾಗೂ ಹೀಗೂ ಅಲೆಗಳೊಂದಿಗೆ ಹೋರಾಡುತ್ತಿದ್ದಂತೆ ತೋರಿತು.

" ಶೇಷಗಿರಿ, ಶೇಷಗಿರಿ "

ಶೇಷುಗೆ ಆ ದನಿ ಕೇಳಿಸಲಿಲ್ಲ.

" ಏ ಶೇಷಗಿರಿ, ಮೂರ್ತಿ ಬಂದಿದ್ದಾರೆ. "

ಶೇಷು ಛಂಗನೆ ನೆಗೆದ; ಮೂರ್ತಿ! ಮೂರ್ತಿ ಬಂದಿದಾನೆ! ನೇರ ತನ್ನ ಕೋಣೆಗೆ ಓಡಿದ, ಅಲ್ಲಿ ನೋಡಿದರೆ ಮೂರ್ತಿ ಆಸ್ಪತ್ರೆಯಲ್ಲಿರುವನೆಂದು ತಿಳಿಯಿತು. ಆಸ್ಪತ್ರೆಗೆ ಓಡಿದ!

" ಮೂರ್ತಿ, ಮೂರ್ತಿ. "

ಮೂರ್ತಿ ಹಾಸಿಗೆಯ ಮೇಲೆ ಮಲಗಿದ್ದವನು ಹಾಗೆಯೇ ಶೇಷುವಿನ ಕಡೆ ತಿರುಗಿ ನಸುನಕ್ಕ. ಬಾಗಿಲಿನಿಂದ ಬೆಳಕು ನಸುಕು ನಸುಕಿನಂತೆ ಬೀಳುತ್ತಿತ್ತು. ಅದರಲ್ಲಿ ಕೂಡ ಶೇಷುಗೆ ಮೂರ್ತಿಯ ಇಳಿದ ಆಕೃತಿ ಕಾಣಿಸಿತು. ಗುರುತು ಹಚ್ಚುವುದೇ ಕಷ್ಟವಾಗಿತ್ತು. ಅಷ್ಟೊಂದು ಇಳಿದಿದ್ದ ಮೂರ್ತಿ; ಜತೆಗೆ ಹಣೆಯ ಮೇಲೊಂದು ಪಟ್ಟಿ; ಶೇಷುವಿಗೆ ಕಣ್ಣಿನಲ್ಲಿ ನೀರುಬಂತು, ಮೆಲ್ಲನೆ ಹಾಸಿಗೆಯ ಮೇಲೆ ಬಂದು ಕುಳಿತು ಮೂರ್ತಿಯ ಕೈ ಹಿಡಿದುಕೊಂಡು ಮೆಲ್ಲನೊತ್ತಿದ. ಮೂರ್ತಿಯ ಕೆನ್ನೆಯ ಮೇಲೊಂದು ಬಿಸಿ ಹನಿ ಬೀಳಲು ಮೂರ್ತಿ ಕಣ್ತೆರೆದ. ನಾಲ್ಕು ಕಣ್ಣು ಸೇರಿದುವು. ಇಬ್ಬರ ಕೈಗಳೂ ಮೂರ್ತಿಯ ಎದೆಯ ಮೇಲೊರಗಿದುವು.

" ಬಹಳ ಇಳಿದುಹೋಗಿದ್ದಿ, ಶೇಷು. "

" ನಾನಿಳಿದಿರುವುದು ಹಾಗಿರಲಿ, ನಿನ್ನ ಅವಸ್ಥೆಯೇನಿದು? ಬರಿಯ ಒಣಕಲು ಮೂಳೆಯ ಹಂದರವಾಗಿದ್ದೀಯಲ್ಲ! ಮತ್ತೆ ಹಿಂಸೆಯೇ? "

" ಹುಂ, ಇನ್ನೇನು, ಇವರಿಗೆ ಗೊತ್ತಿರುವ ಮಾರ್ಗ ಅದೊಂದೇ! ಹಿಂಸೆ, ಹಿಂಸೆ! ಹಿಂಸೆ ಈ ಬಾರಿ ವಿಪರೀತವಾಗಿ ಹೋಯಿತು. ಶೇಷು, ಹಣೆಯ ಮೇಲಿನ ಪಟ್ಟಿಯಿದೆಯಲ್ಲಾ ಅಲ್ಲೊಂದು ತೂತಾಗಿ ಹೋಯಿತು. "

" ತೂತಾಗಿದೆಯೇ? "

" ನಾವೆಲ್ಲಾ ಇಲ್ಲಿಂದ ಹೋದೆವಲ್ಲಾ, ನ್ಯಾಯಾಲಯಕ್ಕೆ ಕರೆದು ಕೊಂಡು ಹೋದರು. ನಮ್ಮ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ

ನೊಕದ್ದಮೆ ಹೂಡಿದರು. ಸಂಜೆಯ ಹೊಡನೆಯೇ ಎಲ್ಲರನ್ನೂ ಜೈಲಿಗೆ ಕರೆದುಕೊಂಡು ಹೋಗುವರೆಂದು ನಾವೆ ತಿಳಿದಿದ್ದೆವು. ಆದರೆ ಉಳಿದವರನ್ನೆಲ್ಲ ಗಾಡಿಹತ್ತಿಸಿದರು. ನನ್ನನ್ನು ಅಲ್ಲಿಯೇ ನಿಲ್ಲಿಸಿಕೊಂಡರು. ಯಾತಕ್ಕೋ ಏನೋ ನನಗೆ ತಿಳಿಯಲಿಲ್ಲ. ಬಂದದ್ದು ಬರಲಿ ಎಂದು ಸುಮ್ಮನಿದ್ದೆ. ಅರ್ಧ ಘಂಟೆ ಕೋರ್ಟಿನ ಮುಂದೆ ಕುಳಿತಿದ್ದೆ; ನಿಜ ಶೇಷು, ನೀನಾವತ್ತು ಅಂದೆ ನೋಡು, ಆ ಮಾತು ನಿಜ."

"ಯಾವ ಮಾತು?"

"ನಾನಲ್ಲಿ ಕುಳಿತಿದ್ದಾಗ ಅಣ್ಣ ಆ ಕಡೆ ಬಂದರು. ನನ್ನನ್ನೇ ನೋಡಿದರು. ಅಲ್ಲಿಯೇ ಕೊಂಚಕಾಲ ನಿಂತು ಹಾಗೂ ಹೀಗೂ ನೋಡಿದರು; ಮತ್ತೆ ನನ್ನನ್ನೇ ನೋಡಿದರು. ಆದರೆ ಮಾತಾಡಿಸಲು ಇಷ್ಟವಿರಲಿಲ್ಲವೋ ಏನೋ, ನಾನೇ ಮಾತನಾಡಿಸೋಣವೆಂದು ಎದ್ದೆ. ಅವರ ಹತ್ತಿರಕ್ಕೆ ಹೋಗಲಾರಂಭಿಸಿದೊಡನೆಯೇ ಭೂತ ಕಂಡವರಂತೆ ಭರ್‍ರನೆ ಓಡಿಬಿಟ್ಟರು. ಸಂಪೂರ್ಣವಾಗಿ ನಮ್ಮ ಸಂಬಂಧ ಕಡಿದಿದೆಯೆಂದೇ ತೋರುತ್ತದೆ. ಶೇಷು, ಹೂಂ!"

ಮೂರ್ತಿ ನಿಟ್ಟುಸಿರಿಟ್ಟು ಕೊಂಚಕಾಲ ಸುಮ್ಮನಿದ್ದ. ಶೇಷುವೂ ತಲೆ ತಗ್ಗಿಸಿದ. ಹೊರಗೆ ಕತ್ತಲಾಯಿತು; ಹಕ್ಕಿಗಳ ಚಿಲಿಪಿಲಿ ಸದ್ದು ಹೆಚ್ಚಾಯಿತು. ಇಬ್ಬರೂ ಮೌನವಾಗಿ ನೀರವ ಕತ್ತಲಲ್ಲಿ ಮುಳುಗಿದ್ದರು. ವಾರ್ಡರ್ ಬಂದು ದೀಪದ ಗುಂಡಿಯೊತ್ತಿದ, ದೀಪ ಹೊತ್ತಿತು.

"ಶೇಷು, ಆ ದೀಪ ಆರಿಸಿಬಿಡು, ಯಾಕೋ ಕತ್ತಲಲ್ಲಿಯೇ ಹಾಯಿ ಎನಿಸುತ್ತದೆ." ಎಂದ ಮೂರ್ತಿ.

ಶೇಷು ದೀಪ ಆರಿಸಿ ಬಂದು ಕುಳಿತ. ಮೂರ್ತಿ ಅವನ ಕೈಯನ್ನು ತನ್ನ ಹೃದಯದ ಮೇಲಿಟ್ಟುಕೊಂಡ.

"ಯಾಕೋ, ಶೇಷು ಈವತ್ತು ಮನಸ್ಸಿಗೆ ಬಹಳ ಬೇಸರವಾಗಿ ಹೋಗಿದೆ. ಹೃದಯದಲ್ಲಿ ಏನೋ ಒಂದು ಕೊರತೆ, ಏಕಾಕಿತನ; ನಿನ್ನ ಕೈಯಿಂದ ಎಷ್ಟೋ ಸಮಾಧಾನವಾಗುತ್ತಿದೆ. ಗಾಳಿಯೆದುರು ಸಾಗಿಹೋಗಲು ಯತ್ನಿಸುವ ಹಕ್ಕಿಯಂತಿದೆ ಹೃದಯ."

ಶೇಷು ಮಾತಾಡಲಿಲ್ಲ; ಮೂರ್ತಿ ಕೊಂಚಕಾಲ ಸುಮ್ಮನಿದ್ದವನು ಮತ್ತೆ ಮಾತು ಮುಂದುವರಿಸಿದ.

"ಹುಂ, ಆಮೇಲೆ ನನ್ನನ್ನು ಕರೆದುಕೊಂಡು ಹೋಗಲು ಗಾಡಿಬಂತು. ನೇರವಾಗಿ ಪೋಲೀಸ್ ಸ್ಟೇಷನ್ನಿಗೆ ಕರೆದೊಯ್ದರು. ಅಲ್ಲಿ ಪ್ರಶ್ನೆಗಳ ಸುರಿಮಳೆ. ನಾನು ಬೆಳಗಾಳದಲ್ಲಿ ಕೆಲಸಕ್ಕಿದ್ದುದು ಹೇಳಿದೆ; ಎಲ್ಲಾ ಬರೆದುಕೊಂಡರು. ರಾತ್ರಿ ಲಾಕಪ್ಪಿನಲ್ಲಿ ಮಲಗಿದ್ದೆ; ಎಲ್ಲಿ ಮತ್ತೆ ಹೊಡೆಯುವರೊ ಎಂದಿದ್ದೆ, ಆದರೆ ಆಗ ಹೊಡೆಯಲಿಲ್ಲ. ಬೆಳಗ್ಗೆ ಕಾನಸ್ಟೇಬಲನ ಜತೆಗೆ ಇನಸ್ಪೆಕ್ಟರ್ ರೂಮಿಗೆ ಹೋದಾಗ ಮೊದಲು ಕಂಡುದು ಯಾರನ್ನ ಗೊತ್ತೇ? ನಗು ಘಗುತ್ತಾ ಕುಳಿತಿದ್ದಳು ಕಮಲಾ! ಅವಳ ಪಕ್ಕದಲ್ಲಿ ದೊರೆಸಾಮಿ! ನನ್ನನ್ನು ಕಂಡೊಡನೆ ಅವಳು ಮೂತಿ ಸೊಟ್ಟಮಾಡಿ ನಕ್ಕಳು. "ನೋಡಿದೆಯಾ ನನ್ನ ಪ್ರತೀಕಾರ" ಎನ್ನುವಂತಿತ್ತು ಅವಳ ನೋಟ. ಇನಸ್ಪೆಕ್ಟರ್ ಇನ್ನೂ ಬಂದಿರಲಿಲ್ಲ. ಕಮಲ ದೊರೆಸಾಮಿ ಸಿಕ್ಕಿದಂತೆಲ್ಲಾ ಹಾಸ್ಯಮಾಡಿ ನಕ್ಕರು. ನಾನು ಉಕ್ಕುತ್ತಿದ್ದ ಕೋಪಕ್ಕೆ ಕಡಿವಾಣ ಹಾಕಿ ಕುಳಿತೆ. ಇನಸ್ಪೆಕ್ಟರ್ ಬಂದೊಡನೆ ಎಲ್ಲರೂ ಒಂದು ಕಾರಿನಲ್ಲಿ ನನ್ನ ರೂಮಿಗೆ ಹೋದೆವು. ನಾನು ಹಾಕಿ ದಂತೆಯೇ ಹಾಕಿತ್ತು ಬೀಗ! ಬೀಗತೆಗೆದು ಒಳಹೊಕ್ಕಮೇಲೆ ದೊರೆಸಾಮಿ ರೂಮನ್ನೆಲ್ಲಾ ಹುಡುಕಿದಂತೆ ಮಾಡಿ ಒಂದಿಷ್ಟು ರಸಾಯನ ಪದಾರ್ಥಗಳನ್ನು ನನ್ನ ಪೆಟ್ಟಿಗೆಯಿಂದ ತೆಗೆದ. ಎಲ್ಲ ಸ್ಫೋಟಕ ದ್ರವ್ಯಗಳೇ; ನನಗೆ ಅರ್ಥವೇ ಆಗಲಿಲ್ಲ, ಇದು ಇಲ್ಲಿಗೆ ಹೇಗೆಬಂತೆಂದು. ಹಿಂದುಗಡೆ ಕಮಲ ನಗುತ್ತಿದ್ದಳು!

ಅಂದೇ ಮಧ್ಯಾಹ್ನ ನನ್ನ ಮೇಲಿನ್ನೊಂದು ಮೊಕದ್ದಮೆ ಹೂಡಿದರು. ಕಾರ್ಖಾನೆಯಿಂದ ಕೆಟ್ಟ ಕಾರ್ಯಕ್ಕಾಗಿ ಸ್ಫೋಟಕದ್ರವ್ಯಗಳನ್ನು ಕದ್ದು ತಂದು ಅದರಿಂದ ನಾಡಬಾಂಬನ್ನು ತಯಾರಿಸಲು ಯತ್ನಿಸಿದ್ದೆ ಎಂದು. ಮುಖ್ಯ ಸಾಕ್ಷಿಗಳು ಯಾರುಗೊತ್ತೇ? ಕಮಲ, ದೊರೆಸಾಮಿ ಮತ್ತು ನಮ್ಮ ಕಾರ್ಖಾನೆಯ ಮ್ಯಾನೇಜರ್! ನಾನು ಅಪರಾಧಿಯೆಂದು ಒಪ್ಪಲಿಲ್ಲ. ಮೊಕದ್ದಮೆ ಮುಂದುವರಿಸಿ ನನ್ನನ್ನು ಲಾಕಪ್ಪಿಗೆ ಕಳಿಸಿದರು. ಅಂದು ರಾತ್ರಿ ತಿರುಗಿ ಆರಂಭ, ಹಿಂಸೆ! ಬೆತ್ತದಿಂದ ಹೊಡೆತ, ಮೆಣಸಿನಕಾಯಿ ಹೊಗೆ ಎಲ್ಲಾ ಆಯಿತು. ರಾತ್ರಿಯೆಲ್ಲಾ ಪೆಟ್ಟು. ಬೆಳಗ್ಗೆ ಗಾಯಗಳಿಗೆಲ್ಲಾ ಔಷಧ, ನಾನು ಅವರು ಹೇಳಿದುದನ್ನು, ಅವರ ಆಪಾದನೆಯನ್ನು ಏನಾದರೂ ಒಪ್ಪಲಿಲ್ಲ. ಮಾರನೆಯ ದಿನ ರಾತ್ರಿ ನನ್ನನ್ನೊಂದು ಸಣ್ಣ ಕತ್ತಲು ಕೋಣೆಯೊಳಕ್ಕೆ ಬಿಟ್ಟುಬಿಟ್ಟರು. ಬಾಗಿಲು ಹಾಕಿಬಿಟ್ಟರು. ನಾನು ಕಾಲಿಟ್ಟುದೇ ತಡ ನೂರು

ಚೇಳು ಒಂದೇಬಾರಿ ಕುಟುಕಿದಂತಾಯಿತು. ಒಂದೇ ಸಮನಾಗಿ ಕಾಲೆಲ್ಲಾ ಕಡಿತ. ನಾನು ಅಲ್ಲಿಲ್ಲ ಕುಣಿದಾಡಿದೆ. ಏನು ಮಾಡಿದರೂ ನೋವು, ಉರಿ ತಗ್ಗಲಿಲ್ಲ. ಸುಮಾರು ೧ ಗಂಟೆಯಕಾಲ ಅಲ್ಲಿಯೇ ಬಿಟ್ಟಿದ್ದರು. ನಾನು ನೋವಿನಿಂದ ಕೂಗಿಕೊಂಡಂತೆ ಹೊರಗಿನಿಂದ ರಾಕ್ಷಸೀ ನಗು ಕೇಳಬರುತ್ತಿತ್ತು. ಬಾಗಿಲು ತೆಗೆದೊಡನೆಯೇ ಹೊರಗೋಡಿದೆ, ಆ ಕೋಣೆಯ ತುಂಬ ಬರಿಯ ಕೆಂಜಿಗಗಳನ್ನು ತುಂಬಿದ್ದರು. ಆದಾದ ಮೇಲೆ ಹಿಂಸೆಗಾರಂಭವಾಯಿತು. ನಾನು ಕೊನೆಗೂ ಜಗ್ಗಲಿಲ್ಲ. ಕೊನೆಗೆ ಇನಸ್ಪೆಕ್ಟರ್ ಮೇಜಿನ ಮುಂದೆ ಕೂತಿದ್ದವನು ಕೋಪದಲ್ಲಿ ಕೈ ಬೀಸಿದ. ಅವನ ಕೈಯಲ್ಲಿದ್ದ ಗಾಜಿನ ಗುಂಡು ಬಂದು ಹಣೆಗೆ ಜೋರಾಗಿ ಬಡಿಯಿತು. ಅಲ್ಲಿ ತೂತಾಯಿತು. ನನಗೆ ತಿಳಿವು ತಪ್ಪಿತು. ಅನಂತರವೇ ನನ್ನನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರು, ಅಲ್ಲಿ ನಾಲ್ಕು ದಿನವಿದ್ದ ಮೇಲೆ ಈವತ್ತು ಇಲ್ಲಿಗೆ ಕರೆತಂದರು."

ಮೂರ್ತಿಗೆ ಬಹಳ ಆಯಾಸವಾಗಿತ್ತು. ಶೇಷು ಸುಮ್ಮನೆ ಕುಳಿತಿದ್ದ ಆವೇಶಬಂದವನಂತೆ.

"ನಾಳೆಯಿಂದ ನಾನೂ ಕೋರ್ಟಿಗೆ ಹೋಗಿಬರಬೇಕು. ಉಳಿದವರೊಂದಿಗೆ, ಮೊಕದ್ದಮೆ ಮುಗಿಯುವವರೆಗೂ" ಅಂದ ಮೂರ್ತಿ.

ಕತ್ತಲಲ್ಲಿ ಶೇಷುವಿನ ಕೈ ಮೆಲ್ಲನೆ ಮೂರ್ತಿಯ ಹಣೆಯ ಬಳಿ ಸರಿಯಿತು. ಗಾಯದ ಮೇಲೆ ಸರಿದಾಗ ಮೂರ್ತಿ ಕೊಂಚ ಮುಸುಗುಟ್ಟಿದ. ಶೇಷುವಿನ ಕೈ ಹಣೆಯ ಮೇಲೆ ನಿಂತಿತು. ಮೂರ್ತಿಗೂ ಕೊಂಚ ಸಮಾಧಾನವಾದಂತಾಯಿತು. ಮೆಲ್ಲನೆ ಕಣ್ಣು ಮುಚ್ಚಿದ ಮೂರ್ತಿ. ತನ್ನ ತಾಯಿಯಿದ್ದಿದ್ದರೆ, ತಾಯಿಯಿದ್ದಿದ್ದರೆ! ಮೂರ್ತಿಯ ಮನಸ್ಸಿಗೆ ತಾಯಿಯ ಚಿತ್ರ ಬಂತು. ತಾಯಿಯೇ ತನ್ನ ಪಕ್ಕದಲ್ಲಿ ಕುಳಿತು ಸಮಾಧಾನಮಾಡುತ್ತಿರುವಳು. ಅವಳ ಅಮೃತಹಸ್ತವೇ ತನ್ನ ಹಣೆಯ ಮೇಲಿರುವುದು ಎನಿಸಿತು.

"ಅಮ್ಮ" ಎಂದ ಮೆಲ್ಲನೆ ಪಿಸುಗುಟ್ಟುವಂತೆ.

ಶೇಷು ಸುಮ್ಮನಿದ್ದ. ಕೇಳಿರಲಿಲ್ಲ ಮೂರ್ತಿಯ ಮಾತು.

"ಅಮ್ಮಾ—"

"ಮೂರ್ತಿ. ನಾನು, ಶೇಷು."

"ಓ, ಶೇಷುವೇ. ಅಮ್ಮನ ನೆನಪಾಯಿತು ಶೇಷು. ನನ್ನ ಈ ಸಂಕಟವನ್ನೆಲ್ಲಾ ಕೇಳಿ ಸಹಿಸುತ್ತಿದ್ದಳೇ ಶೇಷು, ಅಮ್ಮ?"

"ಹೋಗಲಿ ಮೂರ್ತಿ. ತಾಯಿಯ ಮಮತೆ ತಿಳಿಯುವ ಭಾಗ್ಯ ನಮ್ಮಿಬ್ಬರಿಗೂ ಇಲ್ಲ!"

ಹೊರಗೆ ಗುಡುಗಿನ ಶಬ್ದವಾಯಿತು. ಗಾಳಿ ಸುಯ್ಯನೆ ಬೀಸಿತು.

"ಮೂರ್ತಿ, ಮಳೆ ಬರುವಂತಿದೆ; ಬೆಚ್ಚಗೆ ಹೊದ್ದುಕೊ. ನಾನೂ ಇಲ್ಲೇ ಮಲಗುತ್ತೇನೆ. ನಿನ್ನಿಂದ ದೂರವಾಗಿರಲು ಮನಸ್ಸೇ ಆಗುವುದಿಲ್ಲ, ಮೂರ್ತಿ. ಈ ಹತ್ತು ದಿನ ಹೇಗೆ ಕಳೆದೆನೋ."

"ಬಹಳ ತೆಗೆದುಹೋಗಿದೆ, ಶೇಷು ನಾಳೆಯಾದರೂ ನಿನ್ನ ಗಡ್ಡ ಬೋಳಿಸು ಕೊಂಚ ಗೆಲುವು ಮುಖ ಮಾಡಿಕೊ, ಎಷ್ಟಿದ್ದರೂ ಕಷ್ಟವನ್ನೆದುರಿಸುವ ಕೆಚ್ಚಿನಲ್ಲಿಯೇ ನಮ್ಮ ಬಾಳಿನ ಎಲ್ಲವೂ. ನಮಗೆ ಬೇರೆ ಯಾವ ಆನಂದ, ಸುಖವೂ ಇಲ್ಲ."

ಮೂರ್ತಿ ಪಿಸುಮಾತಾಡುತ್ತಿದ್ದವನು ನಿಲ್ಲಿಸಿದ. ಶೇಷುವಿನ ಕೈ ಅವನೆದೆಯ ಮೇಲೆ ಇನ್ನೂ ಇತ್ತು. ಕೊಂಚಕಾಲ ಮೂರ್ತಿಯ ಹಾಸಿಗೆಯ ಮೇಲೆ ಹಾಗೆಯೇ ಕುಳಿತಿದ್ದ ಶೇಷು. ಹೊರಗೆ ಗುಡುಗಿನ ಶಬ್ದ ಬಿರುಸಾಯಿತು. ಇದ್ದಕ್ಕಿದ್ದಂತೆ ಮಿಂಚುಮಿಂಚಿತು. ಶೇಷು, ಮೂರ್ತಿ ಇಬ್ಬರ ನೆರಳೂ ಆಸ್ಪತ್ರೆಯಲ್ಲಿ ಒಮ್ಮೆಗೇ ಮಿಂಚಿ ಮಾಯವಾದುವು ಎರಡು ಪ್ರೇಮಿ ಹೃದಯಗಳು ಒಂದನ್ನೊಂದು ಸಂತೈಸುವ ಚಿತ್ರದಂತಿತ್ತು ಆ ನೆರಳು! ಹೊರಗೆ ಮಳೆ ಹೊಯ್ಯಲಾರಂಭವಾಯಿತು ಮೊದಲು ಸಣ್ಣ ಹನಿಯಿದ್ದುದು ಬರುತ್ತಾ ಬರುತ್ತಾ ವಿಪರೀತ ಜೋರಾಯಿತು. ಮೂರ್ತಿ, ಶೇಷು ಇಬ್ಬರೂ ಅಲುಗಾಡಲಿಲ್ಲ. ಮಳೆಯ ಹೊಡೆತದ ಸದ್ದನ್ನು ಭೇದಿಸಿಕೊಂಡು ದೂರದ ಚರ್ಚಿನ ಗಂಟೆಯ ಸದ್ದು ಮುಸುಕುಮುಸುಕಾಗಿ ಬಂದು ಅವರಿಬ್ಬರ ಕಿವಿಗೂ ಮಾಧುರ್ಯ ತುಂಬಿತು.

೧೩

ಮೂರ್ತಿ ಮೊಕದ್ದಮೆಗಾಗಿ ಕೋರ್ಟಿಗೆ ಹೋಗಿದ್ದ. ಶೇಷು ಅವನನ್ನು ಕಳುಹಿಸಿ ಒಂದು ಪುಸ್ತಕವನ್ನು ಕೈಯಲ್ಲಿ ಹಿಡಿದು ನಿತ್ಯದಂತೆಯೇ ತೋಟದ

ಮಾವಿನ ಮರದಡಿಗೆ ಹೋದ. ಅಲ್ಲಿಯೇ ಕುಳಿತು ಪುಸ್ತಕವನ್ನೋದಿದ. ಅದೊಂದು ನಾಟಕ. ಬಾಳಿನಲ್ಲಿ ಬಹಳ ನೊಂದವನೊಬ್ಬ ಈ ಕಷ್ಟದಿಂದ ದೂರವಾಗಲೆಳಸಿ ಕಾಡಿಗೋಡಿ ಹೋಗುತ್ತಾನೆ. ಕಾಡಿನಲ್ಲಿ ಏಕಾಕಿತನವೂ ಬಹು ಕಷ್ಟವಾಗುತ್ತದೆ. ಆ ಏಕಾಕಿತನದ ಭಾರ ಹೊರಲಾಗದೆ ನೊಂದು ಮತ್ತೆ ಊರಿಗೇ ಹಿಂದಿರುಗುತ್ತಾನೆ. ದಾರಿಯಲ್ಲೊಬ್ಬ ಸನ್ಯಾಸಿ ಸಿಗುತ್ತಾನೆ. ಸನ್ಯಾಸಿಯಲ್ಲಿ ತನ್ನ ಗೋಳನ್ನು ತೋಡಿಕೊಂಡಾಗ ಸನ್ಯಾಸಿ ನಕ್ಕು ಅವನಿಗೆ ಉಪದೇಶ ಮಾಡುತ್ತಾನೆ. ಬಾಳಿನ ಕಷ್ಟಗಳಿಗೆ ಹೆದರಿ ಓಡಿಹೋದರೇನೂ ಪ್ರಯೋಜನವಿಲ್ಲ. ಅದು ಬರಿಯ ಹೇಡಿತನ ಅಷ್ಟೇ! ಕಷ್ಟ ಸಹಿಸದ ಬಾಳು ಬಾಳೇ ಅಲ್ಲ. ನೋವಿನ ಅನುಭವವಿಲ್ಲದ ಜೀವ ಜೀವಂತವಾಗಿಯೇ ಇಲ್ಲ, ಅದನ್ನೆಲ್ಲ ಅನುಭವಿಸಿ ಅದರಾಳಕ್ಕೆ ಮುಳುಗಿ ಅರಿವನ್ನು ಪಡೆಯುವುದೇ ಜೀವಿಯ ಲಕ್ಷಣ. ಅದೇ ಸಾಕ್ಷಾತ್ಕಾರ! ಸಾಗರದ ಬೆಟ್ಟದಲೆಗಳನ್ನು ಕಂಡು ಬೆದರಿ ದಡದ ಮೇಲೆಯೇ ಕುಳಿತರೇ ಸಾಲದು. ಧುಮ್ಮಿಕ್ಕ ಬೇಕು, ಧೈರ್ಯದಿಂದ ಕಷ್ಟದ ಪ್ರವಾಹದೆದುರು ಹೋರಾಡಬೇಕು, ಈಜಬೇಕು! ಅವನ ಈ ಬೋಧನೆ ಕೇಳಿದವನು ಊರಿಗೆ ಹಿಂದಿರುಗಿ ತನ್ನ ಬಾಳನ್ನು ಹದಗೊಳಿಸಲೆತ್ನಿಸುತ್ತಾನೆ. ಆ ನಾಟಕದಲ್ಲೆಲ್ಲಾ ಒಂದು ವಾಕ್ಯ ಶೇಷುವಿನ ಹೃದಯ ನಾಟಿತು. ಅದೂ ಸಂನ್ಯಾಸಿಯ ಮಾತು. "ತರಗೆಲೆ ಬರಿ ಗಾಳಿಯಲ್ಲೂ ಹಾರಿ ಕೆಳಗುರುಳುತ್ತೆ, ಆದರೆ ಬಿರುಗಾಳಿಯಾದರೂ ಮರದ ರೆಂಬೆ ತಡೆಯುತ್ತದೆ. ಪ್ರವಾಹದೊಂದಿಗೆ ಹೋಗಲು ಸತ್ತ ಕತ್ತೆಗೂ ಸಾಧ್ಯ, ಆದರೆ ಪ್ರವಾಹದ ವಿರುದ್ಧ ಹೋರಾಡಲು ಸಬಲ ಮನಸ್ಸಿನ ಮಾನವನಿಂದ ಮಾತ್ರ ಸಾಧ್ಯ!"

ಶೇಷು ಪುಸ್ತಕ ಮುಚ್ಚಿ ಹಾಗೆಯೇ ಯೋಚಿಸಲಾರಂಭಿಸಿದ, ಮೂರ್ತಿಯ ಬಾಳು ಬಿರುಗಾಳಿಯ ಸೆರಗಿನಲ್ಲಿ ಒಂದು ಮರಳು ಕಣದಂತಾಗಿತ್ತು. ಮೂರ್ತಿಯ ಬಾಳು!—ಅವನ ಬಾಳಿನ ಪಯಣದ ಹಾದಿಯಲ್ಲಿ ಅವನಿಗಾದ ನೂರು ಅನುಭವ, ಅವುಗಳೆಲ್ಲ ಕೊನೆಗೆ ಅವನನ್ನು ಕರೆದೊಯ್ದು ತಂದು ಬಿಟ್ಟ ಆದರ್ಶವಾದ, ಹಾಗೆಯೇ ಶಂಕರುವಿನ ನೆನಪಾಯಿತು. ಶಂಕರು ಹೇಗಿರಬಹುದೆಂದು ಕಲ್ಪಿಸಿಕೊಳ್ಳಲಾರಂಭಿಸಿದ. ಹೃಷ್ಟ ಪುಷ್ಟ ಆಳಿದ್ದೇ ತೀರಬೇಕು, ಸೊಗಸಾದ ಶರೀರ, ಕಳೆಯಿಂದ ಬೆಳಗುವ ಮುಖ, ಉದ್ದನೆಯ ಆಕೃತಿ, ನೋಡಿದೊಡನೆಯೇ ಸೆಳೆಯುವ ಮಿಂಚುಮಾನವನಿರಬೇಕು ಶಂಕರು ಎನಿಸಿತು.

"ಶೇಷಗಿರಿ, ಶೇಷಗಿರಿ!"

"ಓ!" ಶೇಷುವಿನ ಕಲ್ಪನೆಯ ಕನಸೊಡೆಯಿತು. ಪಕ್ಕದಲ್ಲಿ ತನ್ನ ಕೋಣೆಯ ಗೆಳೆಯ ನಿಂತಿದ್ದ.

"ಮಧ್ಯಾಹ್ನದ ತಿಂಡಿಗೆ ಹೊತ್ತಾಯಿತು ಬನ್ನಿ, ಆಗಲೇ ಗಂಟೆ ಹೊಡೆಯಿತು"

ಶೇಷು ಎದ್ದು ನಿಂತ. ಮೂರ್ತಿಗೆ ಮಧ್ಯಾಹ್ನದ ತಿಂಡಿ ಸಿಗುತ್ತದೆಯೋ ಇಲ್ಲವೋ ಎಂದು ಕೊಂಚ ಹಿಂದೆಗೆಯಿತು ಅವನ ಮನಸ್ಸು. ಹಾಗೂ ಹೀಗೂ ತೂರಾಡಿತು. ಕೊನೆಗೆ ತಾನು ತಿಂಡಿ ತಿನ್ನಲು ಬರುವುದಿಲ್ಲವೆಂದು ಗೆಳೆಯನಿಗೆ ಹೇಳಿ ಕೊಠಡಿಯ ಕಡೆಗೆ ಹೊರಟ.

ರೂಮಿನ ಬಾಗಿಲಲ್ಲಿ ಜೈಲರ್, ಒಬ್ಬ ಕಾನಸ್ಟೇಬಲ್ ನಿಂತಿರುವುದು ಕಾಣಿಸಿತು. ಶೇಷುವಿನ ಕಡೆಗೆ ಬೆನ್ನು ಮಾಡಿಕೊಂಡು ಯಾರೋ ಕುಳ್ಳ ವ್ಯಕ್ತಿ ಬಿಳಿಯ ಖಾದಿಯ ಜುಬ್ಬ ತೊಟ್ಟು ನಿಂತಿದ್ದ. ಜೈಲರ್ ಶೇಷುವನ್ನು ಕಂಡೊಡನೆ ಕೂಗಿದ.

"ಶೇಷಗಿರಿ, ಇವರು ಹೊಸದಾಗಿ ಬಂದಿದಾರೆ, ನಿಮ್ಮ ರೂಮಿನಲ್ಲಿ ಇವರಿಗೆ ಜಾಗ ಕೊಡಿ" ಎಂದು ಹೇಳಿ ಜೈಲರ್ ಹೊರಟು ಹೋದ.

ಕುಳ್ಳ ವ್ಯಕ್ತಿ ಶೇಷುವಿನ ಕಡೆ ತಿರುಗಿದ. ಅಂತಹ ಕಂಡೊಡನೆ ಮುಗ್ಧಗೊಳಿಸುವ ಮೂರ್ತಿಯಲ್ಲ, ಮುಖ ಕೊಳಕಾಗಿತ್ತು. ಹಣೆಯಲ್ಲಿ ಆಗಲೇ ಒಂದೆರಡು ಗೆರೆ ಮೂಡಿತ್ತು. ಆದರೆ ಶೇಷುವಿಗೆ ಮೊಟ್ಟಮೊದಲರಿವಾದುದು ಆ ಕಾಂತಿಯ ಕಣ್ಣುಗಳು, ಆ ಅರೆನೀಲ ಕಣ್ಣಿನಲ್ಲಿ ಒಂದುಬಗೆಯ ನೋವಿನ ನೆರಳು, ಅದರೊಂದಿಗೇ ಒಂದು ರೀತಿಯ ಆದರ, ಸೌಹಾರ್ದ, ಪ್ರೇಮ ಸೂಸುತ್ತಿತ್ತು. ಆ ಕಣ್ಣಿನ ಬೆಳಕಿನಲ್ಲಿ ಆ ನೋಟದಲ್ಲಿ ಒಂದು ಅನಿರ್ವಚನೀಯ ಸೆಳೆತ ಆತ್ಮೀಯತೆ ತೋರಿ ಶೇಷುವನ್ನು ಅವನ ಬಳಿಗೆಳೆಯಿತು. ಆ ವ್ಯಕ್ತಿಗೆ ಮಾರುಹೋದ ಶೇಷು! ಮಾತನಾಡದೆ ರೂಮಿನ ಬಾಗಿಲು ತೆರೆದು ಒಳಹೊಕ್ಕ. ವ್ಯಕ್ತಿ ಕೂಡ ಶೇಷುವಿನೊಂದಿಗೆ ಅವನ ಹಿಂದೆಯೇ ರೂಮಿನೊಳಕ್ಕೆ ಬಂದ. ಶೇಷುವಿನ ಚಾಪೆಯ ಪಕ್ಕದಲ್ಲಿಯೇ ಮೂರ್ತಿಯದು. ಮೂರ್ತಿಯ ಪಕ್ಕದ ಜಾಗ ಖಾಲಿಯಾಗಿತ್ತು. ಅದೇ ದಿನ ಬೆಳಗ್ಗೆ ಅಲ್ಲಿದ್ದ ಹುಡುಗ ಕ್ಷಮಾಪಣೆ ಕೇಳಿಕೊಂಡು ಹೊರಟು ಹೋಗಿದ್ದ. ವ್ಯಕ್ತಿಗೆ ಆ

ಜಾಗ ತೋರಿದ ಶೇಷು. ವ್ಯಕ್ತಿ ತನ್ನ ಕೈಯಲ್ಲಿದ್ದ ಚೀಲವನ್ನು ಆ ಜಾಗದಲ್ಲಿಸೆದು ಸುಮ್ಮನೆ ಕುಳಿತ್ತಿದ್ದ. ಶೇಷು ಅವನ ಕಡೆಗೆ ದಿಟ್ಟಿಸುತ್ತಿದ್ದವನು ಆಗ ತಿಂಡಿಯ ಸಮಯ ಎಂಬುದನ್ನು ನೆನೆದು ಅವನನ್ನು ಕರೆದ.

"ತಿಂಡಿ ತಿಂದು ಬರೋಣ ಬನ್ನಿ."

ವ್ಯಕ್ತಿ ಮಾತನಾಡದೆ ತಲೆಯೆತ್ತಿ ಶೇಷುವಿನ ಕಡೆಗೊಮ್ಮೆ ನೋಡಿದ, ಮತ್ತೆ ನಸುನಕ್ಕು ತಲೆ ತಗ್ಗಿಸಿದ. ಅದೇನು ಯೋಚನೆಯೋ ಏನೋ. ಶೇಷು ಮತ್ತೆ ಕೂಗಿದೊಡನೆ ನಗುತ್ತಾ ಎದ್ದುನಿಂತು "ನಡೆಯಿರಿ" ಎಂದು ಶೇಷುವಿನ ಜತೆಗೆ ಬಂದ. ಆವನ ಕಂಠದಲ್ಲಿ ಒಂದು ಮಾಧುರ್ಯವಿತ್ತು. ಆ ನಗೆಯಲ್ಲಿ ಒಂದು ಮೋಹಕ ಸೆಳವಿತ್ತು!

*   *   *

ಮೂರ್ತಿ ಕೋರ್ಟಿನಿಂದ ಹಿಂದಿರುಗಿ ಬಂದವನೇ ನೇರ ಕೊಠಡಿಯೊಳಕ್ಕೆ ಬಂದ. ಶೇಷು ಮೂರ್ತಿಯ ನೆರಳು ಹೊಸಲ ಮೇಲೆ ಬಿದ್ದೊಡನೆ ಎದ್ದುನಿಂತ.

"ಏನಾಯಿತು ಮೂರ್ತಿ?"

"ಏನಾಗುತ್ತೆ. ಮುಂದಿನ ಬುಧವಾರಕ್ಕೆ ಹಾಕಿದಾರೆ."

ಮೂರ್ತಿ ತನ್ನ ಚಾಪೆಯ ಮೇಲೆ ಕುಳಿತ. ಶೇಷು ಸುಮ್ಮನೆ ಕುಳಿತಿದ್ದ.

"ಯಾಕೋ ಸಪ್ಪಗಿದ್ದೀ? ಮಧ್ಯಾಹ್ನ ತಿಂಡಿ ತಿನ್ನಲಿಲ್ಲವೇನೋ ಶೇಷು?'

ಶೇಷು ತಲೆಯೆತ್ತಿ ಒಣನಗೆ ನಕ್ಕು ತಲೆಯಲ್ಲಾಡಿಸಿದ.

"ಆದ್ಯಾಕೋ ತಿಂಡಿ ತಿನ್ನಲಿಲ್ಲ?"

"ನಿಜ ಹೇಳಲಾ ಮೂರ್ತಿ. ನಿನಗೆ ಅಲ್ಲಿ ತಿಂಡಿಯಿದೆಯೋ ಇಲ್ಲವೋ ಅಂತ."

"ಅಯ್ಯೋ ಹುಚ್ಚು ಹುಡುಗ! ನಮಗೆ ೪ ಗಂಟೆಗೆ ಸರಿಯಾಗಿ ತಿಂಡಿ ಕಾಫಿಯಾಗಿ ಹೋಗುತ್ತೆ ಕಣೋ. ಒಳ್ಳೆಯ ಆಸಾಮಿ ಕಣೋ! ಶೇಷು."

ಇಬ್ಬರೂ ಜತೆಗೂಡಿ ನಕ್ಕರು.

"ಹಾಂ, ಮೂರ್ತಿ. ನಿನಗೆ ಹೇಳುವುದು ಮರೆತೇಹೋಯಿತು. ನಮ್ಮ ಜತೆಗಾರ ಪ್ರಾಣಿ ಇದ್ದನಲ್ಲಾ ಆ ಪಿ.ಗುಂ. ಅವನು ಕ್ಷಮೆ ಬೇಡಿ ಹೋಗಿಬಿಟ್ಟ

ಬೆಳಗ್ಗೆ. ಅವನ ಜಾಗಕ್ಕೊಂದು ಹೊಸ ವ್ಯಕ್ತಿ ಬಂದಿದೆ. ವಿಚಿತ್ರವ್ಯಕ್ತಿ, ಮೂರ್ತಿ, ಅದು! ಗಿಡ್ಡಗಿದ್ದಾನೆ. ಆದರೆ ಅದೇನು ಪ್ರಖರ ಕಣ್ಣು ಅನ್ನುತ್ತೀ. ನನಗೆ ಆ ಕಣ್ಣಿನ ಹೊಳಪು ಕಂಡು ಆಶ್ಚರ್ಯವಾಯಿತು."

"ಈಗೆಲ್ಲಿ ಆತ?"

"ತೋಟದಲ್ಲಿರಬೇಕು. ನನ್ನ ಮಾವಿನ ಮರದ ನೆರಳು ಈಗ ಅವನ ಪಾಲು."

"ನಡಿ ಹೋಗೋಣ"

"ಸರಿ. ಅವನೇ ಬರ್ತಾನೆಕಣೊ. ನಾವು ಯಾಕೋ ಹೋಗಬೇಕು?"

"ಈಗಿಲ್ಲಿ ಏನುಮಾಡಬೇಕೋ ಶೇಷು? ಹಾಗೆಯೇ ತೋಟಕ್ಕೆ ಹೋದ ಹಾಗೂ ಆಗುತ್ತೆ. ಆತನನ್ನು ಕಂಡ ಹಾಗೂ ಆಗುತ್ತೆ."

ಇಬ್ಬರೂ ಅದು ಇದು ಮಾತನಾಡುತ್ತಾ ತೋಟಕ್ಕೆ ಹೋದರು. ಮೂರ್ತಿಗೆ ವ್ಯಕ್ತಿಯ ಬೆನ್ನುಮಾತ್ರ ಕಾಣುತ್ತಿತ್ತು. ಮೂರ್ತಿಗೆ ಆಗಲೇ ಅನುಮಾನ. ಎಲ್ಲಿಯೋ ತನಗೆ ಪರಿಚಿತವಾದಂತಿತ್ತು ಆ ಆಕೃತಿ. ಹತ್ತಿರ ನಡೆದಂತೆ ಅವನ ಅನುಮಾನವೇ ಸ್ಥಿರವಾಯಿತು. ತಟ್ಟನೆ ನಿಂತುಬಿಟ್ಟ. ಬಾಯಿಂದ ಮಾತೇ ಹೊರಡದು. ಹಾಗೂ ಹೀಗೂ ಕಷ್ಟದಿಂದ "ಶಂಕರೂ" ಎಂದ.

ವ್ಯಕ್ತಿ ತಟ್ಟನೆ ಹಿಂತುರಿಗಿದ. ಮೂರ್ತಿಯನ್ನು ಕಂಡೊಡನೆಯೇ ಕಣ್ಣಿನಲ್ಲಿ ಒಂದು ಹೊಸ ಬೆಳಕು ಮೂಡಿತು. ನಗುತ್ತಾ ಎದ್ದುನಿಂತು ಮೂರ್ತಿಯ ಬಳಿ ಬಂದ. ಮೂರ್ತಿ ಅವನನ್ನು ತಬ್ಬಿಕೊಂಡ. ಶೇಷು ಅವರಿಬ್ಬರನ್ನೂ ತಬ್ಬಿಬ್ಬಾಗಿ ನೋಡುತ್ತಿದ್ದ. ಇದೇ ವ್ಯಕ್ತಿಯೇ ಶಂಕರು. ಮೂರ್ತಿಯ ಜೀವನಕ್ಕೊಂದು ಧ್ಯೇಯಕೊಟ್ಟು, ಆದರ್ಶದ ಹಾದಿ ತೋರಿದ ಶಂಕರು ಈತನೇ. ಶೇಷುವಿಗೆ ನಾಚಿಕೆಯಾಯಿತು. ತಾನು ಶಂಕರುವನ್ನು ಏನೇನೋ ಅಂದುಬಿಟ್ಟೆ. ವಿಚಿತ್ರ ವ್ಯಕ್ತಿಯೆಂದು ತಿಳಿದುಬಿಟ್ಟೆನಲ್ಲಾ ಎಂದು ತಲೆ ತಗ್ಗಿಸಿದ.

ಮೂರ್ತಿಗಾಗಲಿ, ಶಂಕರುಗಾಗಲಿ ಮಾತೇ ಹೊರಡದು. ಬಹಳ ದಿನಗಳಾಗಿ ಹೋಗಿತ್ತು ಒಬ್ಬರನ್ನೊಬ್ಬರು ಬಿಟ್ಟು. ಶೇಷು ತಲೆಯೆತ್ತಿ ನೋಡಿದ. ಮಾವಿನ ಮರದ ಮೇಲೆ ಎರಡು ಗಿಳಿಗಳು ಕುಳಿತು ಕೊಕ್ಕಿಗೆ ಕೊಕ್ಕಿಟ್ಟು

ಪಿಸುಗುಟ್ಟುತ್ತಿದ್ದುವು, ಅವು ಕುಳಿತಿದ್ದ ಪುಟ್ಟ ಕೊಂಬೆ ಗಾಳಿಯಲ್ಲಿ ಉಯ್ಯಾಲೆಯಾಡುತ್ತಿತ್ತು. ಸೂರ್ಯನ ಕಿರಣ ಅವುಗಳ ಮೇಲೆ ಬಿದ್ದು ಅವುಗಳನ್ನು ಹೊಳೆಸುತ್ತಿತ್ತು. ಮರದೆಲೆಗಳು ಸುಯ್ಯೆನ್ನುತ್ತಿದ್ದುವು. ಶೇಷುವಿನ ಹೃದಯವೂ ಅರಳಿತು. ಮೂರ್ತಿ ಬಂದು ಅವನ ಬೆನ್ನಮೇಲೆ ಕೈಯಿಟ್ಟು ಶಂಕರುವಿಗೆ ಪರಿಚಯಮಾಡಿಕೊಟ್ಟ. ಮೂವರೂ ಮರದಡಿಯಲ್ಲಿ ಕುಳಿತರು. ಸೂರ್ಯನ ಕಿರಣಗಳು ಮೂವರ ಮೇಲೂ ನಗೆಯ ಬೆಳಕನ್ನು ಚೆಲ್ಲಿದುವು.

ಮೂರ್ತಿ ಕೊಂಚಕೊಂಚವಾಗಿ ತನ್ನ ಬಾಳಿನ ಆಗುಹೋಗುಗಳನ್ನೆಲ್ಲಾ ತಿಳಿಸಿದ. ಹಾಗೆಯೇ ಶೇಷುವಿನ ವಿಷಯವನ್ನೂ ತಿಳಿಸಿದ. ಶಂಕರು ನಗುನಗುತ್ತಾ ಕೇಳುತ್ತಿದ್ದವನು ಕೊನೆಯಲ್ಲಿ—

"ಪರವಾಗಿಲ್ಲ, ನಾವು ಮೂವರೂ ಒಂದೇ ಜಾತಿಗೆ ಸೇರಿದವರೆಂದು ತೋರುತ್ತದೆ; ಅದಕ್ಕೇ ಒಂದೇಕಡೆ ಮತ್ತೆ ಸೇರಿದೆವು" ಎಂದ.

"ಅದು ಸರಿ, ಶಂಕರು; ಹಾಸನದಿಂದ ಹೋದವನು ಇದುವರೆಗೂ ಏನುಮಾಡುತ್ತಿದ್ದೆ?"

"ಅದೊಂದು ದೊಡ್ಡ ಕಥೆ. ಮೂರ್ತಿ, ಈಗ ಬೇಡ; ಆಮೇಲೆ ಯಾವಾಗಲಾದರೂ ಹೇಳ್ತೀನಿ."

"ಯಾಕೆ, ಈಗ ಹೇಳಿದರಾಗದೇನು?"

"ರಾತ್ರಿ ಊಟ ಮುಗಿಸಿದಮೇಲೆ ಹೇಳುತ್ತೇನಪ್ಪ. ಈಗ ಕೊಂಚ ಆಯಾಸವಾಗಿದೆ."

ರಾತ್ರಿ ಯಾವಾಗಾದೀತೋ ಎಂದು ಕಾದಿದ್ದರು ಮೂರ್ತಿ, ಶೇಷು ಇಬ್ಬರೂ. ಶೇಷುವಿಗಂತೂ ವಿಪರೀತ ಕುತೂಹಲ; ಏನು ಹೇಳುವನೋ ಶಂಕರು, ಹೇಗೆ ಕಳೆದನೋ ಆ ಕಾಲವನ್ನೆಲ್ಲಾ ಎಂದು ಕೌತುಕ. ಮೂರ್ತಿಗೂ ಅಷ್ಟೆ. ಬೇಗಬೇಗ ಊಟ ಮುಗಿಸಿಕೊಂಡು ಬಂದರು. ಶಂಕರುವೂ ಅವರೊಂದಿಗೇ ಬಂದು ರೂಮು ಸೇರಿದ. ಮೂರ್ತಿಯ ಜಾಗದಲ್ಲಿ ಅವನಿಗೆ ಜಾಗ ಮಾಡಿಕೊಟ್ಟರು. ಶಂಕರು ತನ್ನ ಕಥೆ ಹೇಳಲಾರಂಭಿಸಿದ.

"ಹಾಸನದಿಂದ ಆ ದಿವಸ ಮಧ್ಯಾಹ್ನವೇ ಹೊರಟುಹೋದೆ. ಕರ್ನಾಟಕದಲ್ಲಿ ಯಾರೂ ವೈಯಕ್ತಿಕ ಸತ್ಯಾಗ್ರಹ ಮಾಡುತ್ತಿರಲಿಲ್ಲವಾದ್ದರಿಂದ ನೇರ ಪೂನಾಕ್ಕೆ ಹೋದೆ. ಅಲ್ಲಿ ನಾನೂ ಬಂಧಿತನಾದೆ; ಸೆರೆಮನೆಯಲ್ಲಿ

ಒಂದು ವರ್ಷಕ್ಕಿಂತ ಕೊಂಚ ಹೆಚ್ಚು ದಿನವೇ ಕಳೆದೆ. ಸೆರೆಮನೆಯಿಂದ ಬಿಡುಗಡೆಯಾಯಿತು ಒಂದು ದಿನ ಸಂಜೆ. ಉಟ್ಟಿದ್ದ ಪಂಚೆ, ತೊಟ್ಟಿದ್ದ ಜುಬ್ಬಾ ಬಿಟ್ಟು ಮತ್ತೇನೂ ಇಲ್ಲ. ನನ್ನವರೆನ್ನುವವರೊಬ್ಬರೂ ಇಲ್ಲ; ನನ್ನದೆಂದು ಕರೆದುಕೊಳ್ಳಲು ಏನೂ ಇಲ್ಲ. ಅಂದಿನ ಊಟಕ್ಕೇನು ಮಾಡುವುದೋ ಅದೂ ತೋಚಲಿಲ್ಲ. ರೈಲಿನಲ್ಲಿ ಹರಿಹರದವರೆಗೂ ಬರಲು ಪಾಸ್ ಇತ್ತು, ಬಿಡುಗಡೆಯಾದಾಗ ಕೊಟ್ಟದ್ದು. ಆದರೆ ಹರಿಹರಕ್ಕೆ ಬಂದ ಮೇಲೇನು ಮಾಡುವುದು? ಸಂಜೆಯೆಲ್ಲ ಸುಮ್ಮನೆ ಯೋಚಿಸುತ್ತಾ ಕುಳಿತಿದ್ದೆ. ರಾತ್ರಿಯೂ ಆಯಿತು. ಊಟವಿಲ್ಲದಿದ್ದರೆ ಚಿಂತೆಯಿಲ್ಲ; ನಿದ್ರೆಯಾದರೂ ಮಾಡೋಣವೆಂದುಕೊಂಡು ಅಲ್ಲಿನ ಒಂದು ಪಾರ್ಕಿನ ಕಡೆಗೆ ನಡೆದೆ. ಅಷ್ಟರಲ್ಲಿ ಅದೇನೊ ಗಲಾಟೆ. ಪೋಲೀಸಿನವರ ಸೀಟಿ, ಎಲ್ಲ ಓಡಲಾರಂಭಿಸಿದರು! ನನಗೆ ಅದೇನೂ ಅರ್ಥವೇ ಆಗಲಿಲ್ಲ. ನಾನೂ ಜನರ ಜತೆಗೇ ಓಡಿದೆ; ಅಲ್ಲಿ ಕಲ್ಲುಗಳು ಹಾರಾಡುತ್ತಿದ್ದುವು. ದೊಣ್ಣೆಗಳು ಒಂದೇ ಸಮನೆ ತಿರುಗುತ್ತಿದ್ದುವು. ಇದೇನೆಂದು ತಿಳಿಯುವುದರಲ್ಲೇ ನನ್ನ ಕತ್ತಿನ ಮೇಲೆ ಮಚ್ಚಿನ ಏಟು ಬಿತ್ತು. ನೋಡು ಇಲ್ಲಿ ಅದರ ಗುರುತು" ಎಂದು ಶಂಕರು ಜುಬ್ಬಾ ಬಿಚ್ಚಿ ಕೊರಳು ತೋರಿಸಿದ. ಭುಜದ ಮೇಲೆ ನಾಲ್ಕಂಗುಲ ಉದ್ದ ದೊಡ್ಡ ಮಚ್ಚೆ ಕಾಣಿಸಿತು.

"ಆಮೇಲೆ?" ಎಂದ ಮೂರ್ತಿ.

"ನಾನು ಅದು ಹೇಗೆ ಉಳಿದುಕೊಂಡೆನೋ ಏನೊ ನನಗೇ ಗೊತ್ತಿಲ್ಲ. ಆಸ್ಪತ್ರೆಗೆ ನನ್ನನ್ನು ಹೊತ್ತುಕೊಂಡು ಹೋದರಂತೆ; ಎರಡು ದಿನ ಎಲ್ಲರೂ ನಾನುಳಿಯುವ ಆಸೆಯನ್ನೇ ಬಿಟ್ಟಿದ್ದರು. ನನಗೆ ಜ್ಞಾನವೇ ಬಂದಿರಲಿಲ್ಲ. ಮೂರನೆಯ ದಿನ ತಿಳಿವು ಬಂದಿತು. ಕಣ್ತೆರೆದರೆ ಆಸ್ಪತ್ರೆ! ಡಾಕ್ಟರ ಮುಖದಲ್ಲಿ ನಿಜವಾಗಿ ಸಂತೋಷ ಮೂಡಿತ್ತು. ಆಮೇಲೆ ಕೇಳಿದೆ, ನಾನಿಲ್ಲಿಗೆ ಹೇಗೆ ಬಂದೆನೆಂದು. ಅದು ಹಿಂದೂ-ಮುಸ್ಲಿಂ ಹೊಡೆದಾಟವಂತೆ, ಯಾವುದೋ ಇಬ್ಬರು ಹುಡುಗರು ಬೀದಿಯಲ್ಲಿ ಹೋಗುತ್ತಿದ್ದರಂತೆ, ಬೀದಿಯ ಪಕ್ಕದಲ್ಲಿ ಇಬ್ಬರು ಹೆಣ್ಣುಮಕ್ಕಳು ಚಾಪಾಟ ಆಡುತ್ತಿದ್ದರಂತೆ, ಹೋಗುತ್ತಿದ್ದ ಈ ಇಬ್ಬರು ಮುಸಲ್ಮಾನ್ ಹುಡುಗರು ಆ ಹುಡುಗಿಯರ ಕಡೆ ನೋಡಿ ಪೋಲಿ ಮಾತಾಡಿದರಂತೆ. ಅದಕ್ಕೆ ಅಲ್ಲಿಯೇ ಜಗಲಿಯ ಮೇಲೆ ನಿಂತಿದ್ದ ಆ ಹುಡುಗಿ

ಯರ ಅಣ್ಣ ಬಂದು ಆ ಹುಡುಗರಿಗೆ ರಕ್ತ ಕಾರುವವರೆಗೂ ಹೊಡೆದನಂತೆ. ಸರಿ, ಆರಂಭವಾಯಿತು ಹೊಡೆದಾಟ. ಅದೆಲ್ಲಿಂದ ಹೇಗೆಬಂದರೊ ಕೂಗಿಕೊಂಡು, ಮುಸಲ್ಮಾನರು ತಂಡತಂಡವಾಗಿ ಬಂದು ಕಂಡಕಂಡವರನ್ನೆಲ್ಲಾ ಹೊಡೆಯಲಾರಂಭಿಸಿದರು. ಹಿಂದುಗಳೂ ಸಿದ್ಧರಾದಂತಿತ್ತು; ಅಂತೂ ಅಸಾಧ್ಯ ಕಾದಾಟ! ಆಗಲೇ ನನಗೆ ಏಟು ಬಿದ್ದುದು; ಈ ದುರಂತದಲ್ಲಿ ಸಾವುನೋವುಗಳೆಷ್ಟಾಯಿತು ಗೊತ್ತೇ? ೧೦೦ ಜನಕ್ಕೂ ಹೆಚ್ಚು ಸತ್ತರು. ಸುಮಾರು ೫೦೦ ಜನ ಗಾಯಗೊಂಡರು. ನನ್ನ ಪಕ್ಕದ ಹಾಸಿಗೆಯಲ್ಲೊಬ್ಬ ಯುವಕ ಏಟು ತಿಂದವನು ಮಲಗಿದ್ದ. ಅವನ ಗೋಳು ಹೇಳತೀರದು. ಕೆಲವೇ ದಿನಗಳ ಹಿಂದೆ ಮದುವೆಯಾಗಿದ್ದ. ಹೆಂಡತಿ ಸ್ಫುರದ್ರೂಪಿ, ಚೆಲುವು ಹೆಂಗಸು. ಈ ಹೊಡೆದಾಟದ ಮಧ್ಯೆ ಮನೆಯೊಳಕ್ಕೆ ನುಗ್ಗಿ ಯಾರೋ ಅವಳನ್ನು ಹಿಡಿಯಲು ಹೋದರಂತೆ, ಅವಳ ಕೂಗು ಕೇಳಿ ಗಂಡ ಓಡಿಬಂದ. ಹಿಡಿಯಲು ಬಂದವನು ಮತ್ತೆ ಯಾರೂ ಅಲ್ಲ, ಪಕ್ಕದ ಮನೆಯ ಗಂಡಸು. ಕಾಮುಕಪ್ರಾಣಿ ಇದೇ ಸಮಯ ನೋಡಿ ತನ್ನ ಕಾಮಪಿಪಾಸೆ ತೀರಿಸಿಕೊಳ್ಳಲು ಅವರ ಮನೆಗೆ ನುಗ್ಗಿದ್ದ. ಗಂಡನನ್ನು ಕಂಡೊಡನೆ ನೆರೆಮನೆಯವನು ತನ್ನ ಕೈಯಲ್ಲಿದ್ದ ದೊಡ್ಡ ಚಾಕುವಿನಿಂದ ಹುಡುಗಿಯನ್ನು ಇರಿದುಬಿಟ್ಟ. ಯುವಕನಿಗೂ ಜೋರಾಗಿ ಪೆಟ್ಟು ಬಿತ್ತು; ಹೆಂಡತಿ ಹೋಗಿಬಿಟ್ಟಳು. ಯುವಕ ಗೊಳೋ ಎಂದು ಅತ್ತು ತನ್ನ ಕಥೆ ಹೇಳಿಕೊಂಡ."

ಹೇಳುತ್ತಾ ಹೇಳುತ್ತಾ ಶಂಕರುವಿನ ಗಂಟಲು ಭಾವದ ಸೆಳೆತದಲ್ಲಿ ಕಟ್ಟಿಕೊಂಡಿತು. ಮೂರ್ತಿಯ ಕಣ್ಣಿನಲ್ಲಿ ನೀರಾಡಿತು. ಶೇಷುವಿಗಂತೂ ಎದೆ ಕಿವುಚಿದಂತಾಗಿತ್ತು. ಕೊಂಚಕಾಲ ನೀರವಮೌನ. ಆ ಮೌನದ ತುಂಬ ಅಶಾಂತಿ! ಯಾರೂ ಮಾತಾಡಲಿಲ್ಲ ಕೊಂಚಕಾಲ. ಆ ಮೌನದ ನೋವು ಸಹಿಸಲಾರದೆ ಮೂರ್ತಿಯೇ ಕೇಳಿದ.

"ಆಮೇಲೇನಾಯಿತು ಶಂಕರು?"

"ಒಂದು ತಿಂಗಳು ಆಸ್ಪತ್ರೆಯಲ್ಲಿದ್ದೆ. ನನಗೂ ಆ ಯುವಕನಿಗೂ ಗೆಳೆತನ ಬೆಳೆಯಿತು. ತನ್ನ ದುಃಖವನ್ನೆಲ್ಲಾ ನನ್ನಲ್ಲಿ ತೋಡಿಕೊಳ್ಳುತ್ತಿದ್ದ. ನಾನು ಸಾಧ್ಯವಾದಷ್ಟು ಸಮಾಧಾನ ನೀಡುತ್ತಿದ್ದೆ. ಅವನು ಅಲ್ಲಿಯೇ ಒಂದು ಶಾಲೆಯಲ್ಲಿ ಉಪಾಧ್ಯಾಯನಾಗಿದ್ದ. ಆಸ್ಪತ್ರೆಯಿಂದ ಹೋಗುವಾಗ ನನ್ನನ್ನು

ತನ್ನ ಮನೆಗೆ ಬರಬೇಕೆಂದು ಕೇಳಿಕೊಂಡ. ಅದು ಹೇಗೋ ಏನೋ ನನ್ನಲ್ಲಿ ಅವನಿಗೆ ಅಪಾರ ವಿಶ್ವಾಸ ಹುಟ್ಟಿತು. ನನ್ನನ್ನು ಕಾಣಲು ದಿನವೂ ಸಂಜೆ ಆಸ್ಪತ್ರೆಗೆ ಬರುತ್ತಿದ್ದ. ಹಣ್ಣು ಹಂಪಲು ತಂದುಕೊಡುತ್ತಿದ್ದ. ಆಸ್ಪತ್ರೆಯಿಂದ ಹೊರಗೆ ಬಂದ ದಿನ ತಾನೇ ಗಾಡಿಮಾಡಿ ಮನೆಗೆ ಕರೆದುಕೊಂಡು ಹೋದ. ನನಗೆ ಆ ಮನೆಯಲ್ಲಿ ಕಾಲಿಡಲು ಬಹಳ ಸಂಕೋಚವಾಯಿತು. ಪಾಪ! ಇನ್ನೂ ಕೆಲವು ದಿನಗಳ ಹಿಂದೆ ಹೆಂಡತಿಯನ್ನು ಕಳೆದುಕೊಂಡವನು ಅವನು. ಅವನ ಮನೆಗೆ ಹೇಗೆ ಹೋಗುವುದೆನಿಸಿತು. ಆದರೆ ಬರುವುದಿಲ್ಲವೆನ್ನಲೂ ಸಾಧ್ಯವಿಲ್ಲ. ಕೊನೆಗೆ ಅವನಿಚ್ಛೆಯಂತೆಯೇ ಅಲ್ಲಿಗೆ ಹೋದೆ. ಏನು ಅಚ್ಚು ಕಟ್ಟಾಗಿತ್ತು ಮನೆ ಅನ್ನುತ್ತೀಯೆ! ಎಲ್ಲಾ ತೋರಿಸಿದ. ಹೆಂಡತಿ ಬಹಳ ಜಾಣೆಯಾಗಿದ್ದಿರಬೇಕು. ಅವಳೇ ಹಾಕಿದ ಎಷ್ಟೋ ಕಸೂತಿಗಳನ್ನು ತೋರಿಸಿದ. ಕೊನೆಗೆ ಅವಳು ಸತ್ತ ಕೋಣೆಗೆ ಹೋದಾಗ ದುಃಖ ತಡೆಯಲಾರದೆ ನನ್ನನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅಳಲಾರಂಭಿಸಿದ. ಆ ಕೋಣೆಯಲ್ಲಿ ಅವಳದೊಂದು ಭಾವಚಿತ್ರ ತೂಗುಹಾಕಿತ್ತು. ಅದಕ್ಕೆ ಏನೇನೋ ಅಲಂಕಾರ ಮಾಡಿದ್ದ. ಆ ಕೋಣೆ ಅವನಿಗೆ ಪವಿತ್ರ. ಅವರಿಬ್ಬರ ಮಂಚದ ಮೇಲೆ ಒಂದು ಹೂಮಾಲೆ ಹಾಕಿದ್ದ ಅವಳ ನೆನಪಿಗೆ. ಅವಳು ಸತ್ತ ಜಾಗದಲ್ಲಿ ಒಂದು ಬೆಳಕು. ಅದೆಂದಿಗೂ ಆರಕೂಡದೆಂದು ಅವನಿಚ್ಛೆ. ಅವಳು ತನ್ನ ಹೃದಯದಲ್ಲಿ ಯಾವಾಗಲೂ ಜ್ಯೋತಿರ್ಮಯಿಯಾಗಿ ಉಳಿದಿರಬೇಕೆಂದು."

ಮೂರ್ತಿಗೆ ತಕ್ಷಣ ತನ್ನ ಚಿಕ್ಕಪ್ಪನ ನೆನಪಾಯಿತು. ನಾಣಿ ಚಿಕ್ಕಪ್ಪ ಲೋಲುಪ ಜೀವನ ನಡೆಸಿದರೂ ಜೆಸ್ಸಿಯ ನೆನಪನ್ನು ಹಾಗೆಯೇ ಉಳಿಸಿಕೊಂಡಿದ್ದರು. ಈಗ ಏನಾದರೋ?

"ಶಂಕರು, ಶಂಕರು. ನಮ್ಮ ಚಿಕ್ಕಪ್ಪನೂ ಹಾಗೆಯೇ. ಜೆಸ್ಸಿಯ ನೆನಪಿನಲ್ಲಿ, ಅವಳು ಸತ್ತ ದಿನದಂದು ಉಪವಾಸಮಾಡಿ ಸುಮ್ಮನೆ ಅಳುತ್ತಾ ಕುಳಿತಿರುತ್ತಿದ್ದರು."

"ಯಾರು. ನಾಣಿ ಚಿಕ್ಕಪ್ಪನೇ?

"ಹುಂ. ಪೆಟ್ಟಿಗೆಯಲ್ಲಿ ಅವಳದೊಂದು ಪುಟ್ಟ ಚಿತ್ರವನ್ನಿಟ್ಟುಕೊಂಡಿದ್ದರು. ಅದಕ್ಕೊಮ್ಮೆ ಮುತ್ತಿಟ್ಟು ಮತ್ತೆ ಅಳುತ್ತಾ ಕೂತಿರುತ್ತಿದ್ದರು."

"ಹಾಗೆಯೇ ಮೂರ್ತಿ, ಪ್ರೇಮವೆಂಬುದು. ಪ್ರೇಮದ ನಿಜವಾದ ಅರ್ಥ ವಿರುವುದು ತ್ಯಾಗದಲ್ಲಿ. ಪ್ರೇಮಿ ತನಗಾಗಿ ಏನನ್ನೂ ಬಯಸುವುದಿಲ್ಲ; ಆದರೆ ಕಳೆದುಹೋದ ಬಾಳಿಗಾಗಿ ಕೊರಗುತ್ತಾನೆ. ಪ್ರೇಮಕ್ಕೆ ಬೆಲೆಯಿಲ್ಲ, ಕಾಲವಿಲ್ಲ. ಅದು ಅನಂತ, ಅವ್ಯಾಹತ, ಅನವರತ ಸಾಗುವ ಭಾವ; ಜೀವನವೆಲ್ಲವೂ ಪ್ರೇಮ. ಆ ಪ್ರೇಮವುಳ್ಳವನೇ ನಿಜವಾಗಿ ಕ್ರಾಂತಿಕಾರಿ ಯಾಗುವನು; ಕೆಟ್ಟದರ ವಿರುದ್ಧ ಹೋರಾಡುವನು."

ಶಂಕರು ತಟ್ಟನೆ ನಿಲ್ಲಿಸಿದ. ಮೂರ್ತಿ ಗಂಭೀರವಾಗಿ ನಿಟ್ಟುಸಿರುಬಿಟ್ಟ.

"ಮೂರ್ತಿ, ಸರುವಿನ ನೆನಪಾಗುತ್ತಿದೆಯೇನೊ?"

"ಹೌದು ಶಂಕರು; ಅದೇಕೋ ಏನೋ ಸರುವಿನ ನೆನಪು ಆಗಾಗ ಬರುತ್ತಿರುತ್ತದೆ. ಏನೇಮಾಡಿದರೂ ಮರೆಯಲಾಗುವುದಿಲ್ಲ."

"ಮರೆಯಬೇಕಾಗಿಯೂ ಇಲ್ಲ. ಆ ನೆನಪಿರುವುದೇ ಒಳ್ಳೆಯದು."

"ಹೋ, ಅದಿರಲಿ; ಮುಂದೇನಾಯಿತು ಹೇಳು."

"ಶೇಷುವಿಗೆ ನಿದ್ರೆಬಂದಂತಿದೆ. ಪಾಪ!"

"ಇಲ್ಲ ಶಂಕರು. ನಿದ್ರೆಬಂದಿಲ್ಲ, ಕೇಳುತ್ತಿದ್ದೇನೆ. ನನ್ನದಾಗಿ ಹೇಳಿ ಕೊಳ್ಳಲು ಏನೂ ಇಲ್ಲವಾದ್ದರಿಂದ ಸುಮ್ಮನಿದ್ದೇನೆ." ಎಂದ ಶೇಷು.

"ಆಮೇಲೆ ನಾನು ಅಲ್ಲಿಯೇ ಅವನ ಜತೆಗೇ ಕೆಲವು ದಿನವಿದ್ದೆ. ಅವನ ಸಂಪಾದನೆಯ ಮೇಲೆ ನಾನು ಜೀವಿಸುವುದು ನನಗೆ ಒಗ್ಗಲಿಲ್ಲ. ಅದರಿಂದ ನಾನು ಹೊರಡುವೆನೆಂದು ಅವನಿಗೆ ಹೇಳಿದೆ. ಅದೇಕೋ ಏನೋ. ಅವನಿಗೆ ನನ್ನನ್ನು ಬಿಡಲು ಮನಸ್ಸೇ ಆಗಲಿಲ್ಲ. ಕೊನೆಗೆ ಏನೇನೋ ಸಮಾಧಾನ ಹೇಳಿದ. ನಾನು ಯಾವುದಕ್ಕೂ ಒಪ್ಪದಿರಲು ತನ್ನ ಶಾಲೆಯಲ್ಲಿಯೇ ಅಧ್ಯಾ ಪಕನಾಗುವುದಾದರೆ ಅಲ್ಲಿ ಒಂದು ಜಾಗವಿದೆ. ತಾನು ಮಾಡಿಸುವುದಾಗಿ ಹೇಳಿದ. ಕೊನೆಗೆ ನಾನು ಅವನಿಗಾಗಿ ಒಪ್ಪಿದೆ. ಶಾಲೆಯಲ್ಲಿ ಅಧ್ಯಾಪಕನಾದೆ. ನಾನು ಆ ಶಾಲೆಯಲ್ಲಿ ಕಳೆದ ದಿನಗಳನ್ನೆಂದಿಗೂ ಮರೆಯಲಾರೆ, ಮೂರ್ತಿ. ಎಂತಹ ಹುಡುಗರು, ಮುತ್ತಿನಂತಹ ಹುಡುಗರು! ನಿಜ. ಅಲ್ಲಿಯೂ ಒಂದೊಂದು ಖಾಲಿಯ ಚಿಪ್ಪು ಕಾಣುತ್ತಿತ್ತು. ಆದರೂ ಬುದ್ಧಿವಂತ ಹುಡು ಗರು. ನಿಜವಾಗಿ ವಾತ್ಸಲ್ಯ ನೀಡಲು ಸಿದ್ಧರಾಗಿದ್ದರು. ನಾನೂ ನನ್ನ ಗೆಳೆ ಯನ ಮನೆಯಲ್ಲಿಯೇ ಇದ್ದೆ. ನಾವಿಬ್ಬರೂ ಯಾವಾಗಲೂ ಜತೆಯಾಗಿರು

ತ್ತಿದ್ದೆವು. ಬೇಕಾದಷ್ಟು ಪುಸ್ತಕಗಳನ್ನೋದಿದೆ. ಹಿಂದಿಯನ್ನು ಚೆನ್ನಾಗಿ ವ್ಯಾಸಂಗಮಾಡಿದೆ. ಅಖಿಲ ಭಾರತ ಕಾಂಗ್ರೆಸ್ಸಿಗೆ ಸದಸ್ಯನಾದೆ. ಆ ಊರಿನ ಸಮಿತಿಗೆ ನನ್ನನ್ನೂ ಸದಸ್ಯನನ್ನಾಗಿ ಆರಿಸಿದರು.

ಮೊನ್ನೆ ಮೊನ್ನೆ ಕಾಂಗ್ರೆಸ್ ನಾಯಕರ ಬಂಧನವಾದ ಮರುದಿನವೇ ನಾನೂ ನನ್ನ ಗೆಳೆಯನೂ ನಮ್ಮ ಶಾಲೆಯ ಹುಡುಗರಿಗೆ ಎಲ್ಲಾ ತಿಳಿಸಿದೆವು. ಆ ದಿನ ವಿಪರೀತ ಗಲಾಟೆ. ಅಶ್ರುವಾಯುವಿನ ಪ್ರಯೋಗ ಮಾಡಿದರು. ಚಿಕ್ಕಹುಡುಗರ ಮೇಲೆ ಲಾಠಿ ಪ್ರಯೋಗ ನಡೆಸಿದರು. ನನ್ನನೂ ನನ್ನ ಗೆಳೆಯನನ್ನೂ ಬಂಧಿಸಿ ಸೆರೆಮನೆಗೊಯ್ದರು. ಬಂಧನಕ್ಕೆ ಮೊದಲು ಅವ ನನ್ನು ಕಂಡುದೇ ಕೊನೆ. ಆಮೇಲೆ ಅವನನ್ನು ನಾನು ಕಂಡೇ ಇಲ್ಲ. ಬಂಧನ ವಾದ ರಾತ್ರಿಯೇ ನನ್ನನ್ನು ಹುಬ್ಬಳ್ಳಿಯ ಸೆರೆಮನೆಗೆ ವರ್ಗಾಯಿಸಿದರು. ಅಲ್ಲಿಯ ಹಿಂಸೆ ವಿಪರೀತ. ರಾತ್ರಿ ಕೂಡಿ ಬೀಗಹಾಕಿಬಿಡುತ್ತಿದ್ದರು, ಮೂತ್ರಿಗೆ ಹೋಗಲೂ ತೆರೆಯುತ್ತಿರಲಿಲ್ಲ. ಅರ್ಧ ರಾತ್ರಿಯ ವೇಳೆಗೆ ನಮಗೆ ನಿದ್ರೆ ಬಂದಾಗ ಬಂದು ಚಾವಟಿಯಲ್ಲಿ ಬಿಗಿಯುತ್ತಿದ್ದರು. ಕೊಂಚ ಗಲಾಟೆ ಮಾಡಿದೆ ಒಂದು ದಿನ ನಾನು. ಅದಕ್ಕೆ ನನ್ನನ್ನೊಬ್ಬನನ್ನೇ ಬೇರೆ ಒಂದು ಕೋಣೆಗೆ ನೂಕಿ ಬೀಗ ಹಾಕಿಬಿಟ್ಟರು. ಒಂದು ದಿನವೆಲ್ಲಾ ಆ ಕತ್ತಲು ಕೋಣೆಯಲ್ಲಿ ನರಳಿದೆ. ಹಸಿವು ಬೇರೆ; ಬಾಯಾರಿಕೆ ಬೇರೆ! ಎರಡನೆಯ ದಿನ ಒಂದಿಷ್ಟು ಚಕ್ಕಳದಂತಿದ್ದ ರೊಟ್ಟಿ ತಂದಿಟ್ಟು ಹೋದ ಕಾವಲುಗಾರ. ರೊಟ್ಟಿಯ ಜತೆ ಗೇನೂ ಇಲ್ಲ. ಕುಡಿಯಲು ನೀರೂ ಇಲ್ಲ. ಹಸಿವು ವಿಪರೀತವಾಗಿತ್ತು. ಅದನ್ನೇ ಕಷ್ಟದಿಂದ ಕಚ್ಚಿದೆ. ಅದನ್ನು ತಿನ್ನಲಾಗಲೇ ಇಲ್ಲ. ಬರಿಯ ಉಪ್ಪು! ಒಂದಕ್ಕೆ ಹತ್ತರಷ್ಟು ಉಪ್ಪು ಹಾಕಿದ್ದರು. ರೊಟ್ಟಿಯನ್ನು ಹಾಗೆಯೇ ಬಿಸಾ ಡಿದೆ. ಮೂಲೆಯಲ್ಲಿ ಅದು ಬಿದ್ದಕಡೆಯಿಂದ ಧೂಳೆದ್ದಿತು. ಮರುದಿನ ಪ್ರಾತಃಕಾಲ ಮತ್ತೆ ಅಂತಹುದೇ ಇನ್ನೊಂದು ರೊಟ್ಟಿ! ನನಗೆ ಮೂರು ದಿನ ದಿಂದ ಊಟವಿಲ್ಲದೆ ಬಹಳ ಸುಸ್ತಾಗಿತ್ತು. ಏನೇ ಆಗಲಿ ಇದನ್ನೇ ತಿಂದು ಬಿಡೋಣವೆಂದು ಒಂದೆರಡು ಚೂರು ತಿಂದೆ. ಆಮೇಲೆ ನನ್ನಿಂದಾಗಲಿಲ್ಲ. ವಿಪರೀತ ಬಾಯಾರಿಕೆ! ಗಂಟಲೆಲ್ಲಾ ಒಣಗಿಹೋಗಿತ್ತು. ಮೈಯೆಲ್ಲಾ ಉರಿ! "ಬಾಯಾರಿಕೆ, ಬಾಯಾರಿಕೆ! ನೀರು! ನೀರು!" ಎಷ್ಟು ಕೂಗಿದರೂ ಕೇಳು ವವರಿಲ್ಲ. ಹಾಗೆಯೇ ಆ ದಿನವೆಲ್ಲಾ ಬೆಂದುದಾಯಿತು. ಮರುದಿನ ನನ್ನನ್ನು

ಅಲ್ಲಿಂದ ತಂದು ಮೊದಲಿನ ಕೋಣೆಗೇ ಬಿಟ್ಟುಬಿಟ್ಟರು. ಅದಾದ ಎರಡು ದಿನಕ್ಕೇ ಬಿಡುಗಡೆಯಾಯಿತು. ಮೈಸೂರು ಸಂಸ್ಥಾನದವನಾದುದರಿಂದ ಸಂಸ್ಥಾನಕ್ಕೆ ನನ್ನನ್ನು ಗಡೀಪಾರು ಮಾಡಿದ್ದರು. ಹರಿಹರದವರೆಗೂ ನನ್ನನ್ನು ಪೋಲೀಸಿನವರು ಕರೆತಂದರು. ಅಲ್ಲಿಂದ ಸ್ವತಂತ್ರನಾಗಿರಬಹುದೆಂದಿದ್ದೆ. ಆದರೆ ಮೈಸೂರು ಪೋಲೀಸಿನವರು ನಿಲ್ದಾಣದಲ್ಲೇ ಕಾದಿದ್ದು ನನ್ನನ್ನು ಎದುರುಗೊಂಡು ಇಲ್ಲಿಗೆ ಕರೆತಂದರು."

೧೪

ಹುಡುಗರೆಲ್ಲ ಜೈಲರ ಕಛೇರಿಯ ಮುಂದೆ ಗುಂಪು ಕೂಡಿದ್ದರು. ಎಲ್ಲರಿಗೂ ಕಾತರ, ಒಳಗೇನು ಮಾತು ಕತೆಯಾಗುತ್ತದೆಯೋ, ತಮ್ಮ ನಾಯಕರೇನು ಹೇಳುವರೋ, ಸರ್ಕಾರದ ಪರವಾಗಿ ಬಂದ ಅಧಿಕಾರಿಗಳು ಏನು ಷರತ್ತು ಹಾಕುವರೋ ಎಂದು ಎಲ್ಲರಿಗೂ ತವಕ, ಕುತೂಹಲ. ಕೆಲವರಿಗೆ ಸೆರೆಯು ಬೇಸರವಾಗಿ ಎಷ್ಟು ಬೇಗನೆ ಬಿಡುಗಡೆಯಾದರೆ ಅಷ್ಟು ಒಳ್ಳೆಯದೆನಿಸಿತ್ತು. ಮತ್ತೆ ಕೆಲವರಿಗೆ ಹೇಗಾದರೂ ಸರಿ, ಸರ್ಕಾರದೊಡನೆ ಒಪ್ಪಂದಕ್ಕೆ ಬಂದರೆ ಸಾಕೆನಿಸಿತ್ತು. ಅವರಿಗಾಗಲೇ ಹೆದರಿಕೆ! ಹೊರಗೆ ಹುಡುಗರು ಶಾಲಾ ಕಾಲೇಜುಗಳಿಗೆ ಹಿಂತಿರುಗುತ್ತಿದ್ದ ಸುದ್ದಿ ಅವರನ್ನು ಹಿಂಡಿ ಹಿಪ್ಪೆ ಮಾಡುತ್ತಿತ್ತು. ಎಲ್ಲಿಯೋ ಕೆಲವರು ಮಾತ್ರ, ಏನೇ ಆಗಲಿ ಯಾವ ಷರತ್ತೂ ಇಲ್ಲದೆ ಬಿಡುಗಡೆಯಾದರಾಗಲಿ, ಇಲ್ಲದಿದ್ದರೆ ಬೇಡವೆಂದು ಧೈರ್ಯತಾಳಿದ್ದರು.

ಮಾತು ಕತೆಗಳು ಮುಂದುವರಿಯುತ್ತಲೇ ಇದ್ದುವು. ಅದೇನು ಎಷ್ಟು ಹೊತ್ತಾದರೂ ಮುಗಿಯುವಂತಿರಲಿಲ್ಲ. ಅಷ್ಟರಲ್ಲಿ ಕಚೇರಿಯಲ್ಲಿ ಮಾತನಾಡುತ್ತಿದ್ದ ನಾಯಕ ಹೊರಗೆ ಬಂದ. ಹುಡುಗರೆಲ್ಲ 'ಏನು, ಏನು' ಎಂದು ಮುತ್ತಿದರು. ನಾಯಕ ಯಾರನ್ನೋ ಹುಡುಕುವ ಅವಸರದಲ್ಲಿ "ನೀವೆಲ್ಲಾ ಕೋಣೆರಳಿಗೆ ಹಿಂತಿರುಗಿ, ಯಾವುದನ್ನೂ ನಾನು ತಿಳಿಸುತ್ತೇನೆ" ಎಂದ. ದೂರದಲ್ಲಿ ಮೂರ್ತಿ, ಶಂಕರು, ಶೀನು ಹೋಗುತ್ತಿದ್ದುದನ್ನು ನೋಡಿ ಮೂರ್ತಿಯನ್ನು ಕೂಗಿದ.

ಸುಮಾರು ಅರ್ಧ ಗಂಟೆಯ ನಂತರ, ಬಂದ ಅಧಿಕಾರಿ ಪೆಚ್ಚು ಮೋರೆ ಹಾಕಿಕೊಂಡು ಹೊರಗೆ ಹೋದ. ಮೂರ್ತಿಯೂ ನಾಯಕನೂ ಜತೆಯಲ್ಲಿಯೇ

ಹೊರಗೆ ಬಂದು ಮಾತು ಕತೆಗಳು ಮುರಿದು ಬಿದ್ದ ವಿಚಾರವನ್ನು ವಿದ್ಯಾರ್ಥಿಗಳಿಗೆ ತಿಳಿಸಿದರು. ತಮ್ಮ ಮೇಲೆ ಯಾವ ಷರತ್ತೂ ಹಾಕದೆ ಬಿಡುಗಡೆ ಮಾಡಬೇಕೆಂದು ಹುಡುಗರ ವಾದ. ಶಾಲೆ ಕಾಲೇಜುಗಳಿಗೆ ಹಿಂತಿರುಗುವ ಭರವಸೆ ಕೊಡಬೇಕೆಂದು ಅಧಿಕಾರಿಗಳ ಹಟ. ಯಾರೂ ತಮ್ಮ ಹೆಜ್ಜೆ ಹಿಂತೆಗೆಯಲು ಸಿದ್ಧರಾಗಿರಲಿಲ್ಲ. ಅಧಿಕಾರಿ ಪೆಚ್ಚು ಮೋರೆ ಹಾಕಿಕೊಂಡು ಹಿಂತಿರುಗ ಬೇಕಾಯಿತು.

ಬೆಳಗ್ಗೆ ಸುಮಾರು ೮—೮॥ಯ ಸಮಯ. ಹುಡುಗರೆಲ್ಲ ಆಗತಾನೇ ಎದ್ದು ಪ್ರಾರ್ಥನೆ ಮುಗಿಸಿ ತಿಂಡಿಗೆ ಹೊರಟಿದ್ದರು. ಆ ವೇಳೆಗೆ ಸರಿಯಾಗಿ ಸೆರೆಮನೆಯ ಮುಖ್ಯಾಧಿಕಾರಿ ಬಂದು ಎಲ್ಲವನ್ನೂ ನೋಡಿಕೊಂಡು ಊಟದ ಮನೆಯ ಕಡೆ ಬಂದ. ಅಲ್ಲಿದ್ದ ಕೆಲವು ಹುಡುಗರಿಗೆ ಅವನನ್ನು ಕಂಡೊಡನೆ ಕೂಗಬೇಕೆನ್ನಿಸಿತು. ಹಿಂದಿನ ದಿನ ತಾನೇ ಅಧಿಕಾರಿಯೊಬ್ಬ ಬಂದು ಹೋಗಿದ್ದ. ಇಂದು ಇನ್ನೊಬ್ಬ ಬಂದನಲ್ಲಾ ಎಂದು ಹುಡುಗರಿಗೆ ರೇಗಿತ್ತು. ಮೊದಲು ಒಬ್ಬಿಬ್ಬರು ಕೂಗಲು ಅಧಿಕಾರಿ ಗೊಳ್ಳೆಂದು ನಕ್ಕುಬಿಟ್ಟ. ಎಲ್ಲರಿಗೂ ಇದರಿಂದ ಉದ್ರೇಕ ಹೆಚ್ಚಿ ಒಂದೇ ದನಿಯಲ್ಲಿ ಕೂಗಲಾರಂಭಿಸಿದರು. ಅಧಿಕಾರಿ ಕೊಂಚ ಹೊತ್ತು ಸುಮ್ಮನಿದ್ದವನು ಮತ್ತೆ ಬೆತ್ತವನ್ನು ತಿರುಗಿಸುತ್ತಾ ಬಯ್ಯಲಾರಂಭಿಸಿದ. ಹುಡುಗರಿಗೆ ಅದರಿಂದ ಇನ್ನೂ ಉದ್ರೇಕ. ಕೂಗು ಮತ್ತೂ ಜೋರಾಗಲು ಅಧಿಕಾರಿ ಕೋಪದಿಂದ ಮುನ್ನುಗ್ಗಿ ಬಾಗಿಲ ಬಳಿಯೇ ಕುಳಿತಿದ್ದ ಶೇಷುವಿಗೊಂದು ಪೆಟ್ಟು ಬಿಗಿದ, ತನ್ನ ಕೈ ಬೆತ್ತದಿಂದ. ಶೇಷುವಿನ ಪಕ್ಕದಲ್ಲಿಯೇ ಕುಳಿತಿದ್ದ ಮೂರ್ತಿಗೆ ಶೇಷುವಿಗೆ ಪೆಟ್ಟು ಬಿದ್ದುದನ್ನು ತಡೆಯಲಾಗಲಿಲ್ಲ. ಕೈಯಲ್ಲಿದ್ದ ತಟ್ಟೆಯಲ್ಲಿ ಆಗತಾನೇ ಹಾಕಿಸಿಕೊಂಡಿದ್ದ ಬಿಸಿ ಬಿಸಿ ಇಡ್ಲಿಯಿತ್ತು.

ಅಧಿಕಾರಿ ಹಿಂತಿರುಗಿ ಕಛೇರಿಗೆ ಹೋಗುತ್ತಿದ್ದಾಗ ಬೆನ್ನ ಮೇಲೇನೋ ಬಿದ್ದಂತಾಗಿ ಹಿಂತಿರುಗಿದರೆ ಒಂದರ ಮೇಲೊಂದರಂತೆ ಇಡ್ಲಿಗಳು ಬಂದು ಬೀಳಲಾರಂಭಿಸಿದುವು. ಮೈಯೆಲ್ಲಾ ಸಾಂಬಾರಿನಿಂದ ಕೆಟ್ಟಿತು. ಇಂದು ತಾನೇ ಇಸ್ತ್ರಿ ಮಾಡಿದ ಸೂಟು ಹೊಲಸಾಯಿತು. ಮನಸ್ಸಿನಲ್ಲಿಯೇ ಹುಡುಗರನ್ನು ಕೊಲೆ ಮಾಡುತ್ತಾ ಜೋರಾಗಿ ಶಪಿಸುತ್ತಾ ಅಧಿಕಾರಿ ಜೈಲರನ ಕಛೇರಿಗೆ ಹೋದ. ಹುಡುಗರು ಕೂಗುತ್ತಾ ಹಿಂದೆಯೇ ಬಂದರು. ಅವರು ಶಾಂತರಾಗಿ ತಮ್ಮ ಕೋಣೆಗಳಿಗೆ ಹಿಂತಿರುಗುವ ವೇಳೆಗೆ ಕಛೇರಿಯ ಕಿಟಕಿಗಳೆಲ್ಲಾ ಮುರಿದು

ಹೋಗಿದ್ದುವು. ಗಾಜಿನ ಚೂರು, ಊಟದ ತಟ್ಟೆಗಳು, ಮರದ ಬಾಗಿಲುಗಳೆಲ್ಲವೂ ಒಟ್ಟಿಗೇ ಬಿದ್ದಿದ್ದುವು. ಅವುಗಳನ್ನೆಲ್ಲಾ ನೋಡುತ್ತಾ ವಿಕಾರ ನಗೆಯೊಂದಿಗೆ ಅಧಿಕಾರಿ ನಿಂತು ಕಾಲಿಗೆ ಹಾಕಿದ ಬೂಟ್ಸಿನಿಂದ ಆ ಗುಡ್ಡವನ್ನು ಕೆದಕುತ್ತಿದ್ದ. ಜೈಲರ್ ಹಿಂದೆ ಕೈಕಟ್ಟಿ ನಿಂತಿದ್ದ. ಜೈಲರನ ಹಿಂದೆ ಬಾರು ಮಾಡಿದ ಬಂದೂಕ ಹಿಡಿದು ಸೈನಿಕ ನಿಂತಿದ್ದ. ಅಧಿಕಾರಿ ಹೊರಗೆ ಬಂದಂತೆ ಮೇಲೆ ಹಾರಿ ಹೋಗುತ್ತಿದ್ದ ಕಾಗೆಯ ಹೊಲಸು ಅವನ ಮುಖದ ಮೇಲೆ ಬಿತ್ತು.

ಅದಾದ ಮೂರು ದಿನದ ಮಾತು. ಮೂರ್ತಿಯನ್ನೂ ಮತ್ತಿತರ ನಾಯಕರನ್ನೂ ಮೊಕದ್ದಮೆಗಾಗಿ ನ್ಯಾಯಾಲಯಕ್ಕೆ ಕರೆದುಕೊಂಡು ಹೋಗಿದ್ದರು. ಸಾಮಾನ್ಯದಂತೆಯೇ ೧೧ ಗಂಟೆಗೇ ಊಟ ಮುಗಿಸಿ ಅವರು ಪೋಲೀಸ್ ಮೋಟಾರು ಹತ್ತಿ ಕೋರ್ಟಿಗೆ ಹೋಗಿದ್ದರು. ಸಾಮಾನ್ಯವಾಗಿ ಅವರು ಹಿಂತಿರುಗುವ ವೇಳೆಗೆ ಐದು ಗಂಟೆಯಾಗುತ್ತಿತ್ತು. ಐದು ಗಂಟೆಗೆ ಜೈಲಿನ ಹೊರಗೆ ಸಾಮಾನ್ಯವಾಗಿ ಅವರಿಗೆ ಮಧ್ಯಾಹ್ನದ ತಿಂಡಿ ಕಾಫಿ ಆಗುತ್ತಿತ್ತು. ಅಲ್ಲಿಯೇ ಗರಿಕೆಯ ಮೇಲೆ ಒಂದರ್ಧ ಗಂಟೆ ಕುಳಿತು ಮಾತನಾಡಿ ಆಮೇಲೆ ಒಳಗೆ ಬರುವುದು ಅವರ ಪದ್ಧತಿ.

ಮೂರ್ತಿ ಬರಲು ಇನ್ನೂ ಅರ್ಧ ಗಂಟೆಯಿತ್ತು. ಶೇಷುವೂ ಶಂಕರುವೂ ಮಾವಿನ ಮರದ ನೆರಳಿನಲ್ಲಿ ಕುಳಿತು ಹರಟೆ ಕೊಚ್ಚುತ್ತಿದ್ದರು. ಶಂಕರು ತನ್ನ ಧ್ಯೇಯ, ತಾನದಕ್ಕೆ ಕಷ್ಟಪಟ್ಟ ವಿಧಾನ, ಜಗತ್ತೆಲ್ಲ ತನ್ನನ್ನು ಅಪಾರ್ಥ ಮಾಡಿಕೊಂಡು ಹುಚ್ಚನೆಂದು ಭಾವಿಸಿದುದು ಎಲ್ಲವನ್ನೂ ತಿಳಿಸಿದ. ಹಾಗೆಯೇ ತಾನು ಮೂರ್ತಿಯನ್ನು ಕಂಡ ರೀತಿ, ತಮ್ಮಿಬ್ಬರ ಗೆಳೆತನವಾದುದನ್ನೂ ತಿಳಿಸಿದ.

"ಶಂಕರು, ನೀವು ಚೆನ್ನಾಗಿ ಹಾಡುವಿರಂತಲ್ಲ, ಒಂದು ಗೀತ ಹೇಳಿ" ಎಂದ ಶೇಷು.

"ಈಗ ಬೇಡ, ಮತ್ತಾವಾಗಲಾದರೂ ಹೇಳುತ್ತೇನೆ, ಈವತ್ತೇಕೋ ಮನಸ್ಸಿಗೆ ಸಮಾಧಾನವಿಲ್ಲ."

"ಯಾಕೆ ?

"ಏನೋ ಒಂದು ಬಗೆಯ ಬಿರುಗಾಳಿಯೆದ್ದಿದೆ ಹೃದಯದಲ್ಲಿ. ಏನೋ

ಅರಿಯಲಾಗದ ಕಳವಳ, ಅವ್ಯಕ್ತ ನೋವು, ಅಲ್ಲೋಲ ಕಲ್ಲೋಲ! ಏಕೆಂಬುದೇ ಹೇಳಲಾರೆ!"

ಶಂಕರು ಇದ್ದಕ್ಕಿದ್ದಂತೆ ಗಂಭೀರವಾಗಿ ಕುಳಿತು ಬಿಟ್ಟ. ಶೇಷು ಅವನ ಕಡೆಯೇ ನೋಡುತ್ತಿದ್ದ. ಶಂಕರುವಿನ ಕಣ್ಣಿನಲ್ಲಿ ಹಿಂದೆಂದೂ ಕಾಣದ ತೀವ್ರ ಬೆಳಕು ಕಾಣಿಸಿತು. ಒಮ್ಮೆಗೇ ನೋಡಿ ಹಾಕಿ ಶೇಷುವಿನ ಮೈ ಜುಮ್ಮೆನಿಸಿತು. ಮಾವಿನ ಮರದ ಮೇಲೆರಡು ಹಕ್ಕಿ ಕುಳಿತಿದ್ದುವು. ಅವುಗಳಲ್ಲೊಂದು ಇದ್ದಕ್ಕಿದ್ದಂತೆ ಹಾರಿ ಸೆರೆಮನೆಯಾಚೆ ಮಾಯವಾಯಿತು. ಇನ್ನೊಂದು ಒಂದೇ ಸಮನಾಗಿ, ನೋವಿನಿಂದ ಕಳೆದು ಹೋದ ಗೆಳೆಯನಿಗಾಗಿ ಕೂಗಿತು. ಶಂಕರು ಶೇಷು ತಲೆಯೆತ್ತಿ ಆ ಕಡೆಯೇ ನೋಡಲಾರಂಭಿಸಿದರು. ದೂರದಲ್ಲಿ ಹಕ್ಕಿ ಮುಗಿಲಿನ ಅನಂತರದಲ್ಲಿ ಅಣುವಾಗಿ ಕಾಣದಾಯಿತು. ಮರದ ಮೇಲಿನ ಹಕ್ಕಿಯು ಕೊರಗಿನುಲಿ ಜೋರಾಯಿತು. ಶಂಕರು ಇದ್ದಕ್ಕಿದ್ದಂತೆ ದುಗುಡದ ದನಿಯಲ್ಲಿ ಹಾಡಲಾರಂಭಿಸಿದ.

ಜೀವನದ ಹಗಲಿನಲಿ
   ಕನಸು ಸುಳಿವಂದದಲಿ
ಆತ ಬಂದನು—ಮುಂದೆ!
ನಡುಹಗಲು ಬರುತಿರಲು
   ಅಳವಡೆವ ನೆರಳಿನೊಲು
ಹಾರಿಹೋದನು—ಹಿಂದೆ!

ಓ ಮಧುರ ಮಾರುನುಡಿ
   ನನಗಾಗಿ ಇನಿತು ತಡಿ,
ನನ್ನೆದೆಯಳಲು—ಕೇಳು!

ಅದು ಚೂರುಚೂರಾಗಿ,
   ದನಿ ನೂರುನೂರಾಗಿ
ಹರಡೆ ನೀನದ—ಹೇಳು!

ಅಷ್ಟರಲ್ಲಿ ಜೈಕಾರದ ಸದ್ದು ಶಂಕರುವಿನ ಹಾಡನ್ನು ಅಲ್ಲಿಗೇ ಮುಗಿಸಿತು. ಅದೇನೋ ಎಂದು ಗಾಬರಿಯಿಂದ ಇಬ್ಬರೂ ಓಡಿದರು. ಜೈಲಿನ ಬಾಗಿಲ ಬಳಿ

ವಿದ್ಯಾರ್ಥಿಗಳೆಲ್ಲ ಜೈಕಾರಮಾಡುತ್ತಾ ಗುಂಪುಗೂಡಿದ್ದರು. ಬಾಗಿಲಿನ ಬಳಿ ಪೋಲೀಸಿನವರು ನಿಂತು ಹುಡುಗರನ್ನು ತಡೆಯುತ್ತಿದ್ದರು. ಒಳಗಿಂದೊಮ್ಮೆ ಜೈಕಾರವಾದರೆ ಹೊರಗಿಂದ ಅದಕ್ಕೆ ಪ್ರತಿಧ್ವನಿಯೆನ್ನುವಂತೆ ಜೈಕಾರ! ಶಂಕರು ಬಾಗಿಲ ಬಳಿ ನಿಂತಿದ್ದ ಹುಡುಗನೊಬ್ಬನನ್ನು ಕರೆದು ಅದೇನೆಂದು ಕೇಳಿದ.

"ಕೋರ್ಟಿನಿಂದ ಬಂದವರಿಗೆ ದಿನವೂ ಕೊಡುವಂತೆ ತಿಂಡಿ ಕೊಡಲಿಲ್ಲ. ಹಾಗೆಯೇ ಜೈಲಿನೊಳಕ್ಕೆ ಹೋಗಬೇಕೆಂದರು. ಅವರು ಒಪ್ಪದೆ ಅಲ್ಲಿಯೇ ಕುಳಿತಿದಾರೆ. ಅದಕ್ಕೆ ನಾವು ಸಹಾನುಭೂತಿಯಿಂದ ಇಲ್ಲಿ ಸೇರಿದೇವೆ. ಅವರಿಗೆಲ್ಲಾ ತಿಂಡಿ ಕೊಡಲೇಬೇಕು!" ಎಂದು ಹೇಳಿ ಆ ಹುಡುಗ ಉಳಿದವರ ಜತೆಗೆ ಕೂಗಲಾರಂಭಿಸಿದ. ಶೇಷು, ಶಂಕರು ಕೂಡಲೇ ಜೈಲರನ ಕೋಣೆಗೆ ನಡೆದರು. ಅಲ್ಲಿ ಜೈಲರ್ ಇರಲಿಲ್ಲ; ಅಲ್ಲಿಂದ ತಕ್ಷಣವೇ ಜೈಲಿನ ಆಸ್ಪತ್ರೆಗೆ ನಡೆದರು. ಜೈಲರ್, ಡಾಕ್ಟರ್ ಮಾತಾಡಿಕೊಳ್ಳುವುದು ಕಿವಿಗೆ ಬಿತ್ತು.

"ಬ್ಯಾಂಡೇಜ್ (Bandage) ಸಿದ್ಧವಾಗಿದೆತಾನೆ."

"ಹೌದು ಸಾರ್, ಸುಮಾರು ೧೦೦ ಜನಕ್ಕಾಗುವಷ್ಟಿದೆ."

"ಸಾಕಾದಷ್ಟು ಬಿಸಿನೀರು ಇಟ್ಟುಕೊಳ್ಳಿ. ರಾತ್ರಿಗೆ ಅಡಿಗೆ ಮಾಡುವುದಿಲ್ಲ ಈಗ ಅಲ್ಲಿ ಅನ್ನಕ್ಕಿಟ್ಟಿರುವ ಬಿಸಿನೀರನ್ನೇ ತಂದುಕೊಳ್ಳಿ. ಆಮೇಲೆ, ದೊಡ್ಡ ಆಸ್ಪತ್ರೆಗೆ ಟೆಲಿಫೋನ್ ಮಾಡಿದೇನೆ. ಟಿಂಕ್ಚರ್ (Tincture Iodine) ಕಳಿಸುವುದಾಗಿ ಹೇಳಿದಾರೆ. ಇನ್ನೇನು ಬರಬಹುದು, ಸುಮಾರು ಕತ್ತಲಾಗುವ ಹೊತ್ತಿಗೆ ಸಿದ್ಧವಾಗಿರಿ."

ಜೈಲರ್ ಡಾಕ್ಟರಿಗೆ ಹೇಳುತ್ತಿದ್ದ ಮಾತು ಶಂಕರುಗೆ ಕೇಳಿಸಿತು. ಏನೋ ಅನಾಹುತಕ್ಕೆ ಇದು ಮೊದಲ ಹೆಜ್ಜೆಯೆನಿಸಿತು. ಆದರೆ ಶೇಷು ಎಲ್ಲಿ ಗಾಬರಿಯಾದಾನೋ ಎಂದು ಏನನ್ನೂ ಹೇಳದೆ ಹಾಗೆಯೇ ಹಿಂತಿರುಗಿದ. ಐದು ನಿಮಿಷಗಳನಂತರ ಜೈಲರನನ್ನು ಅವನ ಕಚೇರಿಯಲ್ಲಿಯೇ ಭೇಟಿ ಮಾಡಿದ. ಜೈಲರ್, ತಿಂಡಿಗೆ ಹೇಳಿರುವುದಾಗಿಯೂ ಇನ್ನರ್ಧಗಂಟೆಯೊಳಗೆ ಬರುವುದಾಗಿಯೂ, ಕತ್ತಲಾದುದರಿಂದ ಅವರೆಲ್ಲ ಜೈಲಿನೊಳಕ್ಕೆ ಬಂದುಬಿಟ್ಟರೆ ಒಳ್ಳೆಯದೆಂದೂ ಹೇಳಿದ. ಶಂಕರು ಅದು ಅಸಾಧ್ಯವೆಂದು ಅವನೊಡನೆ ಚರ್ಚೆ ನಡೆಸಿದ. ಆದರೆ ಚರ್ಚೆಯಿಂದೇನೂ ಪ್ರಯೋಜನವಾಗಲಿಲ್ಲ,

ಕೊನೆಗೆ ಶಂಕರು ಜೈಲರನ ಕೋಣೆಯಿಂದ ಹೊರಬೀಳುವ ವೇಳೆಗೂ ಹೆಬ್ಬಾಗಿಲು ತೆರೆದುದಕ್ಕೂ ಸರಿಹೋಯಿತು. ಹೊರಗೆ ಕುಳಿತಿದ್ದವರನ್ನು ಒಬ್ಬರೊಬ್ಬರನ್ನಾಗಿ ಬಲಾತ್ಕಾರದಿಂದ ಒಳಕ್ಕೆ ಹೊತ್ತು ತಂದರು ಕೆಲವು ನಿಮಿಷಗಳನಂತರ ಎಲ್ಲರೂ ಒಳಬಂದಾಗ ಅವರಿಗೆ ತಿಂಡಿಯೂ ಬಂತು. ಅವರು ತಿನ್ನಲೊಪ್ಪದೆ ಜೈಲರನೊಂದಿಗೆ ಚರ್ಚೆ ನಡೆಸುತ್ತಿರುವಂತೆ ಹೊರಗಡೆ ಮೋಟಾರುಲಾರಿ ಬಂದು ನಿಂತ ಸದ್ದಾಯಿತು. ಜೈಲರ್ ಕೂಡಲೇ “ ನೀವು ನಡೆಯಿರಿ, ನಡೆಯಿರಿ ” ಎಂದು ಅವಸರಪಡಿಸಿದ. ಹುಡುಗರೆಲ್ಲಾ ತಮ್ಮ ರೂಮುಗಳಿಗೆ ಹೋಗಲಾರಂಭಿಸಿದರು. ಎರಡು ಗಳಿಗೆಯೂ ಇಲ್ಲ; ಹಿಂದಿನಿಂದ ‘ ಹೋ ’ ಎನ್ನುತ್ತಾ ಪೋಲೀಸರ ಪಡೆ ಬಂದು ಮೇಲೆ ಬಿದ್ದಿತು. ವಿದ್ಯಾರ್ಥಿಗಳೆಲ್ಲ ಗಾಬರಿಯಲ್ಲಿ ಚಲ್ಲಾಪಿಲ್ಲಿಯಾದರು. ಪೋಲೀಸಿನವರು ಕಂಡಕಂಡಂತೆ ಹೊಡೆಯುತ್ತ ಬಂದರು. ಅವರ ಮೈಮೇಲೆ ಜ್ಞಾನವೇ ಇಲ್ಲ; ಒಬ್ಬನಂತೂ ತನ್ನ ಕಾಲಿನಿಂದ ಜೈಲಿನ ಗೋಡೆಗೊದೆಯುತ್ತಾ, “ ಸ್ವಾತಂತ್ರ್ಯ ಬೇಕೇ, ಸ್ವಾತಂತ್ರ್ಯ? ” ಎಂದು ಅದಕ್ಕುಗಿಯುತ್ತಿದ್ದ. ಸೆರೆಮನೆಯಲ್ಲೆಲ್ಲ ಸಾರಾಯಿಯ ದುರ್ನಾತ ಹರಡಿತು. ಒಬ್ಬ ಹುಡುಗನನ್ನಾದರೂ ಬಿಡದೆ ಎಲ್ಲರನ್ನೂ ಹುಡುಕಿಕೊಂಡು ಹೊಡೆಯುತ್ತಿದ್ದರು.

ಮೂರ್ತಿ, ಶಂಕರು, ಶೇಷು ಆಗಲೇ ಮಾವಿನಗಿಡದ ನೆರಳಿಗೆ ಹೊರಟು ಹೋಗಿದ್ದರು. ಸೂರ್ಯ ಮುಳುಗುತ್ತಿದ್ದಂತೆ ಸಾಯುವ ಮೊದಲು ಆತ ಕಾರಿದ ರಕ್ತದಿಂದ ಕಾರ್ಮೋಡಗಳ ಮೈಯೆಲ್ಲಾ ಕೆಂಪಾಯಿತು.

ಶೇಷುವಿಗೆ ಶಂಕರು ಹಾಡಿದ ಹಾಡು ನೆನಪಾಯಿತು.

“ ಮೂರ್ತಿ, ಶಂಕರು ಈವತ್ತು ಸೊಗಸಾದ ಹಾಡು ಹೇಳಿದರು. ಬಹಳ ಚೆನ್ನಾಗಿತ್ತು.”

“ ಈಗ ಹೇಳು. ಶಂಕರು.”

ಶಂಕರು ಮೋಡದ ಕಡೆಗೇ ನೋಡುತ್ತಿದ್ದವನು ಗಂಭೀರನಾಗಿ ಮೂರ್ತಿಯ ಕಡೆಗೆ ತಿರುಗಿದ.

“ ಮೂರ್ತಿ. ಸಾಯಲು ಮನುಷ್ಯ ಎಷ್ಟು ಹಿಂದೆಗೆಯುತ್ತಾನೆ. ಸೂರ್ಯ ನೋಡು. ತಾನೊಲಿದ ಜಗತ್ತನ್ನು, ಜಗತ್ತಿನ ಸೌಂದರ್ಯವನ್ನು ಬಿಡುತ್ತಾ, ಬಿಡಲಾರದೆ ಅತ್ತು ಕಣ್ಣಿನಿಂದ ರಕ್ತ ಹರಿಸುತ್ತಿದಾನೆ. ಬಿಟ್ಟು

ಹೋಗಬೇಕಲ್ಲಾ ಎಂದು ಗೋಳಾಟದಲ್ಲಿ ಜಗತ್ತನ್ನು ಗಾಢವಾಗಿ ತಬ್ಬಿಕೊಂಡಿದೆ ಅವನ ಕಿರಣಗಳು."

ಶಂಕರುವಿನ ಮಾತಿನ್ನೂ ಮುಗಿದೇ ಇರಲಿಲ್ಲ. ಅಷ್ಟರಲ್ಲೇ ಚೀರಾಟ ಕೇಳಿತು.

"ಅಯ್ಯೋ, ಅಯ್ಯೋ, ಸತ್ತೇ, ಸತ್ತೇ," ಎಂದು ಚೀರುತ್ತಾ ಒಬ್ಬ ಹುಡುಗ ಓಡಿಬಂದ. ಮೂರ್ತಿ, ಶೇಷು, ಶಂಕರು ಎಲ್ಲಾ ಆಕಡೆ ತಿರುಗಿದರು. ಹುಡುಗ ಬಂದು ಅವರ ಮುಂದೆ ಮುಗ್ಗುರಿಸಿ ಬಿದ್ದ. ಅವನ ಹಿಂದೆಯೇ ಲಾಠಿ ಹಿಡಿದ ಮೂವರು ಸಿಪಾಯಿಗಳು ಓಡಿಬಂದರು. ಮೂರ್ತಿಗೇನೂ ಗೊತ್ತೇ ಆಗಲಿಲ್ಲ. ಎದ್ದು ನಿಂತ. ನಿಮಿಷ ಕಳೆಯುವುದರಲ್ಲೇ ಸಿಪಾಯಿಯ ಲಾಠಿ ಏಟು ಬಿದ್ದು ಚೀರುತ್ತಾ ಕೆಳಗುರುಳಿದರು ಶೇಷು, ಮೂರ್ತಿ ಇಬ್ಬರೂ. ಮೂರ್ತಿಯನ್ನು ಹೊಡೆದ ಸಿಪಾಯಿ ಮತ್ತೆ ಕೈಯೆತ್ತಿದ. ಶಂಕರುವಿನ ತಲೆಯ ಮೇಲೆ ಮೂರನೆಯ ಸಿಪಾಯಿಯ ಏಟುಬಿತ್ತು. ಶಂಕರು ಮೂರ್ತಿಯ ಮೈಮೇಲುರುಳಿದ. ಮೂರ್ತಿಗೆಂದು ಸಿಪಾಯಿ ಬೀಸಿದ ಲಾಠಿ ರಭಸದಿಂದ ಶಂಕರುವಿನೆದೆಗೆ ಬಿತ್ತು.

"ಮೂರ್ತಿ" ಎಂದೊಮ್ಮೆ ಜೋರಾಗಿ ಚೀರಿದ ಶಂಕರು.

ಪೋಲೀಸಿನವನು ಅವನೆದೆಯ ಮೇಲೊಮ್ಮೆ ತನ್ನ ಬೂಟ್ಸಿನ ಕಾಲನ್ನಿಟ್ಟು ಆಕಡೆ ನೆಗೆದ, ಅಲ್ಲಿದ್ದ ಮಾವಿನ ಮರವನ್ನೇ ಮನುಷ್ಯನೆಂದು ಭ್ರಮಿಸಿ!

ಆಸ್ಪತ್ರೆಯಲ್ಲಿ ಮೂರ್ತಿ, ಶೇಷು, ಶಂಕರು ಮೂವರನ್ನೂ ಒಂದೇ ಕಡೆ ಒಗೆದಿದ್ದರು. ಮೂರ್ತಿಗೆ ಏಟು ಜೋರಾಗಿ ಬಿದ್ದಿರಲಿಲ್ಲ. ಶೇಷುವಿಗೆ ಆದ ಗಾಯವೂ ಅಂತಹ ತೀವ್ರ ಗಾಯವಲ್ಲ. ಆದರೆ ಶಂಕರುಗೆ ಮಾತ್ರ ಜ್ಞಾನ ಬರಲೇ ಇಲ್ಲ. ರಾತ್ರಿಯೆಲ್ಲಾ ಸೆರೆಮನೆಯ ತುಂಬ ನರಳಾಟ. ಒಬ್ಬರನ್ನೂ ಬಿಡದೆ ಎಲ್ಲರಿಗೂ ಲಾಠಿಯ ಅನುಭವವಾಗಿತ್ತು. ಜೈಲರ್ ಅರ್ಧರ್ಧ ಗಂಟೆಗೆ ಬಂದು ಎಲ್ಲರನ್ನೂ ನೋಡಿಕೊಂಡು ಹೋಗುತ್ತಿದ್ದ. ಶಂಕರುವಿನ ಸ್ಥಿತಿ ಬಹಳ ವಿಷಮವಾಗಿದೆಯೆಂದು ಡಾಕ್ಟರ್ ಅವನ ಪಕ್ಕದಲ್ಲಿಯೇ ಕುಳಿತಿದ್ದರು. ಶಂಕರುವಿನ ತಲೆಯ ಚಿಪ್ಪು ಒಡೆದಿತ್ತು. ಜತೆಗೆ ಎದೆಯ ಪಂಜರದ ಮೂಳೆಗಳು ಮುರಿದಿದ್ದುವು. ಮೂರ್ತಿಗೆ ಬೀಳುತ್ತಿದ್ದ ಏಟನ್ನು ತಪ್ಪಿಸಲು ತನ್ನೆದೆ

ನೀಡಿದ್ದ ಶಂಕರು. ರಾತ್ರಿಯೆಲ್ಲಾ ಮೂರ್ತಿ, ಶೇಷು ನರಳಿದರು. ಎಲ್ಲರೂ ನೊಂದವರೇ, ನರಳುವವರೇ, ಸಮಾಧಾನ ನೀಡುವವರಾರು ?

ಬೆಳಗ್ಗೆಯ ವೇಳೆಗೆ ಶಂಕರುಗೆ ತಿಳಿವು ಬಂದಂತಾಯಿತು. ಬಹಳ ನೋವಾಗಿತ್ತೇನೋ, ಬಹಳ ಆಯಾಸವೂ ಆಗಿತ್ತು. ಕಣ್ಣು ತೆರೆಯುವುದೇ ಕಷ್ಟವಾಯಿತು. ಹಾಗೆಯೇ ಬಲು ಕಷ್ಟದಿಂದ ಕಣ್ಣನ್ನು ಅರೆತೆರೆದ ಪಕ್ಕದಲ್ಲಿದ್ದ ಡಾಕ್ಟರ್ ಹಾಗೆಯೇ ಬಾಯಿಗೆ ಹಾಲು ಬಿಸಿದರು. ಶಂಕರು ಪಕ್ಕಕ್ಕೆ ತಿರುಗಿ ನೋಡಿದ. ಮೂರ್ತಿಯ ಮೇಲೆ ಅವನ ದೃಷ್ಟಿಬಿತ್ತು. ಮೂರ್ತಿ ಹಾಗೆಯೇ ಶಂಕರುವಿನ ಹತ್ತಿರ ಬಂದ. ಶೇಷುವಿಗೆ ಸ್ವಲ್ಪ ಜೋಂಪು ಹಿಡಿದು ನಿದ್ರೆಮಾಡುತ್ತಿದ್ದ. ಶಂಕರು ಮೂರ್ತಿಯನ್ನು ಮಾತಾಡಿಸಲು ಯತ್ನಿಸಿದ. ಬಾಯಿಂದ ಮಾತಿಗೆ ಬದಲು ರಕ್ತ ಹೊರಬಿತ್ತು. ರಕ್ತದ ವಾಂತಿ! ಡಾಕ್ಟರಿಗೆ ಗಾಬರಿಯಾಯಿತು. ಮೂರ್ತಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಶಂಕರುಗೆ ಮತ್ತೆ ಅರಿವು ತಪ್ಪಿತು. ಡಾಕ್ಟರ್ ಕೂಡಲೇ ಜೈಲರನಿಗೆ ಹೇಳಿಕಳಿಸಿದರು.

"ಈ Case ಬಹಳ Serious ಆಗಿದೆ Sir. ಇಲ್ಲಿ Treat ಮಾಡೋಕೆ Facilities ಇಲ್ಲ. Hospital ಗೇ ಕಳಿಸಿದರೆ Better. ಇದು Life and Death ಪ್ರಶ್ನೆ."

No, no, ಡಾಕ್ಟರ್. ಜೈಲಿನಿಂದ ಖೈದಿಯನ್ನು ಹೊರಗೆ ಕಳುಹುವಂತೆಯೇ ಇಲ್ಲ. ಡೆಪ್ಯುಟಿ ಕಮಿಷನರ್ ಅಪ್ಪಣೆಯಿಲ್ಲದೆ ಯಾರನ್ನೂ ಹೊರ ಕಳಿಸುವಂತೆಯೇ ಇಲ್ಲ."

"ಹಾಗಾದರೆ ಬಹಳ ಕಷ್ಟ. ಇಲ್ಲಿ Treatment ಗೆ ಒಂದಾದರೂ Materials ಇಲ್ಲ" ಎಂದು ಗೊಣಗಿದರು ಡಾಕ್ಟರ್.

ಡಾಕ್ಟರ್ ಮತ್ತೆ ಶಂಕರುವಿನ ಕಡೆ ನೋಡಿ ತಲೆಯಲ್ಲಾಡಿಸಿದರು. ಮೂರ್ತಿಗೆ ಉಸಿರೇ ಸಿಕ್ಕಿಕೊಂಡಂತಾಯಿತು. ಶೇಷುವೂ ಎಚ್ಚರಗೊಂಡು ಪಕ್ಕಕ್ಕೆ ಬಂದು ಕುಳಿತ.

ಸಂಜೆಯ ಕೆಂಬೆಳಕು ಕಿಟಕಿ ಹಾದು ಆಸ್ಪತ್ರೆಯೊಳಗೆ ಮಲಗಿದ್ದ ಶಂಕರುವಿನ ಮುಖದ ಮೇಲೆ, ಮೈಮೇಲೆ ಬಿದ್ದಿತ್ತು. ಎರಡು ಪಕ್ಕದಲ್ಲಿ ಮೂರ್ತಿ ಮತ್ತು ಶೇಷು ಕುಳಿತಿದ್ದರು. ಬೆಳಗ್ಗೆ ಜ್ಞಾನ ತಪ್ಪಿದ ಶಂಕರುಗೆ

ಮೆಲ್ಲನೆ ತಿಳಿವು ಬಂತು. ಕಣ್ಣು ತೆರೆಯಲು ಬಹಳ ಪ್ರಯಾಸವಾಗಿತ್ತು. ತುಟಿ ಅಲುಗಿತು; ಡಾಕ್ಟರರ ಮುಖ ಕೊಂಚ ಗೆಲುವಾಯಿತು. ಮೂರ್ತಿ ಒಂದೊಂದೇ ಬೊಟ್ಟಾಗಿ ಹಾಲು ಕುಡಿಸಿದ. ಶಂಕರು ಕಣ್ಣನ್ನು ಅರೆ ತೆರೆದ. ಆಗಲೂ ತುಟಿಯ ಮೇಲೊಂದು ನಗೆ ಸುಳಿಯಿತು. ಮೂರ್ತಿಯ ಕೈಯನ್ನು ತನ್ನೆದೆಯ ಮೇಲಿಡುವಂತೆ ಸನ್ನೆಮಾಡಿದ. ಶಂಕರುವಿನ ಎದೆಯ ಮೇಲೆ ಮೂರ್ತಿ ಕೈಯಿಟ್ಟ. ಶಂಕರು ಶೇಷುವಿನ ಕಡೆಗೂ ಒಮ್ಮೆ ನೋಡಿದ; ಶೇಷುವೂ ತನ್ನ ಕೈಯನ್ನು ಶಂಕರುವಿನೆದೆಯಮೇಲಿಟ್ಟ. ಮೂರ್ತಿಯ ಕಣ್ಣಿನಲ್ಲಿ ನೀರುತುಂಬಿತ್ತು. ಶೇಷು ಬಹು ಪ್ರಯಾಸದಿಂದ ದುಃಖವನ್ನು ತಡೆಯಲು ಯತ್ನಿಸುತ್ತಿದ್ದ. ಶಂಕರುವಿಗೆಂದು ಔಷಧ ಕಲೆಸುತ್ತಿದ್ದ ಡಾಕ್ಟರ್.

"ಮೂರ್ತಿ" ಪಿಸುಮಾತಂದಂತೆ ಬಹು ಪ್ರಯಾಸದಿಂದ ಶಂಕರು ಅಂದ.

"ಶಂಕರು—"

"ನಾನಂದ ಮಾತು....ಮೂರ್ತಿ........"

"ಊಂ, ಶಂಕರು."

"ಆದರ್ಶ....ನಾವು........"

ಶಂಕರುವಿನಿಂದ ಮುಂದೆ ಮಾತು ಹೊರಡಲಿಲ್ಲ, ತುಟಿ ಅಲುಗಿತು. ಇದ್ದಕ್ಕಿದ್ದಂತೆ ರಕ್ತ ಕಾರಿದ. ಅವನೆದೆಯ ಮೇಲಿದ್ದ ಮೂರ್ತಿ, ಶೇಷು ಇವರ ಬಲಗೈಗಳೂ ಅವನ ರಕ್ತದಲ್ಲಿ ತೊಯ್ದು ಕೆಂಪಾದುವು. ಹೊರಗೆ ಚೆಂಗುಲಾಬಿಯಂತೆ ಹೊಳೆಯುತ್ತಿದ್ದ ಮೋಡ ಈ ರಕ್ತ ತರ್ಪಣದಿಂದ ಒಮ್ಮೆಗೇ ಕರಿಯೆಳ್ಳಿನಂತೆ ಕಪ್ಪಾಯಿತು.

## ೧೫

ಶಂಕರು ಹೋಗಿ ಹದಿನೈದು ದಿನಗಳಾಗಿತ್ತು. ಹುಡುಗರ ಗಾಯಗಳೆಲ್ಲಾ ಮಾಗುತ್ತ ಬಂದಿದ್ದುವು. ಎಂದಿಗೆ ಸೆರೆಯಿಂದ ಹೊರಗೆ ಹೋದೇವೋ ಎನಿಸಿತ್ತು ಹುಡುಗರಿಗೆ. ಹೊರಗೆ ಪತ್ರಿಕೆಗಳವರಾದರೂ ತಮ್ಮ ಪರವಾಗಿ ಗಲಾಟೆಮಾಡಲಿ, ಹೇಗಾದರೂ ಬಿಡುಗಡೆಯಾದರೆ ಸಾಕೆಂದು ಅವರ ಹೆಬ್ಬಯಕೆ.

ಆದರೆ ಮೂರ್ತಿ, ಶೇಷು ಹಾಗೆ ಯೋಚಿಸುತ್ತಲೇ ಇರಲಿಲ್ಲ!

ಯಾವಾಗಲೂ ಹಗಲೆನ್ನದೆ ಸಂಜೆಯೆನ್ನದೆ ಮಾವಿನ ಮರದಡಿಯಲ್ಲಿ ಕುಳಿತುಕೊಂಡು ಮೌನವಾಗಿ ಒಬ್ಬರ ಮುಖವನ್ನೊಬ್ಬರು ನೋಡುತ್ತಾ ಕುಳಿತಿರುತ್ತಿದ್ದರು. ರಾತ್ರಿ ಬಹಳ ಹೊತ್ತಿನವರೆಗೂ ಹಾಗೆಯೇ ಕುಳಿತಿದ್ದು ನಿಟ್ಟುಸಿರಿಟ್ಟು ಕೈಯಲ್ಲಿ ಕೈಯಿಟ್ಟು, ದುಗುಡ ಮುಚ್ಚಿ ಮಲಿನವಾದ ಮುಖಗಳಿಂದ ತಮ್ಮ ಕೋಣೆಗೆ ಹಿಂತಿರುಗುತ್ತಿದ್ದರು. ಯಾರೊಂದಿಗೂ ಮಾತಿಲ್ಲ, ಕಥೆಯಿಲ್ಲ; ಯಾವಾಗಲೂ ಒಂದೇ ರೀತಿಯಲ್ಲಿ! ಗಾಢವಾಗಿ, ಆಳವಾದ ಗಹನ ಚಿಂತೆಯಲ್ಲಿ ಮುಳುಗಿದಂತೆ. ಊಟಮಾಡಿದರೆ ಉಂಟು; ಇಲ್ಲದಿದ್ದರೆ ಅದೂ ಇಲ್ಲ. ಯಾವಾಗಲೂ ಶಂಕರು ಮಲಗುತ್ತಿದ್ದ ಜಾಗದ ಕಡೆಗೇ ದಿಟ್ಟಿಸುವರು. ಕಣ್ಣಿನಲ್ಲಿ ನೀರುತುಂಬಿ ದುಃಖ ಉಮ್ಮಳಿಸಿ ಬಿಟ್ಟರೆ ಇಬ್ಬರೂ ಮಾವಿನ ಮರದ ಅಡಿಗೆ ಹೋಗಿಬಿಡುವರು.

ಮೂರ್ತಿ, ಶೇಷು ಆ ದಿನ ಬೆಳಗ್ಗೆ ಬೇಗನೆ ಎದ್ದು ಮಾವಿನ ಮರದಡಿಗೆ ಹೋಗಿ ಕುಳಿತಿದ್ದರು. ಉದಯದ ಹೊಂಬೆಳಕಿನ ಹೊಸ ಜೀವ ಅವರಿಗೇನೂ ಹರ್ಷ ತಂದಿರಲಿಲ್ಲ. ಶಂಕರುಗೆ ಪೆಟ್ಟು ಬಿದ್ದ ಕಡೆ ಒಂದಷ್ಟು ಮಣ್ಣು ಗುಡ್ಡೆ. ಅದರ ಪಕ್ಕದಲ್ಲೊಂದು ಸಣ್ಣ ಪಾತಿಯಲ್ಲಿ ಒಂದು ಹೂವಿನ ಗಿಡ. ರಕ್ತ ತರ್ಪಣ ನೀಡಿದವನ ನೆನಪಿಗೆ ರಕ್ತವರ್ಣದ ಗುಲಾಬಿಯ ಹೂವು.

"ಮೂರ್ತಿ" ಎಂದ ಶೇಷು.

"ಊಂ"

"ಒಂದು ತಿಂಗಳಾಯಿತು, ಮೂರ್ತಿ."

"ಹೂಂ!" ನಿಟ್ಟುಸಿರುಬಿಟ್ಟ ಮೂರ್ತಿ.

"ಬಳ್ಳಿಯಲ್ಲಿ ಹೂವುಬಿಡುತ್ತದೆ ಇಂದೋ ನಾಳೆಯೋ. ಹೂವಿನಂತಹ ಜೀವನ! ತನಗಾಗಿ ಏನೂ ಇಲ್ಲದೆ, ಉಳಿದವರಿಗಾಗಿಯೇ ಬಾಳಿ, ಬಾಳುಕೊಟ್ಟು ಅಳಿದ ಹೂವಿನಂತಹ ತುಂಬ ಜೀವನ!"

ಮೂರ್ತಿಗೆ ದುಃಖ ತಡೆಯಲಾಗಲಿಲ್ಲ. ಬಿಕ್ಕಿಬಿಕ್ಕಿ ಅಳಲಾರಂಭಿಸಿದ. ಶೇಷುವನ್ನು ತಬ್ಬಿ ಬಿಟ್ಟ; ಶೇಷುವೂ ಮನಸಾರ ಅತ್ತ. ಗಾಳಿಯಲ್ಲಿ ಗುಲಾಬಿ ಗಿಡದಲ್ಲಿ ಅರೆ ಅರಳುತ್ತಿದ್ದ ಗುಲಾಬಿಯ ಮೊಗ್ಗು ಇಬ್ಬರಕಡೆಗೂ ತೂಗುತ್ತಿತ್ತು.

" ಸಾರ್, ಸಾರ್. "

ಮೂರ್ತಿ ಆ ಕಡೆ ತಿರುಗಿದ.

" ಈವತ್ತು ನಿಮ್ಮ ಮೊಕದ್ದಮೆಯಿದೆ ಸಾರ್, ಊಟಕ್ಕೇಳಿ ಸಾರ್ " ಎಂದು ಹೇಳಿ ಪೋಲೀಸಿನವನು ಹೊರಟು ಹೋದ.

" ಶೇಷು, ನನ್ನ ಮೊಕದ್ದಮೆಯ ವಾದ ವಿವಾದವೆಲ್ಲಾ ಮುಗಿದಿದೆ. ತೀರ್ಪು ಏನಾಗುವುದೋ ಏನೋ, ಎಷ್ಟು ವರ್ಷವಿರಬೇಕಾದೀತೋ ಏನೋ !"

" ಮೂರ್ತಿ, " ಶೇಷು ಅರ್ಧದಲ್ಲೇ ನಿಲ್ಲಿಸಿದ. ಗಂಟಲು ಬಿಗಿಯಿತು.

" ಹುಂ, ಶೇಷು "

" ಶಂಕರು ಕೊನೆಯ ದಿನ ಹಾಡು ಹೇಳುತ್ತಿದ್ದ, ಮೂರ್ತಿ ಆ ಹಾಡು ಆ ದಿನವೇ ಯಾಕೆ ಹೇಳಿದನೋ ಗೊತ್ತಿಲ್ಲ. ಅದೆಂತಹ ಹಾಡು! "

" ಸಾರ್, ಹೊತ್ತಾಗಿ ಹೋಯಿತು ಸಾರ್ "

ಪೋಲೀಸಿನವನು ಬಂದು ಮತ್ತೆ ಎಚ್ಚರಿಸಿದ.

" ಬಂದೆ, ನಡೆಯಯ್ಯಾ "

" ನಿಜವಾಗಿ ಶಂಕರುವಿನಂತಹ ಜೀವಿಗಳು ಅಪರೂಪ ಮೂರ್ತಿ "

" ಅಪರೂಪ, ಶಂಕರುವಿದ್ದುದು ಒಬ್ಬನೇ ಜಗತ್ತಿಗೆ, ಅವನಿಂದು ಇಲ್ಲ! "

" ನನಗೆ ಹೇಗೆ ಹೇಗೋ ಅನಿಸುತ್ತೆ ಮೂರ್ತಿ, ಯಾಕೋ ಮನಸ್ಸಿಗೆ ಹೆದರಿಕೆಯಾಗುತ್ತೆ "

" ಇನ್ನೇನು ಹೆದರಿಕೆ ಶೇಷು, ಆಗಬೇಕಾದುದೆಲ್ಲ ಆಯಿತು. ನಮಗೆ ಇನ್ನೇನು ತಾನೆ ಆಗಲು ಸಾಧ್ಯ? ಈಗ ನನಗೂ ಒಮ್ಮೊಮ್ಮೆ ಎನಿಸುತ್ತೆ, ನಾವು ಒಬ್ಬರನ್ನೊಬ್ಬರು ಕಳೆದುಕೊಳ್ಳುವುದಕ್ಕಾಗಿಯೇ ಕೂಡುವೆವೇನೋ ಎಂದು. ನಾನು ಕಂಡ ಪ್ರತಿ ವ್ಯಕ್ತಿಯೂ ಹೀಗೆಯೇ! ನಾನು ಪ್ರೇಮಿಸಿದ ಒಂದು ವ್ಯಕ್ತಿ ಯಾದರೂ ನನಗೆ ಉಳಿದಿಲ್ಲ ಸರು ಹಾಗಾದಳು, ನಾಣಿ ಚಿಕ್ಕಪ್ಪ ಏನಾದ ನೆಂಬುದೇ ತಿಳಿಯದು, ಅಣ್ಣ ಹೀಗೆ ನನ್ನ ಪಾಲಿಗೆ ಇಲ್ಲವಾದರು. ನನ್ನ ಬಾಳಿ ಗೊಂದು ರೂಪುಗೊಟ್ಟ ಗುರು ಶಂಕರು ಆತ್ಮಬಲಿಯರ್ಪಿಸಿದ, ಇನ್ನು ಉಳಿದ ವನು ನೀನೊಬ್ಬ ಆಸರೆ! "

ಮೂರ್ತಿ ಶೇಷುವಿನ ಕೈ ಭದ್ರವಾಗಿ ಹಿಡಿದೊತ್ತಿದ ಇಬ್ಬರೂ ಮೌನ ವಾಗಿ ಅಲ್ಲಿಂದೆದ್ದು ಊಟದ ಮನೆಗೆ ಬಂದರು.

ಅಂದು ಎಂದೂ ಇಲ್ಲದ ನೀರವತೆ, ಸ್ಮಶಾನದ ನೀರವತೆ! ಊಟದ ಮನೆಯಲ್ಲಿ ಎಂದಿನಂತೆ ಸದ್ದೇ ಇರಲಿಲ್ಲ ಎಲ್ಲರೂ ಗಂಭೀರವಾಗಿ ತೆಪ್ಪಗೆ ಊಟ ಮಾಡುತ್ತಿದ್ದರು. ಮೂರ್ತಿ, ಶೇಷು ಇಬ್ಬರೂ ಅನ್ನ ತಿಂದು ಹೊರಗೆ ಬಂದರು.

"ಶೇಷು, ಸಂಜೆ ಬೇಗ ಬಂದು ಬಿಡುತ್ತೇನೆ, ಶಂಕರು ಹೇಳಿದ ಕವಿತೆ ಹೇಳಬೇಕು" ಎಂದ ಮೂರ್ತಿ ಹೊರಡುವ ಮೊದಲು.

"ಈವತ್ತು ತೀರ್ಪು ಎಂದೆಯಲ್ಲ ಮೂರ್ತಿ?"

"ಹೌದು, ಈವತ್ತು ತೀರ್ಪು!"

ಮೂರ್ತಿ ಜೈಲಿನಿಂದ ಹೊರಗೆ ಕಾಲಿಟ್ಟ. ಬಾಗಿಲು ಮುಚ್ಚಿತು. ಕುಗ್ಗಿದ ಮನಸ್ಸಿನಿಂದ ಶೇಷು ಕೋಣೆಗೆ ಹೋಗಿ ಯಾವುದೋ ಪುಸ್ತಕ ಕೈಗೆತ್ತಿಕೊಂಡು ಮಾವಿನ ಮರದಡಿಗೆ ನಡೆದ. ಗುಲಾಬಿಯು ಹೂವಾಗಲೇ ಅರಳಿತ್ತು. ಶೇಷು ಅದನ್ನೇ ಎವೆಯಿಕ್ಕದೆ ನೋಡುತ್ತಿದ್ದ ಕೊಂಚ ಹೊತ್ತು. ಹಾಗೆಯೇ ಪುಸ್ತಕ ತೆರೆದ. ಎಲ್ಲಿಯೋ ತೆರೆದುಕೊಂಡಿತು ಪುಸ್ತಕ.

"ಬಾಳಿರುವುದು ಬಾಳುವುದಕ್ಕಾಗಿ. ಬಾಳನ್ನು ಬಾಳಬೇಕು, ಪೂರ್ಣವಾಗಿ ಬಾಳಬೇಕು. ನಿನ್ನೆ ನಡೆದುದಕ್ಕೆ ಪಶ್ಚಾತ್ತಾಪ ಪಡುವ ಬಾಳು ಬೇಡ. ಹೆಜ್ಜೆಯಿಟ್ಟುದನ್ನು ಹಿಂತೆಗೆಯಬೇಕಾಗಿತ್ತೆನ್ನುವ ಹೇಡಿ ಹೃದಯದ ಬಾಳು ಬಾಳಲ್ಲ! ತಾನು ನಡೆಸಿದುದಕ್ಕೆ ತಾನೇ ಹೊಣೆ, ತಾನು ಅದರ ಫಲವನ್ನನುಭವಿಸಲು ಸಿದ್ಧನೆನ್ನುವ ಕೆಚ್ಚೆದೆ ಬೇಕು. ವ್ಯಕ್ತಿ ಎಲ್ಲಿಯವರೆಗೂ ಈ ಕೆಚ್ಚೆದೆ ಹೊಂದಿರುವನೋ ಅಲ್ಲಿಯವರೆಗೂ ಅವನ ಬಾಳು ನಿಜವಾದ ಬಾಳು, ಆದರ್ಶ ಬಾಳು! ಈ ಆದರ್ಶದ ನಡುವೆ ಎಡರು ತೊಡರು ನೂರಾರು, ಹೆಜ್ಜೆ ಹೆಜ್ಜೆಗೂ ಹಾವು ಹೆಡೆ ತೋರಬಹುದು, ಹೂಂಕರಿಸಬಹುದು. ಆದರೆ ಕೆಚ್ಚೆದೆಯ ವೀರ ತಾನು ನಂಬಿದ ಆದರ್ಶಕ್ಕಾಗಿ ಜೀವವನ್ನೇ ತನ್ನ ರಕ್ತದಲ್ಲಿ ತರ್ಪಣ ಬಿಡುವನೇ ಹೊರತು ಹಿಂದೆ ಬೀಳುವುದಿಲ್ಲ"

ಶೇಷುವಿಗೆ ಮುಂದೆ ಓದಲಾಗಲಿಲ್ಲ. ಎಂತಹ ಮಾತುಗಳು! ಶಂಕರುವಿನ ಜೀವನ! ಶಂಕರುವಿನ ವ್ಯಕ್ತಿತ್ವ! ಶಂಕರುವಿನ ಆದರ್ಶಗಳನ್ನೇ ಮುಂದಿಟ್ಟು ಅವನ ಬಾಳಿನ ಅಂತರಾರ್ಥ ಬರೆದಂತಿತ್ತು ಆ ಮಾತುಗಳು. ಶೇಷು ಹಾಗೆಯೇ ಯೋಚನೆ ಮಾಡುತ್ತಾ ಆ ಗುಲಾಬಿಯ ಕಡೆಗೇ ನೋಡುತ್ತಿದ್ದ.

ಆ ಗುಲಾಬಿಯ ಸುಂದರ ದಳಗಳ ನಡುವಿನಿಂದ ಶಂಕರುವಿನ ಮುಖ ಮಾತಾಡಿ ದಂತೆ ತೋರಿತು.

" ಆದರ್ಶಕ್ಕಾಗಿ, ಸಾವು! "

" ಶಂಕರು ! " ಎಂದು ಚೀರಿದ ಶೇಷು !

ಸೂರ್ಯ ಆಗಲೇ ಪಶ್ಚಿಮದ ಕಡೆಗೆ ಓಡಿ ಹೋಗುತ್ತಿದ್ದ. ಧಗೆ ತಡೆಯ ಲಾರದೆ ಗಿಡ ಮರಗಳೆಲ್ಲಾ ಒದ್ದಾಡುತ್ತಿದ್ದವು, ಶೇಷುವಿಗೆ ಕಣ್ಣು ವಿಪರೀತ ಎಳೆದುಕೊಂಡು ಹೋಗುತ್ತಿತ್ತು. ಅಲ್ಲಿಯೇ ಮಲಗಿ ನಿದ್ರೆ ಹೋದ.

" ಸಾರ್, ಸಾರ್."

ಶೇಷು ಕಣ್ಣುಬಿಟ್ಟಾಗ ಎದುರಿಗೆ ಟಾರ್ಚ್ ಹಿಡಿದ ಪೋಲೀಸಿನವನು. ಆಗಲೇ ಕತ್ತಲಾಗಿ ಹೋಗಿತ್ತು. ಎಷ್ಟುಹೊತ್ತು ನಿದ್ರೆ ಹೋಗಿಬಿಟ್ಟೆನೋ ಎಂದು ಎದ್ದುನಿಂತ ಶೇಷು. ಗುಲಾಬಿ ಹೂವಿನ ಕಡೆ ನೋಡಿದ. ಆಗಲೇ ಹೂವು ಅರ್ಧ ಒಣಗಿತ್ತು. ಮೆಲ್ಲನೆ ಕಾಲೆಳೆದುಕೊಂಡು ರೂಮಿಗೆ ಬಂದ. ಗೆಳೆಯರೆಲ್ಲಾ ನಗುತ್ತಾ ಸಂತೋಷದಿಂದ ಗಂಟುಕಟ್ಟುತ್ತಿದ್ದರು, ಶೇಷುವಿಗೆ ಏನೂ ಅರ್ಥವೇ ಆಗಲಿಲ್ಲ. ಎಲ್ಲರೂ ತಮ್ಮ ತಮ್ಮ ಬಟ್ಟೆ ಸಾಮಾನುಗಳ ನ್ನೆಲ್ಲಾ ಹಾಸಿಗೆ ಟ್ರಂಕುಗಳಲ್ಲಿ ತುರುಕುತ್ತಿದ್ದರು. ಆಗಲೇ ಒಬ್ಬರಿಬ್ಬರು ಅಲ್ಲಿಂದ ಮಾಯವಾಗಿದ್ದರು.

" ರೀ ಶೇಷಗಿರಿ. ಯಾಕ್ರೀ ಹೀಗೆ ನಿಂತಿದ್ದೀರಿ, ಕಣ್ಣು ಕಣ್ಣು ಬಿಡುತ್ತಾ ? ನಿಮ್ಮ ಸಾಮಾನು ಕಟ್ಟಿಕೊಳ್ಳಿ. "

" ಯಾಕೆ ? " ಎಂದ ಶೇಷು.

" ಯಾಕಂತೆ, ಚೆನ್ನಾಯ್ತು ; ಬಿಡುಗಡೆ! ನಮ್ಮನ್ನೆಲ್ಲ ಬಿಡಬೇಕೆಂದು ಸರ್ಕಾರದ ಆಜ್ಞೆ ! " ಎಂದ ಒಬ್ಬ.

" ಸದ್ಯ, ಈಗಲಾದರೂ ಬಿಡುಗಡೆಯಾಯ್ತಲ್ಲ ! " ಎಂದ ಇನ್ನೊಬ್ಬ.

" ಇನ್ನು ಮೇಲಾದರೂ ಸರಿಯಾಗಿರಬೇಕು. ಚೆನ್ನಾಗಿ ಓದಬೇಕು " ಎಂದ ಮತ್ತೊಬ್ಬ.

ಶೇಷುವಿಗೆ ಕೂಡಲೇ ಶಂಕರುವಿನ ನೆನಪಾಯಿತು. ಇಂತಹ ಹೇಡಿಗಳಿ ಗಾಗಿಯೇ ಶಂಕರು ಜೀವ ತೆತ್ತನೇ ಎಂದು ನೊಂದುಕೊಂಡ. ಇನ್ನು ಮೂರ್ತಿಯ ಬಾಳು ಹೇಗೋ! ಮೂರ್ತಿಗೆ ಇಂದು ತೀರ್ಪು. ಮೂರ್ತಿಯ

ನಾಳೆಗಳನ್ನು ನಿರ್ಧರಿಸುವ ತೀರ್ಪು. ಹೇಗೋ ಏನೋ! ನಿಜ; ಅಂದು ತನಗೂ ತೀರ್ಪು, ಬಿಡುಗಡೆ. ಆದರೆ ಮೂರ್ತಿಗೆ........

"ಶೇಷು, ಶೇಷು"

ಮೂರ್ತಿ ಬಾಗಿಲಲ್ಲಿ ನಿಂತಿದ್ದ. ಮುಖದಲ್ಲಿ ಗೆಲವು ದುಗುಡಗಳು ಕಚ್ಚಾಡುತ್ತಿದ್ದುವು. ಕಣ್ಣಿನಲ್ಲಿ ಆನಂದ ದುಃಖಗಳೊಮ್ಮೆಯೇ ಕಾಣಿಸಿಕೊಂಡುವು.

"ಮೂರ್ತಿ, ಏನಾಯಿತೋ?" ಕುತೂಹಲದಿಂದ ಕಾತರದ ದನಿಯಲ್ಲಿ ಕೇಳಿದ ಶೇಷು. ಮೂರ್ತಿಯ ಕಣ್ಣು ಮಿಂಚಿತು.

"ಆಗುವುದೇನು? ನಿಮಗೆಲ್ಲ ಬಿಡುಗಡೆ! ಅದು ಸರಿ, ಶೇಷು, ನೀನು ಮುಂದೆ ಇರುವುದು?"

ಶೇಷು ತಲೆ ತಗ್ಗಿಸಿದ. ಮೂರ್ತಿ ಮೆಲ್ಲನೆ ಹತ್ತಿರ ಬಂದು ಭುಜದ ಮೇಲೆ ಕೈಯಿಟ್ಟ. ಶೇಷುವಿನ ದುಃಖ ಉಮ್ಮಳಿಸಿ ಬಂತು; ಮೂರ್ತಿಯ ಎದೆಯ ಮೇಲೊರಗಿಕೊಂಡು ಮುಸಿಮುಸಿ ಅಳಲಾರಂಭಿಸಿದ.

"ಛೆ! ಛೆ! ಇದೇನಿದು ಶೇಷು, ಹೀಗೆ. ನೀನೇನು ನಿರ್ಬಲ ಹೆಣ್ಣೇನೋ, ಇಲ್ಲ ಮಗುವೋ? ಎಲ್ಲಿ! ಜೀವನದ ಕಷ್ಟವನ್ನೆಲ್ಲಾ ನಗುಮುಖದಿಂದಲೇ ಎದುರಿಸಬೇಕು; ಆ ಕೆಚ್ಚಿರಬೇಕು. ಅದು ಬಿಟ್ಟು ಅಳುತ್ತಾ ಕೂತರಾಯಿತೇನೋ."

"ಮೂರ್ತಿ, ನಿನ್ನದೇನಾಯಿತೋ?"

"ಮೂರು ವರ್ಷ, ಅಷ್ಟೇ"

ಶೇಷುವಿನ ಕೈಬಿಗಿ ಭದ್ರವಾಯಿತು. ಮೂರ್ತಿಗೂ ಮನಸ್ಸು ತಡೆಯುಲಿಲ್ಲ; ಕಣ್ಣಿನಲ್ಲಿ ನೀರು ತುಂಬಿಬಂತು. ಎದೆ ಜ್ವಾಲಾಮುಖಿಯಾಗಿತ್ತು!

"ಮೂರ್ತಿ, ಮೂರು ವರ್ಷ!"

"ಪರವಾಗಿಲ್ಲ, ಶೇಷು; ಮೂರು ವರ್ಷಗಳೇನು? ಪಯಣದ ಹಾದಿಯಲ್ಲಿ ಇಂತಹ ಮೂರು ವರ್ಷಗಳೆಷ್ಟೋ ಕಳೆದುಹೋಗುತ್ತವೆ. ನಾವು ಎದೆಯನ್ನು ಕಲ್ಲಾಗಿಸಬೇಕು ಅಷ್ಟೇ. ಶಂಕರುವನ್ನು ನೆನೆದುಕೊ; ತನ್ನ ಮನಸ್ಸಿನ ಆದರ್ಶಕ್ಕಾಗಿ ಪ್ರಾಣವನ್ನೇ ಕೊಡಲಿಲ್ಲವೆ!"

"ಹೊತ್ತಾಯಿತು, ಹೊರಡಿ!" ಎಂದು ಜೈಲರ್ ಗಲಾಟೆಮಾಡಿದ.

" ಮೂರ್ತಿ " ಶೇಷುವಿನ ದನಿ ಕುಗ್ಗಿತ್ತು.

" ಹೂಂ. "

" ಮಾವಿನ ಮರದಡಿಗೆ ಹೋಗೋಣ, ಕೊನೆಯ ಬಾರಿ. "

ಇಬ್ಬರೂ ಮಾವಿನ ಮರದ ಅಡಿಗೆ ಹೋದರು. ವಿಪರೀತ ಕತ್ತಲು! ಆಕಾಶದಲ್ಲಿ ಬೆಳಕಿಲ್ಲ. ಕೊಂಚ ಕೊಂಚ ನಕ್ಷತ್ರದ ಮಿನುಕಿನಿಂದ ಎಲ್ಲ ಅಸ್ಪಷ್ಟವಾಗಿ ಕಾಣುತ್ತಿತ್ತು; ಗುಲಾಬಿಯ ಗಿಡ ಕಾಣುತ್ತಿತ್ತು. ಆದರೆ ಸಂಜೆಯಿದ್ದ ಹೂವಿನ ದಳಗಳೆಲ್ಲಾ ಉದುರಿಹೋಗಿ ಬರಿಯ ತೊಟ್ಟು ಮಾತ್ರ ಅಂಟಿಕೊಂಡಿತ್ತು.

" ಶೇಷು, ಇದು ಶಂಕರು ಅಳಿದ ಜಾಗ. ನಾವು ಮೂವರೂ ಹೃದಯಗಳನ್ನು ಒಂದಾಗಿಸಿದ ಜಾಗ, ಯಾವಾಗಲಾದರೂ ಆಗಾಗ ನೆನೆಯುತ್ತಿರು! "

ಶೇಷು ತಲೆ ಬಾಗಿಸಿದ.

" ಶೇಷು, ಶಂಕರು ಹಾಡಿದ ಗೀತವನ್ನು ಹಾಡುವೆನೆಂದೆ. ಹಾಡಲೇ ಇಲ್ಲ, ಈಗಲಾದರೂ ಒಮ್ಮೆ ಹೇಳಿಬಿಡು, ಅದೂ ಅವನು ಹೇಳಿದ ಜಾಗದಲ್ಲಿಯೇ, ಅವನ ಮುಂದೆಯೇ ಆಗಲಿ! "

" ಶೇಷುವಿಗೆ ಗಂಟಲು ಬಿಗಿದು ಬಂತು. ಬಹು ಪ್ರಯಾಸದಿಂದ ಮೆಲು ದನಿಯಲ್ಲಿ ಹಾಡಿದ.

ಜೀವನದ ಹಗಲಿನಲಿ
ಕನಸು ಸುಳಿವಂದದಲಿ
  ಆತ ಬಂದನು ಮುಂದೆ!
ನಡುಹಗಲು ಬರುತಿರಲು
ಅಳಿವಡೆವ ನೆರಳಿನೊಲು
  ಹಾರಿಹೋದನು ಹಿಂದೆ!
ಓ ಮಧುರ ಮಾರುನುಡಿ
ನನಗಾಗಿ ಇನಿತು ತಡಿ,
  ನನ್ನೆದೆಯುಳಲು ಕೇಳು
ಅದು ಚೂರು ಚೂರಾಗಿ,
ದನಿ ನೂರು ನೂರಾಗಿ
  ಹರಡೆ ನೀನದ ಹೇಳು!

"ಶೇಷುವಿನ ಕಣ್ಣೀರಿನ ಹನಿ ಅವರಿಬ್ಬರ ಕೂಡಿದ್ದ ಕೈಗಳ ಮೇಲೆ ಬಿತ್ತು. ಅದರ ಮೇಲೊಂದು ಹನಿ ಮೂರ್ತಿಯ ಕಣ್ಣಿನಿಂದುರುಳಿತು. ಇಬ್ಬರೂ ನೀರವ ಮೌನದಲ್ಲಿ ಹಿಂತಿರುಗಿದರು. ಶೇಷುವಿನ ಹೃದಯದಲ್ಲಿ ಬಿರುಗಾಳಿ ಅಲ್ಲೋಲ ಕಲ್ಲೋಲವನ್ನೆಬ್ಬಿಸುತ್ತಿತ್ತು.

"ಎಷ್ಟು ಹೊತ್ತು! ಹೊರಡಿ, ಹೊರಡಿ" ಜೈಲರ್ ಮತ್ತೆ ಚಡಪಡಿಸಿದ

"ಮೂರ್ತಿ ಶೇಷುವನ್ನು ತಬ್ಬಿಕೊಂಡು ತಲೆ ನೇವರಿಸಿದ. ಶೇಷು ಬಿಕ್ಕಿ ಬಿಕ್ಕಿ ಅತ್ತ. ಜೈಲರ್ ಶೇಷುವನ್ನೆಳೆದು ಬಾಗಿಲ ಕಡೆಗೆ ನೂಕಿದ ಕೊನೆಯ ಬಾರಿಗೊಮ್ಮೆ ಶೇಷುವಿನ ಕರುಣಾಪೂರಿತ ದೃಷ್ಟಿಯು ಪ್ರೇಮಲತೆ ಮೂರ್ತಿಗೆ ಅನುಭವವಾಯಿತು. ಹೆಬ್ಬಾಗಿಲಿನಿಂದ ಹೊರಗೆ ಶೇಷುವನ್ನು ನೂಕಿದ ಜೈಲರ್.

ಹೆಬ್ಬಾಗಿಲು ಮುಚ್ಚಿತು, ಹೊರಗೆ ಮೋಟಾರುಬಂಡಿ ಹೊರಟ ಶಬ್ದವಾಯಿತು. ಮೋಟಾರು ಮುಂದೆ ಮುಂದೆ ಸಾಗಿದಂತೆ ಸದ್ದು ಸಣ್ಣಗಾಗುತ್ತಾ ಬಂದಿತು. ಮೂರ್ತಿಯ ಮುಖ ಗಂಭೀರವಾಗಿತ್ತು. ಕಟು ಗಂಭೀರವಾಗಿದ್ದ ಕೆನ್ನೆಯ ಮೇಲೊಂದು ಹನಿ ನೀರುರುಳಿತು. ಆಕಾಶದಲ್ಲಿ ಒಂದೇ ಒಂದು ನಕ್ಷತ್ರ ಸೆರೆಮನೆಯ ಹೊರಬದಿಯ ತೆಂಗಿನಮರದ ಹಸುರು ಗರಿಗಳ ಮೇಲೆ ಕಾಣುತ್ತಿತ್ತು. ಛಳಿ ಗಾಳಿಯಲ್ಲಿ ನಕ್ಷತ್ರ ನಡುಗುತ್ತಿತ್ತು. ಹಾಗೆಯೇ ಆ ನಕ್ಷತ್ರವನ್ನೇ ನೋಡುತ್ತಾ ನಿಂತಿದ್ದ ಮೂರ್ತಿ. ಮೆಲ್ಲನೆ ಸಾರಿ ಒಂದು ಬಿಳಿಯ ಮೋಡದ ತುಣುಕೊಂದು ನಕ್ಷತ್ರವನ್ನು ಮುಚ್ಚಿತು. ದೂರದ ಚರ್ಚಿನ ಪ್ರಾರ್ಥನಾ ಗಂಟೆಯು ದನಿ ಅಲೆಯಲೆಯಾಗಿ ಗಾಳಿಯಲ್ಲಿ ತೂರಿಬಂತು!

---